# ಕುಂ.ವೀರಭದ್ರಪ್ಪ ಲೇಖಕ–ಅನುವಾದಕ: ಒಂದು ಅಂತರ್‌ಶಿಸ್ತೀಯ ಅಧ್ಯಯನ

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಮಹಾಪ್ರಬಂಧ


ಸಂಶೋಧಕರು
ಕುಸುಮಾದೇವಿ ಕರಿಬಸಪ್ಪ

ಮಾರ್ಗದರ್ಶಕರು
ಡಾ. ಕರೀಗೌಡ ಬೀಚನಹಳ್ಳಿ
ಪ್ರಾಧ್ಯಾಪಕರು







ಭಾಷಾ ನಿಕಾಯ
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೬

# ಕುಂ.ವೀರಭದ್ರಪ್ಪ ಲೇಖಕ–ಅನುವಾದಕ: ಒಂದು ಅಂತರ್‌ಶಿಸ್ತೀಯ ಅಧ್ಯಯನ

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಮಹಾಪ್ರಬಂಧ



ಸಂಶೋಧಕರು
**ಕುಸುಮಾದೇವಿ ಕರಿಬಸಪ್ಪ**

ಮಾರ್ಗದರ್ಶಕರು
**ಡಾ. ಕರೀಗೌಡ ಬೀಚನಹಳ್ಳಿ**
ಪ್ರಾಧ್ಯಾಪಕರು




ಭಾಷಾ ನಿಕಾಯ
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೬

# ಮಾರ್ಗದರ್ಶಕರ ದೃಢೀಕರಣ ಪತ್ರ

**ಶ್ರೀಮತಿ ಕುಸುಮಾದೇವಿ ಕರಿಬಸಪ್ಪ** ಅವರು **"ಕುಂ.ವೀರಭದ್ರಪ್ಪ ಲೇಖಕ–ಅನುವಾದಕ: ಒಂದು ಅಂತರ್‌ಶಿಸ್ತೀಯ ಅಧ್ಯಯನ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಭಾಷಾಂತರ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ದಿನಾಂಕ : 23.11.2016
ಸ್ಥಳ : ವಿದ್ಯಾರಣ್ಯ

**(ಡಾ. ಕರೀಗೌಡ ಬೀಚನಹಳ್ಳಿ)**
ಪ್ರಾಧ್ಯಾಪಕರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪ್ರಮಾಣ ಪತ್ರ

**"ಕುಂ.ವೀರಭದ್ರಪ್ಪ ಲೇಖಕ-ಅನುವಾದಕ: ಒಂದು ಅಂತರ್‌ಶಿಸ್ತೀಯ ಅಧ್ಯಯನ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು **ಡಾ. ಕರೀಗೌಡ ಬೀಚನಹಳ್ಳಿ,** ಪ್ರಾಧ್ಯಾಪಕರು, ಭಾಷಾಂತರ ಅಧ್ಯಯನ ವಿಭಾಗ, ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿ ಇಲ್ಲವೇ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

K Kusumad

ದಿನಾಂಕ : 23.11.2016
ಸ್ಥಳ : ವಿದ್ಯಾರಣ್ಯ

**(ಕುಸುಮಾದೇವಿ ಕರಿಬಸಪ್ಪ)**
ಸಂಶೋಧಕರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ಪರಿವಿಡಿ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಮಹತ್ವ, ವಿಧಾನ, ವ್ಯಾಪ್ತಿ ಹಾಗೂ ಸ್ವರೂಪ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಮಹತ್ವ, ವಿಧಾನ, ವ್ಯಾಪ್ತಿ ಹಾಗೂ ಸ್ವರೂಪ

**ನ**ಮ್ಮ ಇಂದಿನ ಕಥೆಗಳು ಕಲ್ಪಿತವಾಸ್ತವ ಜಾಡಿನ ಕಥೆಗಳು. ಮನುಷ್ಯನ ನಡವಳಿಕೆಗೆ ತುಂಬ ಹತ್ತಿರದಲ್ಲಿರುವುದೇ ಕಥಾಸಾಹಿತ್ಯ ಪ್ರಕಾರ. ಇದು ಮುಖ್ಯವಾಗಿ ಪಾತ್ರ, ಘಟನೆ ಇಲ್ಲವೇ ಭಾವನೆಗಳ ಮೇಲೆ ಆಧಾರಪಟ್ಟಿರುತ್ತದೆ. ಬಹುಮುಖಿ ಬದುಕಿನ ಒಂದು ಕವಲನ್ನು ಮಾತ್ರ ಅದು ತೋರಿಸುತ್ತದೆ. ಬದುಕಿನ ನಿಜಸ್ಥಿತಿ, ಅವಗಾಹನೆ, ಪಾತ್ರಗಳ ಒಳನೋಟ, ಸಾಮಾಜಿಕ ದೃಷ್ಟಿಕೋನ, ಸಾಮಾಜಿಕ ಪ್ರಯೋಜನ, ಒಂದು ಸಿದ್ಧಾಂತ, ಸ್ವಭಾವ, ಸ್ಥಿತಿ, ವ್ಯಕ್ತಿ ಕಂಡುಕೊಂಡ ಅನುಭವಗಳು, ಸಾಮಾಜಿಕ ವಾಸ್ತವತೆ, ಚಳವಳಿ, ಹೋರಾಟಗಳು, ಅಲ್ಲೋಲ ಕಲ್ಲೋಲ ಇವುಗಳ ಪೈಕಿ ಯಾವುದಾದರೊಂದು ಕಥೆಗೆ ವಸ್ತುವಾಗಬಹುದು.

ಕರ್ನಾಟಕ ನಾಡು, ನುಡಿ, ಬರಹದಂತಹ ಸೂಕ್ಷ್ಮ ಹಾಗೂ ಅನಿವಾರ್ಯತೆಯ ಪ್ರಶ್ನೆಗಳು ನಮ್ಮ ಮುಂದೆ ಪ್ರತಿದಿನ ಎದುರಾಗುತ್ತವೆ. ಇಂತಹ ಸಂದರ್ಭದಲ್ಲಿ ಸ್ಥಳೀಯ ಭಾವನೆಯಲ್ಲಿ, ಸೊಗಡಿನಲ್ಲಿ ಬರುವಂತಹ ಬರಹಗಳು ನಮ್ಮನ್ನು ಇನ್ನೂ ಹೆಚ್ಚು ಭಾವನಾತ್ಮಕವಾಗಿ ಚಿಂತನೆಗೆ ತೊಡುಗುವಂತೆ ಮಾಡಿವೆ. ಪ್ರಸ್ತುತ ವ್ಯವಸ್ಥೆಯಲ್ಲಿ ರಾಜ್ಯಗಳ ನಡುವೆ ಗಡಿ, ಜಲ, ಭಾಷೆಯ ವಿಚಾರವಾಗಿ ಸಮಸ್ಯೆಗಳು, ಘರ್ಷಣೆಗಳು ದಿನೇ ದಿನೇ ಹೆಚ್ಚುತ್ತಿರುವ ಸಮಯದಲ್ಲಿ ಕರ್ನಾಟಕ ಮತ್ತು ಆಂಧ್ರ ರಾಜ್ಯಗಳ ಜೀವನ, ಸಂಸ್ಕೃತಿಗಳ ಸಮಸ್ಯೆಗಳ ಸಮ್ಮಿಶ್ರಣದಲ್ಲಿ ಬರುವಂತಹ ಬರಹಗಳು ಹೆಚ್ಚು ಅರ್ಥಪೂರ್ಣವಾಗಿರುತ್ತದೆ. ಇಂತಹ ಹಿನ್ನೆಲೆಯಲ್ಲಿ ಬಹುಸಂಸ್ಕೃತಿಯ ವಿಶ್ವಾತ್ಮಕ ದೃಷ್ಟಿಕೋನದಿಂದ ಸ್ಥಳೀಯ ಸಂಸ್ಕೃತಿಯನ್ನು ಗುರುತಿಸಿ ವಿಶ್ಲೇಷಿಸುವುದು ಬಹುಮುಖ್ಯವಾಗಿದೆ.೧

ಕರ್ನಾಟಕ ಮತ್ತು ಆಂಧ್ರದ ಗಡಿಭಾಗದಲ್ಲಿ ತಮ್ಮ ವೃತ್ತಿಜೀವನದ ಬಹುಭಾಗವನ್ನು ಕಳೆದಿರುವ ಕುಂ.ವೀರಭದ್ರಪ್ಪನವರ ಬರಹಗಳು ಅತ್ಯಂತ ವೈವಿಧ್ಯತೆ ಮತ್ತು ವೈಶಿಷ್ಟ್ಯತೆಯಿಂದ ಕೂಡಿವೆ. ಆ ಭಾಗದ ಜನರ ಜೀವನವಿಧಾನ, ಬದುಕಿನ ರೀತಿ–ನೀತಿಗಳು, ಸಾಮರಸ್ಯ, ಪರಸ್ಪರ ಕೊಡುಕೊಳ್ಳುವಿಕೆ (ಸಾಂಸ್ಕೃತಿಕ ವಿನಿಮಯ) ಮೂಲಕ ಸಾಮರಸ್ಯ ಬೆಳೆಸಲು ಇಂತಹ ಗಡಿಭಾಗದ ಲೇಖಕರ ಕೃತಿಗಳ ಅಧ್ಯಯನ ಅರ್ಥಪೂರ್ಣ ಎನ್ನಿಸುತ್ತವೆ.

## ೧.೧. ಅಧ್ಯಯನದ ಉದ್ದೇಶ

ಬಳ್ಳಾರಿಯು ಹೈದರಾಬಾದ್ ಕರ್ನಾಟಕದ ಒಂದು ಭಾಗವಾಗಿದೆ. ಹೈದರಾಬಾದ್ ಕರ್ನಾಟಕ ಪ್ರದೇಶವು ಇತ್ತೀಚೆಗೆ ಅತ್ಯಂತ ಹೆಚ್ಚು ಚರ್ಚೆಗೆ, ಗಂಭೀರವಾದ ಚಿಂತನೆಗೆ, ಪ್ರಾದೇಶಿಕ ಅಸಮಾನತೆಗೆ ಒಳಗಾಗಿರುವ ಪ್ರದೇಶವಾಗಿದೆ. ಹಾಗೆಯೇ ಕರ್ನಾಟಕದ ಅತ್ಯಂತ ಹಿಂದುಳಿದಿರುವ ಪ್ರದೇಶವೆಂಬ ಹಣೆಪಟ್ಟಿಯನ್ನು ಕಟ್ಟಿಕೊಂಡಿದೆ. ದುಡಿಯುವ ವರ್ಗ ಉದ್ಯೋಗ ಅರಸಿ ವಲಸೆ ಹೋಗುತ್ತಿದ್ದಾರೆ. ಈ ಪ್ರದೇಶದಲ್ಲಿ ಸಾಕ್ಷರತಾ ಪ್ರಮಾಣ ಕಡಿಮೆಯಾಗಲು ಕಾರಣವೇನು? ಈ ಪ್ರದೇಶ ಹಿಂದುಳಿಯಲು ಕಾರಣಗಳೇನು ಎನ್ನುವುದನ್ನು ಕುಂ.ವೀ. ಅವರ ಕತೆಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸುವುದು ನನ್ನ ಅಧ್ಯಯನದ ಉದ್ದೇಶವಾಗಿದೆ. ಭಾರತದ ಸಾಮಾಜಿಕ, ರಾಜಕೀಯ, ಆರ್ಥಿಕ ವ್ಯವಸ್ಥೆಯು ಜಾಗತೀಕರಣ, ಉದಾರೀಕರಣ, ಖಾಸಗೀಕರಣ ಮುಂತಾದವುಗಳ ಮೂಲಕ ನವವಸಾಹತು ಶಾಹಿಯ ಕಡೆ ಚಲಿಸುತ್ತಿದೆ. ಜನರು ಪಾಶ್ಚಾತ್ಯ ಜಗತ್ತಿನ ಮಾದರಿಗಳನ್ನು ತೆರೆದ ಬಾಹುಗಳಿಂದ ಸ್ವೀಕರಿಸುತ್ತಿದ್ದಾರೆ. ಬಂಡಾಯದ ಲೇಖಕರಾದ ಕುಂ.ವೀ. ಅವರು ಅದಕ್ಕೆ ಪ್ರತಿರೋಧವಾಗಿ ಪ್ರತಿಭಟನಾತ್ಮಕವಾಗಿ ದೇಸಿ ಚಿಂತನೆಯ ಕಡೆ ಹೊರಳಿರುವುದನ್ನು ನಾವು ನೋಡಬಹುದಾಗಿದೆ. ಉಪಸಂಸ್ಕೃತಿಗಳ ಚಿತ್ರಣ ಅದರ ಬದುಕಿನ ವಿಧಾನಗಳ ಕುರಿತು ಅವರು ತೋರುವ ಆಸ್ಥೆ ಅನನ್ಯವಾದದ್ದು, ಪ್ರಸ್ತುತ ಅಧ್ಯಯನದಲ್ಲಿ ಅವರು ಕಟ್ಟಿಕೊಡುವ ದೇಸಿ ಚಿಂತನೆಗಳನ್ನು ಗುರುತಿಸುವುದು, ಪ್ರಾದೇಶಿಕತೆಯನ್ನು ಗುರುತಿಸುವುದು ಹಾಗೂ ವಸ್ತು ಭಾಷೆಯ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವುದು ಮುಖ್ಯವಾಗಿದೆ.

ಇದುವರೆಗೆ ಕುಂ.ವೀ. ಅವರ ಸಣ್ಣಕಥೆ ಮತ್ತು ಕಾದಂಬರಿಗಳ ಮೇಲೆ ಕೆಲವು ಅಧ್ಯಯನಗಳು ನಡೆದಿವೆ. ಆದರೆ ಅವರ ಅನುವಾದ ಸಾಹಿತ್ಯದ ಮೇಲೆ ಅಧ್ಯಯನಗಳು ನಡೆದಿಲ್ಲ. ಈ ದೃಷ್ಟಿಯಿಂದ ಕುಂ.ವೀ. ಅವರ ಸೃಜನಶೀಲ ಸಾಹಿತ್ಯ ಮತ್ತು ತೆಲುಗಿನಿಂದ ಕನ್ನಡಕ್ಕೆ ಅನುವಾದ ಗೊಂಡ ಸಣ್ಣಕತೆಗಳ ಸಾಹಿತ್ಯದಲ್ಲಿ ಪರಸ್ಪರ ಅಂತರ್ ಸಾಂಸ್ಕೃತಿಕ ಸಂಬಂಧಗಳ ನೆಲೆಗಳನ್ನು ಗುರುತಿಸುವುದಾಗಿದೆ.

ಈ ಮಹಾಪ್ರಬಂಧದ ಅಧ್ಯಯನದ ಉದ್ದೇಶವನ್ನು ಬೇರೆ ಅಧ್ಯಯನಗಳಿಗಿಂತ ವಿಭಿನ್ನವಾಗಿಸಲು ಪ್ರಯತ್ನಿಸಲಾಗಿದೆ. ಏಕೆಂದರೆ ಈ ಅಧ್ಯಯನ ಕೇವಲ ಕೃತಿಗಳ, ಆಕರಗಳ ಅಧ್ಯಯನ ಅಥವಾ ವಿಶ್ಲೇಷಣೆ ಆಗಿರದೆ, ಕೃತಿಕಾರರ ಸ್ವಂತ ಅನುಭವಗಳ, ಹುಟ್ಟಿಬೆಳೆದ ಪರಿಸರದ ನೈಜಚಿತ್ರಣ ಹಾಗೂ ಅಸಹಾಯಕತೆ, ನೋವುಗಳನ್ನು ಹೊರಹಾಕುವಂತಹ ಇವರ ಬರಹಗಳ ಅಧ್ಯಯನದ ವೈಶಿಷ್ಟ್ಯತೆಯಾಗಿದೆ. ಇಂತಹ ಪ್ರಯತ್ನದ ಅಧ್ಯಯನ ಈ ಮಹಾಪ್ರಬಂಧದ ಉದ್ದೇಶವಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಮಾನವಶಾಸ್ತ್ರ ಹಾಗೂ ಸಮಾಜಶಾಸ್ತ್ರೀಯ ಹಿನ್ನೆಲೆಯಿಂದ ಸಮಾಜದ ಬದುಕನ್ನು ಅರ್ಥ ಮಾಡಿಕೊಂಡು ಬರೆದಾಗಲೇ ಬರಹಕ್ಕೆ ಅರ್ಥ ಬರುವುದು ಎಂಬ ಲೇಖಕರ ನಿಲುವಿಗೆ ತಕ್ಕಂತೆ ಈ ಮಹಾಪ್ರಬಂಧದ ಸೃಜನಶೀಲ ಸಾಹಿತ್ಯದ ವಿಶ್ಲೇಷಣೆ ಮಾಡುವುದು ಉದ್ದೇಶವಾಗಿದೆ. ಹಾಗೆಯೇ ವಿವಿಧ ಜ್ಞಾನಶಿಸ್ತುಗಳಿಂದ ಇವರ ಕೃತಿಗಳನ್ನು ಅಧ್ಯಯನ ಮಾಡುವುದು ಸಹ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸಣ್ಣಕಥಾ ಸಾಹಿತ್ಯಕ್ಷೇತ್ರಕ್ಕೆ ಇರುವ ಸ್ಥಾನ ಅಪೂರ್ವವಾದದು. ಸಮಕಾಲೀನ ಸಾಹಿತ್ಯಕ್ಷೇತ್ರದಲ್ಲಿ ಅತ್ಯಂತ ವಿಸ್ತಾರವೂ ಮಹತ್ವವೂ ಆದ ಸಾಹಿತ್ಯ ಪ್ರಕಾರ ಇದಾಗಿದೆ. ಇದು ಆಧುನಿಕ ಕನ್ನಡ ಸಾಹಿತ್ಯದಲ್ಲಿಯೇ ಸತ್ವಶಾಲಿಯೂ ವೈವಿಧ್ಯಮಯವೂ ಆದ ಅಭಿವ್ಯಕ್ತಿ ಪ್ರಕಾರವಾಗಿದೆ. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಸೃಷ್ಟಿಯಾದ ಸಣ್ಣಕಥೆಗಳು ಅದ್ಭುತವಾದ ಯಶಸ್ಸನ್ನು ಸಾಧಿಸಿವೆ. ಪ್ರಸ್ತುತ ಅಧ್ಯಯನದಲ್ಲಿ ಕುಂ.ವೀ. ಅವರ ಕತೆಗಳಲ್ಲಿನ ಹೊಸ ಪ್ರಯೋಗಗಳು ಹಾಗೂ ಪ್ರವೃತ್ತಿಗಳನ್ನು ಸಾಂಸ್ಕೃತಿಕ ಅಧ್ಯಯನ ಮಾಡುವುದು ಅತ್ಯಗತ್ಯವಾಗಿದೆ. ಕುಂ.ವೀ. ಅವರ ಕತೆಗಳ ಬೆಳವಣಿಗೆ, ಧೋರಣೆ, ವೈಚಾರಿಕತೆ, ಸಾಮಾಜಿಕತೆ, ಕಲಾತ್ಮಕತೆ, ಸಾಂಸ್ಕೃತಿಕ ಪ್ರಯೋಗಶೀಲತೆಯನ್ನು ಗಮನಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

### ೧.೨. ಅಧ್ಯಯನದ ಮಹತ್ವ

ಕುಂ.ವೀ. ಅವರ ಬಹುಪಾಲು ಕತೆಗಳು ಗ್ರಾಮೀಣ ಹಿನ್ನೆಲೆಯಲ್ಲಿ ಬಂದಂತವುಗಳಾಗಿವೆ. ಅವರು ಕಟ್ಟಿಕೊಡುವ ಗ್ರಾಮೀಣ ಪರಿಸರ ಅನನ್ಯವೂ ಅದ್ಭುತವೂ ಆಗಿದೆ. ಇವರ ಕತೆಗಳಲ್ಲಿ ಬರುವ ಅಲ್ಪಸಂಖ್ಯಾತರು, ಶೋಷಣೆಗೆ ಒಳಗಾದ ಬಡಜನತೆ, ಅಲಕ್ಷಿತ ಸಮುದಾಯಗಳು ಇವತ್ತಿನ ಮಾನವಿಕಶಾಸ್ತ್ರಗಳ ಅಧ್ಯಯನದ ಮೇಲೆ ಬೆಳಕು ಚೆಲ್ಲುತ್ತಿವೆ. ಈ ದೃಷ್ಟಿಯಿಂದ ಇವರ ಕತೆಗಳ ಅಧ್ಯಯನ ಮಹತ್ವಪೂರ್ಣವಾಗಿದೆ. ಮನುಷ್ಯರು ಏಕೆ ಸಂಘರ್ಷಕ್ಕೆ ಇಳಿಯುತ್ತಾರೆ ಸಂಘರ್ಷಕ್ಕೆ ಕಾರಣಗಳೇನು? ಹಸಿವೆಯೇ, ಬಡತನವೇ, ಲೈಂಗಿಕತೆಯೇ, ಜಾತಿಯೇ, ಯಾವ

ಕಾರಣಕ್ಕೆ ಶೋಷಣೆಗೆ ಒಳಗಾದ ಜನರು ಬಂಡಾಯವೇಳುತ್ತಾರೆ ಎಂಬುದನ್ನು ಸಾಮಾಜಿಕ ಸಂಘರ್ಷಗಳನ್ನು ತಿಳಿದುಕೊಳ್ಳುವುದರ ಮೂಲಕ ಸಮಸಮಾಜ ನಿರ್ಮಾಣಕ್ಕೆ ಸರ್ಕಾರಗಳು ಯಾವ ರೀತಿಯ ಸುಧಾರಣೆಗಳನ್ನು ತರಬಹುದು ಎನ್ನುವ ಅಧ್ಯಯನಕ್ಕೆ ಇವರ ಕತೆಗಳು ಮಹತ್ವಪೂರ್ಣ ಮಾಹಿತಿಯನ್ನು ಒದಗಿಸುತ್ತವೆ. ಈ ದೃಷ್ಟಿಯಿಂದ ಈ ಅಧ್ಯಯನವು ಮಹತ್ವದ್ದಾಗಿದೆ.

ಗದ್ಯ ಸಾಹಿತ್ಯವು ಇಪ್ಪತ್ತನೆಯ ಶತಮಾನದಲ್ಲಿ ಶಕ್ತಿಶಾಲಿಯಾಗಿ ಬೆಳೆದಿದೆ. ತೃತೀಯ ಜಗತ್ತಿನ ಅಲಕ್ಷಿತ ಸಮುದಾಯಗಳೆಲ್ಲವೂ ತನ್ನನ್ನು ಪುನರ್ ರೂಪಿಸಿಕೊಳ್ಳುತ್ತಿರುವುದು ಈ ಗದ್ಯದಿಂದಲೇ. ಗದ್ಯವು ಒಂದು ದೇಶದ ನಿಜವಾದ ಅಂತರಂಗವನ್ನು ಬಿಚ್ಚಿಡುವಂತೆಯೇ ಆ ಭಾಷೆಯ ಅರಿವನ್ನು ಆ ಸಂಸ್ಕೃತಿಯ ಫಲವಂತಿಕೆಯನ್ನು ಬಿಂಬಿಸುವಂತಾಗುತ್ತದೆ. ದಲಿತ ಸಮುದಾಯಗಳ ಇವತ್ತಿನ ಈ ಶತಮಾನದ ಪಲ್ಲಟಗಳಲ್ಲಿ ಗದ್ಯದ ಪಾತ್ರ ಹಿಂದೆಂದಿಗಿಂತಲೂ ಈಗ ಮುಖ್ಯವಾಹಿನಿಯಾಗಿ ಬೆಳೆಯುತ್ತಿದೆ. ಕುಂ.ವೀ. ಅವರ ಕಥೆ, ಕಾದಂಬರಿಗಳ ಹಿನ್ನೆಲೆಯಲ್ಲಿ ಅವರ ಗದ್ಯ ಸಾಹಿತ್ಯದ ವೈಶಿಷ್ಟ್ಯತೆಯನ್ನು ಅಧ್ಯಯನ ಮಾಡುವುದು ಮಹತ್ವದ್ದಾಗಿದೆ.

### ೧.೩. ಅಧ್ಯಯನದ ವಿಧಾನ

ಇದುವರೆಗೆ ಕುಂ.ವೀ. ಅವರ ಸೃಜನಶೀಲ ಸಾಹಿತ್ಯದ ಮೇಲೆ ಕೆಲವು ಅಧ್ಯಯನಗಳು ನಡೆದಿವೆ. ಆದರೆ ಕುಂ.ವೀ. ಅವರ ಅನುವಾದ ಸಾಹಿತ್ಯದ ಮೇಲೆ ಅಧ್ಯಯನಗಳು ನಡೆದಿಲ್ಲ. ಆದ್ದರಿಂದ ಈ ಅಧ್ಯಯನದಲ್ಲಿ ಈ ಎರಡು ಸಾಹಿತ್ಯದಲ್ಲಿ ಬರುವ ಜಮೀನ್ದಾರಿ ಪದ್ಧತಿ ರೈತರು ಭೂಮಿಗಾಗಿ ನಡೆಸುವ ಹೋರಾಟಗಳ ಹಾಗೂ ಎರಡು ಸಾಹಿತ್ಯದಲ್ಲೂ ಶೋಷಣೆ ಒಳಗಾದ ಜನಪ್ರತಿಭಟಿಸುವ, ಹೋರಾಡುವ ವಿಧಾನಗಳನ್ನು ಇದುವರೆಗೆ ಬಂದ ಅವರ ಸಾಹಿತ್ಯದ ವಿಮರ್ಶೆಗಳ ಹಿನ್ನೆಲೆಯಲ್ಲಿ ಹಾಗೂ ಅವರ ಕಥೆಗಳ ಹಿನ್ನೆಲೆಯಲ್ಲಿ ಅರ್ಥೈಸುವ ವಿಧಾನವನ್ನು ಅಧ್ಯಯನ ಒಳಗೊಂಡಿದೆ.

ಕರ್ನಾಟಕ ಮತ್ತು ಆಂಧ್ರದ ಗಡಿಭಾಗದ ಜಿಲ್ಲೆಗಳಲ್ಲಿ ತಮ್ಮ ವೃತ್ತಿಬದುಕನ್ನು ಲೇಖಕರು ಕಳೆದಿರುವುದರಿಂದ ಇವರ ಬಹುಪಾಲು ಕತೆಗಳಲ್ಲಿ ಕೆಳವರ್ಗದ ಬದುಕಿನ ಸ್ಥಿತಿಗತಿಗಳನ್ನು ಚಿತ್ರಿಸುವುದು ಅವರ ಪ್ರಧಾನ ಆಶಯವಾಗಿದೆ. ಶೂದ್ರಜಗತ್ತಿನ ವಿವಿಧ ಮುಖಗಳನ್ನು ತಮ್ಮ ಕತೆಗಳಲ್ಲಿ ಅನಾವರಣಗೊಳಿಸಿದ್ದಾರೆ. ಆ ಜನಾಂಗಕ್ಕೆ ಹತ್ತಿರವಾದ ಭಾಷೆಯ ನುಡಿಗಟ್ಟುಗಳಲ್ಲಿ ಕತೆ, ಕಾದಂಬರಿಗಳನ್ನು ಕಟ್ಟಿಕೊಟ್ಟಿದ್ದಾರೆ. ಈ ಹಿನ್ನೆಲೆಯಲ್ಲಿ ಇವರ ಗದ್ಯವನ್ನು ವಿಶ್ಲೇಷಣೆಗೆ ಒಳಪಡಿಸುವ ಅಧ್ಯಯನವನ್ನು ಮಾಡಲಾಗಿದೆ. ಇವರು ಸೃಷ್ಟಿಸುವ ಪಾತ್ರಗಳು ಶೋಷಕ ಶಕ್ತಿಗಳ ವಿರುದ್ಧ ಒಂದು ಸಂಘಟಿತ ಅಸ್ತ್ರವಾಗಬಲ್ಲವು. ಇವರ ಬರವಣಿಗೆಯ ಪ್ರಮುಖ

ಆಶಯ ಈ ಶೂದ್ರಶಕ್ತಿಯ ಅನಾವರಣವೇ ಆಗಿದೆ. ಅಂತಹ ಭಾಷೆಯನ್ನು ಇಲ್ಲಿ ಹೆಚ್ಚು ವಿಶ್ಲೇಷಣೆಗೆ ಒಳಪಡಿಸುವುದರ ಮೂಲಕ ಕುಂ.ವೀ. ಅವರ ಗದ್ಯದ ಮಹತ್ವವನ್ನು ತಿಳಿಸಲಾಗಿದೆ. ಬಂಡಾಯದ ಕತೆಗಳಲ್ಲಿ ಅಸ್ಪೃಶ್ಯರ ಜಗತ್ತು ಮಾಡುವ ದಿಟ್ಟ ಹೋರಾಟದಲ್ಲಿ ಶಿಷ್ಟ ಸಂಸ್ಕೃತಿಯನ್ನು ಧಿಕ್ಕರಿಸುವ ದನಿಯಿರುತ್ತದೆ. ಈ ದೃಷ್ಟಿಯಿಂದ ಕುಂ.ವೀ. ಅವರ ಕತೆಗಳನ್ನು ವಿಶ್ಲೇಷಣಾತ್ಮಕವಾಗಿ ವಿವರಿಸಲಾಗಿದೆ.

**೧.೪. ಅಧ್ಯಯನದ ವ್ಯಾಪ್ತಿ**

ಕುಂ.ವೀ. ಅವರ ಸಾಹಿತ್ಯದ ಮೇಲೆ ಇದುವರೆಗೂ ನಡೆದಿರುವ ಅಧ್ಯಯನಗಳು ಅವರ ಸೃಜನಶೀಲ ಸಾಹಿತ್ಯವನ್ನು ಮಾತ್ರ ಒಳಗೊಂಡಂತಹವಾಗಿವೆ. ಆದರೆ ಈ ಅಧ್ಯಯನದಲ್ಲಿ ಅವರ ಸೃಜನಶೀಲ ಸಾಹಿತ್ಯ ಹಾಗೂ ಅವರು ತೆಲುಗಿನಿಂದ ಕನ್ನಡಕ್ಕೆ ಅನುವಾದ ಮಾಡಿರುವ ನಾಲ್ಕು ಕಥಾಸಂಕಲನಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಅವರ ಎಲ್ಲಾ ಸೃಜನಶೀಲ ಬರವಣಿಗೆಯನ್ನು ತೆಗೆದುಕೊಳ್ಳದೆ ವಸ್ತು, ಭಾಷೆ ಮತ್ತು ತಂತ್ರದ ದೃಷ್ಟಿಯಿಂದ ಮುಖ್ಯವೆನಿಸುವ ಪ್ರಾತಿನಿಧಿಕ ಕತೆಗಳನ್ನು ಮಾತ್ರ ಇಲ್ಲಿ ಆಯ್ದುಕೊಳ್ಳಲಾಗಿದೆ. ಕುಂ.ವೀ. ಅವರು ಕಾದಂಬರಿಗಳ ರಚನೆಗಳಲ್ಲಿ ಅನೇಕ ಪ್ರಯೋಗಗಳನ್ನು ಮಾಡಿದ್ದಾರೆ. ಇಂತಹ ವಿಶ್ಲೇಷಣೆಯಿರುವ ಹಾಗೂ ಕಾದಂಬರಿ ವಸ್ತುವಿನಲ್ಲಿ ವೈಶಿಷ್ಟ್ಯತೆ ಇರುವ ಐದು ಕಾದಂಬರಿಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

**೧.೫. ಅಧ್ಯಯನದ ಸ್ವರೂಪ**

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ವಿಧಾನ ಮತ್ತು ಇದುವರೆಗಿನ ಅಧ್ಯಯನಗಳ ಸಮೀಕ್ಷೆಯನ್ನು ನೀಡಲಾಗಿದೆ.

**ಅಧ್ಯಾಯ ಎರಡು: ಕುಂ.ವೀರಭದ್ರಪ್ಪ ಅವರ ಜೀವನ**

ಈ ಅಧ್ಯಾಯದಲ್ಲಿ ಕುಂ.ವೀ. ಅವರನ್ನು ಲೇಖಕರನ್ನಾಗಿ ರೂಪಿಸಿದ ಬಾಲ್ಯಜೀವನ, ಶೈಕ್ಷಣಿಕ ಜೀವನ, ವೃತ್ತಿಜೀವನ, ಕೌಟುಂಬಿಕ ಜೀವನದ ಪರಿಚಯವನ್ನು ಕಾಣಬಹುದಾಗಿದೆ.

**ಅಧ್ಯಾಯ ಮೂರು: ಕುಂ.ವೀರಭದ್ರಪ್ಪನವರ ಸಾಹಿತ್ಯ: ಪ್ರೇರಣೆ, ಪ್ರಭಾವ ಮತ್ತು ಪರಿಸರ**

ಈ ಅಧ್ಯಾಯನದಲ್ಲಿ ಕುಂ.ವೀರಭದ್ರಪ್ಪನವರಿಗೆ ಪ್ರಭಾವ ಬೀರಿದ ಕಥೆಗಾರರು, ೧೯೭೩ರ ನಂತರ ಕರ್ನಾಟಕ ರಾಜಕೀಯ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿ ಆದ ಬದಲಾವಣೆಗಳ ದಲಿತ ಬಂಡಾಯ ಸಾಹಿತ್ಯದ ಪ್ರಭಾವಗಳು, ವಿಚಾರವಾದಗಳ ಪ್ರಭಾವಗಳು, ಅಂಬೇಡ್ಕರ್, ಲೋಹಿಯಾ, ಗಾಂಧಿ, ಮಾರ್ಕ್ಸ್ ಇವರ ಸಿದ್ಧಾಂತಗಳ ಪ್ರಭಾವದ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

ತೆಲುಗು ವಿಪ್ಲವ ಸಾಹಿತ್ಯ, ಕರ್ನಾಟಕ ಮತ್ತು ಆಂಧ್ರದ ಗಡಿಭಾಗಗಳ ಪರಿಸರ ಪ್ರಭಾವ ಕರ್ನಾಟಕದಲ್ಲಿ ನಡೆದ ಎಲ್ಲಾ ಸಾಮಾಜಿಕ ಸಾಂಸ್ಕೃತಿಕ ಸಾಹಿತ್ಯದ ಚಳುವಳಿಗಳು ಇವರ ಸಾಹಿತ್ಯಕ್ಕೆ ಹೇಗೆಲ್ಲಾ ಪ್ರೇರಣೆ ಪ್ರಭಾವ ಬೀರಿವೆ ಎಂದು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

**ಅಧ್ಯಾಯ ನಾಲ್ಕು: ಕುಂ.ವೀರಭದ್ರಪ್ಪ: ಲೇಖಕ**

ಕುಂ.ವೀ. ಅವರಿಗೆ ಗ್ರಾಮೀಣ ಭಾಗದ ಜನರ ಬಗ್ಗೆ ಅಪಾರ ಒಲವು. ಅವರ ಬಹುಪಾಲು ಕತೆಗಳು ಗ್ರಾಮೀಣ ಜೀವನದ ಹಿನ್ನೆಲೆಯಲ್ಲಿ ಬಂದಂತಹವೇ ಆಗಿವೆ. ಗ್ರಾಮೀಣ ಭಾರತದ ಜನರ ಜೀವನದ ಸ್ಥಿತಿಗತಿಗಳನ್ನು ತಿಳಿಸುತ್ತಾ ಬದುಕಿಗಾಗಿ ಅವರು ನಡೆಸುವ ಹೋರಾಟದ ಚಿತ್ರಣವೇ ಅವರ ಬಹುಪಾಲು ಕಥೆಗಳ ಜೀವಾಳ. ಸಮಾಜದಲ್ಲಿನ ಅಸಮಾನತೆಯನ್ನು, ದೌರ್ಜನ್ಯ, ದಬ್ಬಾಳಿಕೆಯನ್ನು ಹೋಗಲಾಡಿಸಿ ಸಮಸಮಾಜದ ನಿರ್ಮಾಣಕ್ಕೆ ಪ್ರಯತ್ನಿಸುವ, ಆ ಮೂಲಕ ಸಮಾಜವನ್ನು ಬದಲಾಯಿಸಲು ಒತ್ತಾಯಿಸುವ ಅವರ ನಿಲುವನ್ನು ಅವರ ಕಥೆಗಳ ಮೂಲಕ ಈ ಕೆಳಗೆ ಸೂಚಿಸಿದ ಆಯಾಮಗಳಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

೧. ಕೆಳಸಮುದಾಯಗಳ ಹಸಿವಿನ ಹೋರಾಟದ ಕಥೆಗಳು

೨. ಆಂಧ್ರಪ್ರದೇಶದ ಜಮೀನ್ದಾರಿ ವ್ಯವಸ್ಥೆಯನ್ನು ಕುರಿತ ಕಥೆಗಳು

೩. ಶೋಷಣೆ ಹಾಗೂ ಅಮಾನವೀಯತೆಯ ಕಥೆಗಳು

೪. ಭಾಷಾವಿಮುಖತೆಯ ಕಥೆಗಳು

೫. ಸ್ತ್ರೀ ಸಂವೇದನೆ ಉಳ್ಳಂಥ ಕಥೆಗಳು

೬. ಶಾಮಣ್ಣ – ಪರಂಪರೆ ಮತ್ತು ಆಧುನಿಕತೆಯ ಮುಖಾಮುಖಿ

೭. ಯಾಪಿಲ್ಲು – ಇಂಗ್ಲಿಷ್ ಶಿಕ್ಷಣಕ್ರಮದಿಂದಾಗುವ ಸಾಂಸ್ಕೃತಿಕ ಅನಾಹುತಗಳ ಕಥಾನಕ

೮. ಅರಮನೆ–ರಾಜಸತ್ತೆ, ಬ್ರಿಟಿಷ್ ಪ್ರಭುತ್ವ ಮತ್ತು ಜನಸತ್ತೆಯ ಮುಖಾಮುಖಿ

೯. ಹೇಮರೆಡ್ಡಿ ಮಲ್ಲಮ್ಮ–ದುಃಸ್ವಪ್ನಗಳ ಪರಿಸೆ.

೧೦. ನಿಜಲಿಂಗ–ಚೋರ ಕಲೆಯ ನೀತಿ ಕೋಶವಾಗಿ.

ಅತ್ಯತ್ತಮ ಸಾಹಿತ್ಯ ಕೃತಿಯೊಂದು ತನ್ನ ಕಾಲದ ಅತ್ಯುತ್ತಮ ಮಾನವೀಯ ಮೌಲ್ಯಗಳೊಡನೆ ಸಜೀವ ಸಂಬಂಧವನ್ನು ಇಟ್ಟುಕೊಂಡಿರುತ್ತದೆ. ಸಮಾಜಶಾಸ್ತ್ರೀಯ ದೃಷ್ಟಿಯಿಂದ ಕುಂ.ವೀ. ಅವರ ಸಾಹಿತ್ಯವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಪ್ರತಿಭಟನೆಯ ಸಾಹಿತ್ಯಕ್ಕೆ ಸಾಮಾಜಿಕ ವ್ಯವಸ್ಥೆಯನ್ನು ಆಮೂಲಾಗ್ರವಾಗಿ ಬದಲಾಯಿಸುವ ಕಳಕಳಿ ಇರುತ್ತದೆ. ಈ ಹಿನ್ನೆಲೆಯಲ್ಲಿ ಈ ಕಥೆಗಳ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಕುಂ.ವೀ. ಅವರ ಕಥೆ ಕಾದಂಬರಿಗಳನ್ನು ಕುರಿತು ಅಧ್ಯಯನ ಮಾಡುವಾಗ ಅವರ ಕಥಾ ಸಾಹಿತ್ಯದ ವಸ್ತು, ತಂತ್ರ ಮತ್ತು ಭಾಷೆಯನ್ನು ಕುರಿತು ವಿಶ್ಲೇಷಿಸಬೇಕಾದ್ದು ಅಗತ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಇವರ ಕಥಾಸ್ವರೂಪವನ್ನು ಮೂರು ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

೧. ಭಾಷೆ, ಶೈಲಿ, ತಂತ್ರ.

೨. ಕಥೆ ಮತ್ತು ಕಥಾವಸ್ತು.

೩. ದೇಸಿ ಸಂವೇದನೆಯ ಸಮಗ್ರ ಗ್ರಹಿಕೆ.

ಕುಂ.ವೀರಭದ್ರಪ್ಪನವರು ಕರ್ನಾಟಕ ಮತ್ತು ಆಂಧ್ರದ ಗಡಿಭಾಗದ ಹಳ್ಳಿಗಳಲ್ಲಿ ತಮ್ಮ ವೃತ್ತಿಬದುಕನ್ನು ಕಳೆದಿರುವುದರಿಂದ ಅವರ ಬಹುಪಾಲು ಕಥಾವಸ್ತುಗಳು ಆಂಧ್ರದ ಜಮೀನ್ದಾರಿ ಪದ್ಧತಿಯ ಹಿನ್ನೆಲೆಯಲ್ಲಿ ಮೂಡಿಬಂದಂತಹವಾಗಿವೆ. ಹೈದರಾಬಾದ್ ಕರ್ನಾಟಕದ ಊಳಿಗಮಾನ್ಯ ಪದ್ಧತಿ ನವಾಬರ ಆಳ್ವಿಕೆಯು ಸೇರಿ ನಿರ್ಮಿಸಿದ ದಯನೀಯ ಸ್ತ್ರೀಜಗತ್ತಿನ ಚಿತ್ರಣದ ಜೊತೆಗೆ ಹೆಣ್ಣನ್ನು ಜೀವಶಕ್ತಿಯ ಸೆಲೆಯಾಗಿ, ಪ್ರತಿಭಟನೆಯ ಮೂರ್ತಿಯಾಗಿ ಕಾಣಿಸಿರುವುದನ್ನು ಇವರ ಕಥೆಗಳಲ್ಲಿ ಕಾಣಬಹುದಾಗಿದೆ. ಯಾವಾಗಲೂ ಹೆಣ್ಣನ್ನು ತೋಳಗಳ ನಡುವಿನ ಕುರಿಮರಿಯಂತೆ ಕೇವಲ ಅನುಭವಿಸುವ ವಸ್ತುವಾಗಿರುವ ಸಾಮಾಜಿಕ ಮನೋಧರ್ಮದ ಬದಲಾಗಿ ಲೈಂಗಿಕ ಸ್ವಾತಂತ್ರ್ಯದ ಅಸೀಮ ಧೈರ್ಯವನ್ನು ತೋರುವ ಚಿತ್ರಣ ಪತನಮುಖಿ ಸಮಾಜವನ್ನು ತಿರಸ್ಕರಿಸಿ ಪ್ರತಿಸಂಸ್ಕೃತಿಯನ್ನು ನಿರ್ಮಾಣ ಮಾಡುವ ವಿಧಾನವಾಗಿದೆ. ಈ ಹಿನ್ನೆಲೆಯಲ್ಲಿ ಈ ಅಧ್ಯಯನವು ಮಹತ್ವಪೂರ್ಣವಾಗಿದೆ.

**ಅಧ್ಯಾಯ ಐದು: ಕುಂ. ವೀರಭದ್ರಪ್ಪ: ಅನುವಾದಕ**

ಅನುವಾದಕರೆಂದರೆ ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ತರ್ಜುಮೆ ಮಾಡುವವರು ಮಾತ್ರ ಅಲ್ಲ. ಒಂದು ಸಾಂಸ್ಕೃತಿಕ ಪರಿಸರವನ್ನು ಮತ್ತೊಂದು ಕಾಲಘಟ್ಟ ಪರಿಸರದ ಹಿನ್ನೆಲೆಯಲ್ಲಿ ಪರಿಚಯಿಸುವವರು ಎಂದು ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಈ ಅನುವಾದದ ಜಗತ್ತಿನಲ್ಲಿ ಯಾವುದೂ ಸ್ಥಳೀಯವಾಗಿರಲು ಸಾಧ್ಯವಿಲ್ಲ. ನಮ್ಮದು ನಮಗೆ ಮಾತ್ರ ಎಂಬ ಸಂಕುಚಿತ ಭಾವನೆ ಇರುವುದಕ್ಕೆ ಸಾಧ್ಯವಿಲ್ಲ. ಅನುವಾದಕ ಒಂದು ದಡದಿಂದ ಇನ್ನೊಂದು ದಡಕ್ಕೆ ಸೇರಿಸುವ ನಾವಿಕ ಇದ್ದಂತೆ. ಈ ಹಿನ್ನೆಲೆಯಲ್ಲಿ (ಕುಂ.ವೀ. ಅವರ ತೆಲುಗು ಅನುವಾದ ಸಾಹಿತ್ಯವನ್ನು ~~ಈ ವಿಧಾನ~~ದಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.)

ಕುಂ.ವೀ. ಅವರ ಅನುವಾದ ಸಾಹಿತ್ಯ ಇವರದು ಬಹುಮುಖ ಪ್ರತಿಭೆ. ಹಿಂದಿ, ತೆಲುಗು ಭಾಷೆಗಳಿಂದ ಇವರು ಅನುವಾದ ಮಾಡಿದ್ದಾರೆ. ಹಾಗೆಯೇ ಅಲ್ಲಿಯ ಕತೆಗಳನ್ನು ಕನ್ನಡಕ್ಕೆ ತಂದಿದ್ದಾರೆ. ತೆಲುಗಿನ ಅನುವಾದ ಕೃತಿಗಳಾದ ೧. **ಒಂದು ಪೀಳಿಗೆಯ ತೆಲುಗು ಕತೆಗಳು,**

**೨. ತೆಲುಗು ಕತೆಗಳು, ೩. ಚಿನ್ನದ ತೆನೆ, ೪. ತನ್ನಮಾರ್ಗ–** ಈ ಕೃತಿಗಳನ್ನು ಈ ಅಧ್ಯಯನದಲ್ಲಿ ಮುಂದೆ ವಿವರವಾಗಿ ತಿಳಿಸಿರುವುದರಿಂದ ಇಲ್ಲಿ ಇವುಗಳ ವಿವರಣೆ ಕೊಟ್ಟಿಲ್ಲ. ಅನುವಾದ ಕ್ಷೇತ್ರದಲ್ಲಿಯೂ ಒಬ್ಬ ಸಮರ್ಥ ಅನುವಾದಕರಾಗಿ ಉತ್ತಮ ಕೃತಿಗಳನ್ನು ಕನ್ನಡಕ್ಕೆ ತಂದಿದ್ದಾರೆ. ಹೀಗೆ ಪ್ರಾತಿನಿಧಿಕ ಬಂಡಾಯ ಕತೆಗಾರರಾದ ಕುಂ.ವೀ. ಅವರು ಸೃಜನ ಹಾಗೂ ಸೃಜನೇತರ ಸಾಹಿತ್ಯದಲ್ಲೂ ಕೃಷಿ ಮಾಡಿದ್ದಾರೆ. ಇದಕ್ಕೆಲ್ಲಾ ಇವರ ಆಳವಾದ ಅಧ್ಯಯನಶೀಲತೆ, ಸೂಕ್ಷ್ಮಗ್ರಹಿಕೆ ಹಾಗೂ ತೆಲುಗು ಭಾಷೆಯ ಮೇಲಿನ ಇವರ ಆಳವಾದ ಜ್ಞಾನ ಮುಖ್ಯವೆನಿಸುತ್ತದೆ. ಹೀಗೆ ಲೇಖಕರಾಗಿ, ಅನುವಾದಕರಾಗಿ ಕುಂ.ವೀ. ಅವರು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿ ಗದ್ಯಸಾಹಿತ್ಯ ಬರಹಗಾರರಾಗಿ ಪ್ರಸಿದ್ಧಿ ಹೊಂದಿದ್ದಾರೆ.

೧. ಕುಂ.ವೀರಭದ್ರಪ್ಪನವರ ತೆಲುಗು ಅನುವಾದ ಸಾಹಿತ್ಯವನ್ನು ನಾಲ್ಕು ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

೧. ಭೂಮಿಗೆ ಸಂಬಂಧಿಸಿದ ಕಥೆಗಳು

೨. ಶೋಷಣೆ ಮತ್ತು ಪ್ರತಿಭಟನೆಗೆ ಸಂಬಂಧಿಸಿದ ಕಥೆಗಳು

೩. ಸ್ತ್ರೀ ಸಂವೇದನೆ ಉಳ್ಳಂತಹ ಕಥೆಗಳು

೪. ನಗರ ನೇಪಥ್ಯದ ಕಥೆಗಳು

೨. ಸಮರ್ಥ ಭಾಷಾಂತರಕಾರರಾಗಿ ಕುಂ.ವೀ.

**ಅಧ್ಯಾಯ ಆರು: ಕುಂ. ವೀರಭದ್ರಪ್ಪ ಲೇಖಕ–ಅನುವಾದಕ ಅಂತರ್‌ಶಿಸ್ತೀಯ ನೆಲೆಗಳು**

ಈ ಅಧ್ಯಾಯದಲ್ಲಿ ಕನ್ನಡ ಮತ್ತು ತೆಲುಗು ಜನರ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಸಾಮಾಜಿಕ ವ್ಯವಸ್ಥೆ, ಆರ್ಥಿಕ ವ್ಯವಸ್ಥೆ ಮುಂತಾದವುಗಳನ್ನು ಇವರ ಕಥಾಸಾಹಿತ್ಯದ ಹಿನ್ನೆಲೆಯಲ್ಲಿ ಗುರುತಿಸುವುದು ಈ ಪ್ರಬಂಧದ ಪ್ರಮುಖ ಅಂಶವಾಗಿದೆ.

ಲೇಖಕ–ಅನುವಾದಕ ಪರಿಕಲ್ಪನೆ, ಅಂತರ್‌ಶಿಸ್ತೀಯ ಪರಿಕಲ್ಪನೆ, ಸಾಂಸ್ಕೃತಿಕ ಪ್ರಜ್ಞೆ, ಇತಿಹಾಸ ಪ್ರಜ್ಞೆ, ಸಾಮಾಜಿಕ ಪ್ರಜ್ಞೆ, ಧಾರ್ಮಿಕ ಪ್ರಜ್ಞೆ ಇವುಗಳ ನೆಲೆಗಳನ್ನು ಈ ಅಧ್ಯಾಯದಲ್ಲಿ ಗುರುತಿಸಲಾಗಿದೆ.

**ಅಧ್ಯಾಯ ಏಳು: ಸಮಕಾಲೀನ ಲೇಖಕರ ಸಂದರ್ಭದಲ್ಲಿ ಕುಂ.ವೀರಭದ್ರಪ್ಪ ಅವರ ಸ್ಥಾನ ಹಾಗೂ ಸಾಹಿತ್ಯದ ಅನನ್ಯತೆ**

ಹೈದರಾಬಾದ್ ಕರ್ನಾಟಕ ಭಾಗವಾದ ಬಳ್ಳಾರಿ ಜಿಲ್ಲೆಯ ಪ್ರಮುಖ ಗದ್ಯಬರಹಗಾರರಾದ ಕುಂ.ವೀ. ಅವರು ತಮ್ಮ ಸಣ್ಣಕತೆ ಕಾದಂಬರಿ, ಜೀವನಚರಿತ್ರೆ, ಹಾಗೂ ಅನುವಾದಗಳ

ಮೂಲಕ ಮಹತ್ವದ ಕಥೆಗಾರರಾಗಿ ಕನ್ನಡ ಸಾಹಿತ್ಯಕ್ಕೆ ಬಹುದೊಡ್ಡ ಕೊಡುಗೆಯನ್ನು ನೀಡಿದ್ದಾರೆ. ಇವರ ಸಾಹಿತ್ಯದ ಮಹತ್ವವನ್ನು ಗುರುತಿಸುವುದರ ಜೊತೆಗೆ ಕನ್ನಡ ಸಾಹಿತ್ಯ ಬೆಳೆದುಬಂದ ಬಗೆ, ಬದಲಾವಣೆಗೆ ತೆರೆದುಕೊಂಡ ರೀತಿಯನ್ನು ವಿವರಿಸುತ್ತಾ ಸಮಕಾಲೀನ ಸಾಹಿತಿಗಳಲ್ಲಿ ಇವರು ಹೇಗೆ ಭಿನ್ನರಾಗಿ ಕಾಣಿಸುತ್ತಾರೆ ಎಂಬುದನ್ನು ಈ ಅಧ್ಯಾಯದಲ್ಲಿ ತಿಳಿಸಲಾಗಿದೆ.

ಕುಂ.ವೀ. ಅವರ ಕಥೆಗಳ ಆತ್ಮವೇ ಅವರು ಬಳಸುವ ಗ್ರಾಮೀಣ ಭಾಷೆ ಕೊಟ್ಟೂರಿನ ಸುತ್ತಮುತ್ತಲ ಹಳ್ಳಿಗಾಡಿನ ಭಾಷೆ. ಹಳ್ಳಿಯೆಂದರೆ ನಾಗರಿಕತೆಯಿಂದ ತುಂಬಾ ದೂರ ಉಳಿದ ದ್ವೀಪದಂತಹ ಹಳ್ಳಿಗಳು. ಇಂತಹ ಕುಗ್ರಾಮಗಳ ಬಡವರ, ದೀನ ದಲಿತರ, ಕೆಳವರ್ಗಗಳ ದಾರುಣ ಬದುಕಿನ ಚಿತ್ರಣವನ್ನು ಅವರ ಕತೆಗಳಲ್ಲಿ ಕಾಣಬಹುದು. ಕಥೆಗಳಲ್ಲಿಯ ಹಾಸ್ಯ ಭಾಗ, ಜೀವಕೇಂದ್ರಿತ ನಿಲುವು, ಪ್ರಾದೇಶಿಕತೆಯ ಸೊಗಡು ಇವುಗಳ ವಿವರಣೆಯನ್ನು ಈ ಅಧ್ಯಾಯದಲ್ಲಿ ಕಾಣಿಸಲಾಗಿದೆ.

**ಅಧ್ಯಾಯ ಎಂಟು: ಉಪಸಂಹಾರ**

ಈ ಅಧ್ಯಾಯದಲ್ಲಿ ಕುಂ.ವೀರಭದ್ರಪ್ಪನವರ ಸೃಜನಶೀಲ ಸಾಹಿತ್ಯ ಹಾಗೂ ಅನುವಾದ ಸಾಹಿತ್ಯ ಕಥೆಗಳನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಭಾರತದ ಮಾನವಿಕ ಶಾಸ್ತ್ರಗಳ ಅಧ್ಯಾಯಗಳಲ್ಲಿ ಹೊಸಬೆಳಕನ್ನು ಚೆಲ್ಲುವಂತಹವಾಗಿವೆ. ಅಲ್ಪಸಂಖ್ಯಾತರು, ಮಹಿಳೆಯರು, ಕೆಳಜಾತಿಯ ಅಲಕ್ಷಿತರು ಇಪ್ಪತ್ತನೆಯ ಶತಮಾನದ ಅಧ್ಯಯನಗಳಲ್ಲಿ ಜಗತ್ತಿನೊಂದಿಗೆ ಸಂವಾದಿಸಿದ್ದಾರೆ. ವೈವಿಧ್ಯಪರವೂ ಜೀವಪರವೂ ವಿಶಿಷ್ಟವೂ ಆದ ಜನಮುಖಿ ಸಮಷ್ಟಿ ಸಂಸ್ಕೃತಿ ಭಾರತದಲ್ಲಿ ಅನೇಕ ಸಮುದಾಯ ಗಳಲ್ಲಿವೆ ಎಂಬುದನ್ನು ಇವರ ಬಹುಪಾಲು ಕತೆಗಳು ತಿಳಿಸುತ್ತವೆ.

**ಅನುಬಂಧಗಳು**

ಅನುಬಂಧಗಳಲ್ಲಿ ಮೊದಲಿಗೆ ಮೂಲ ಅಕರಗ್ರಂಥಗಳು ಹಾಗೂ ಕುಂ.ವೀ. ಅವರ ಕೃತಿಗಳು, ಗೌರವ ಪ್ರಶಸ್ತಿಗಳ ಮಾಹಿತಿಗಳನ್ನು ನೀಡಲಾಗಿದೆ.

ಅನುಬಂಧ ಎರಡರಲ್ಲಿ ಇದುವರೆಗೆ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಪರಾಮರ್ಶನ ಗ್ರಂಥಗಳು ಮತ್ತು ನಿಯತಕಾಲಿಕೆಗಳು, ಸಂಪ್ರಬಂಧಗಳು ಮಹಾಪ್ರಬಂಧಗಳ ವಿವರಗಳನ್ನು ನೀಡಲಾಗಿದೆ.

**೧.೬. ಕುಂ.ವೀ. ಅವರ ಸಾಹಿತ್ಯ ಕುರಿತ ಅಧ್ಯಯನಗಳ ಸಮೀಕ್ಷೆ**

ಎಪ್ಪತ್ತರ ದಶಕದ ಆರಂಭದಲ್ಲೇ ನವ್ಯಕ್ಕಿಂತ ಭಿನ್ನವಾದ ಬರವಣಿಗೆ ಬರತೊಡಗಿದ್ದರೂ ಅದಕ್ಕೊಂದು ಚಳುವಳಿಯ ಸ್ವರೂಪ ಬಂದದ್ದು 'ಬಂಡಾಯ ಸಂಘಟನೆ' ಆರಂಭವಾದ ಮೇಲೆ. ಈ ಸಂಘಟನೆಯೊಂದಿಗೆ ಅನೇಕ ಯುವ ಬರಹಗಾರರು ಕಾಣಿಸಿಕೊಂಡರು. ಈ

ಹೊತ್ತಿಗೆ ದೇಶದ ರಾಜಕೀಯದಲ್ಲಿ ನಡೆದ ಬದಲಾವಣೆಗಳು, ಹೊಸ ಶಕ್ತಿಯಾಗಿ ದಲಿತ ವರ್ಗದ ಬೆಳವಣಿಗೆ, ತರುಣರಲ್ಲಿ ವಿಶೇಷವಾಗಿ ಆಸಕ್ತಿ ಮೂಡಿಸಿದ ಸಮಾಜವಾದಿ ಸಿದ್ಧಾಂತಗಳು ಹೊಸದೊಂದು ದೃಷ್ಟಿಕೋನದ ಉದಯಕ್ಕೆ ಕಾರಣವಾದವು. ಹೊಸ ದೃಷ್ಟಿಕೋನ ಸಾಮಾಜಿಕ ಬದಲಾವಣೆಯ ಗತಿ ಹೆಚ್ಚು ತೀವ್ರವಾಗಬೇಕೆಂದು ಅಪೇಕ್ಷಿಸಿತು. ಸಾಹಿತಿ ತನ್ನ ವೈಯಕ್ತಿಕ ಬೌದ್ಧಿಕ ಸಮಸ್ಯೆಗಳನ್ನು ಬಿಟ್ಟುಕೊಟ್ಟು ಸಾಮಾಜಿಕ ನ್ಯಾಯಕ್ಕಾಗಿ ಶೋಷಣೆಗೊಳಗಾದವರ ಜಾಗೃತಿಗಾಗಿ ಸಾಹಿತ್ಯದ ಮೂಲಕ ಪ್ರಯತ್ನಿಸಬೇಕೆಂದು ಒತ್ತಾಯಿಸಿತು. ಬಂಡಾಯ ಎಂಬ ಹೆಸರೇ ಸೂಚಿಸಿರುವಂತೆ ಹೊಸ ದೃಷ್ಟಿಕೋನ ವ್ಯವಸ್ಥೆ ಶೋಷಣೆ ಭ್ರಷ್ಟತೆಗಳ ವಿರುದ್ಧ ಸ್ಪಷ್ಟವಾದ ಪ್ರತಿಭಟನೆಯನ್ನು ಆಪೇಕ್ಷಿಸುತ್ತದೆ. ಇಂಥ ಹೊಸ ಸಾಹಿತ್ಯದ ಧೋರಣೆಯಿಂದ ಬಂಡಾಯದ ಲೇಖಕರಾಗಿ ಕುಂ.ವೀ. ಅವರು ತಮ್ಮ ಸಾಹಿತ್ಯದ ರಚನೆಯನ್ನು ಮಾಡಿದ್ದಾರೆ. ಗ್ರಾಮೀಣ ಜೀವನದ ದಟ್ಟ ಚಿತ್ರಣಗಳಿಂದ ಗ್ರಾಮೀಣ ಭಾರತದ ಬದುಕಿನಲ್ಲಿಯ ಬಡತನ, ಶೋಷಣೆ, ಅಮಾನವೀಯತೆ, ಜಮೀನ್ದಾರಿ ವ್ಯವಸ್ಥೆ ಇವುಗಳನ್ನು ಅತ್ಯಂತ ನೈಜವಾಗಿ ಕಟ್ಟಿಕೊಟ್ಟಿದ್ದಾರೆ.

ಇದುವರೆಗೂ ಕುಂ.ವೀ. ಅವರ ಸಾಹಿತ್ಯ ಕುರಿತು ನಡೆದ ಅಧ್ಯಯನಗಳನ್ನು ಗಮನಿಸಿದಾಗ ೨೦೦೧ರಲ್ಲಿ ಕುವೆಂಪು ವಿಶ್ವವಿದ್ಯಾಲಯದಲ್ಲಿ ಅಮೃತೇಶ್ವರ ಬಿ.ಜಿ. ಇವರು 'ಕುಂ.ವೀರಭದ್ರಪ್ಪನವರ ಕಥಾಸಾಹಿತ್ಯ: ಒಂದು ಅಧ್ಯಯನ'. ಎಂಬ ಪಿ.ಎಚ್.ಡಿ. ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ಅದರಲ್ಲಿ ಶ್ರೀಯುತರು ಒಟ್ಟಾರೆ ಕುಂ.ವೀಯವರ ಸಾಹಿತ್ಯದಲ್ಲಿ ಬರುವ ಜಾತಿ, ಸಂಘರ್ಷಗಳು, ವರ್ಗಸಂಘರ್ಷಗಳು, ಮೂಢನಂಬಿಕೆ, ಲೈಂಗಿಕತೆ, ಹಸಿವು, ಶೋಷಣೆ ಮುಂತಾದ ವಿಚಾರಗಳನ್ನು ಅವರ ಕಥಾಸಾಹಿತ್ಯದ ಹಿನ್ನೆಲೆಯಲ್ಲಿ ವಿಶ್ಲೇಷಣೆ ಮಾಡುತ್ತಾ ಹೋಗಿದ್ದಾರೆ. ಇದರ ಜೊತೆ ಇವರ ಕಾದಂಬರಿ ಸಾಹಿತ್ಯ ಕುರಿತು ಪ್ರಾರಂಭದ ಕಪ್ಪು ಕಾದಂಬರಿಯಿಂದ ಶಾಮಣ್ಣವರೆಗೆ ಅಧ್ಯಯನ ಕೈಕೊಂಡಿದ್ದಾರೆ. ತಮ್ಮ ಅಧ್ಯಯನದಲ್ಲಿ ಕುಂ.ವೀ. ಅವರ ಸಣ್ಣಕತೆಗಳ ಆಶಯ ಮತ್ತು ಕಾದಂಬರಿಯ ಧೋರಣೆ ಇವರ ಬಗ್ಗೆ ವಿವರವಾದ ಚರ್ಚೆಯನ್ನು ಮಾಡಿದ್ದಾರೆ. ಆದರೆ ಅವರ ಅಧ್ಯಯನದಲ್ಲಿ ಕುಂ.ವೀ. ಸಾಹಿತ್ಯದಲ್ಲಿ ಆದಂತಹ ಹೊಸ ಪ್ರಯೋಗಗಳನ್ನಾಗಲಿ ಅಥವಾ ಅವರು ಬಳಸುವ ಕಥನತಂತ್ರಗಳ ಪ್ರಯೋಗಗಳ ಬಗ್ಗೆಯಾಗಲಿ ವಿವರವಾದ ಅಧ್ಯಯನವನ್ನು ಅವರು ನೀಡುವುದಿಲ್ಲ. ನಂತರ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಮಲ್ಲಿಕಾರ್ಜುನ ಕೆ. ಇವರು 'ಕುಂ.ವೀ ಕಾದಂಬರಿಗಳು: ಒಂದು ಅಧ್ಯಯನ' ಎಂಬ ವಿಷಯದ ಮೇಲೆ ಪಿಎಚ್.ಡಿ. ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ಇದನ್ನು ಪುಸ್ತಕ ರೂಪದಲ್ಲಿಯೂ ಹೊರತಂದಿದ್ದಾರೆ. ಪ್ರಸ್ತುತ ಪ್ರಬಂಧವು ಕುಂ.ವೀ. ಅವರ ಹದಿಮೂರು ಕಾದಂಬರಿಗಳನ್ನು ವಸ್ತು, ಧೋರಣೆ, ಭಾಷೆ ಮುಂತಾದ ಆಯಾಮಗಳಿಂದ ಇಲ್ಲಿ ವಿಶ್ಲೇಷಿಸಲಾಗಿದೆ. ಶೋಷಣೆಯನ್ನು

ಪ್ರತಿಭಟಿಸುವ ಕುಂ.ವೀ ಧೋರಣೆಗೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿರುವುದು ಈ ಕೃತಿಯ ಹೆಚ್ಚುಗಾರಿಕೆಯಾಗಿದೆ. ಕಾದಂಬರಿಗಳಲ್ಲಿ ಬರುವ ವಿವಿಧ ಪಾತ್ರಗಳನ್ನು ಶೋಷಕ ಪಾತ್ರ, ಶೋಷಿತ ಪಾತ್ರ ಮುಂತಾಗಿ ವರ್ಗೀಕರಿಸಿಕೊಂಡು ಮಾಡಿರುವ ಚರ್ಚೆ ಅರ್ಥಪೂರ್ಣವಾಗಿದೆ. ಆದರೆ ಇತ್ತೀಚೆಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಗೆ ಪಾತ್ರವಾಗಿರುವ 'ಅರಮನೆ' ಕಾದಂಬರಿಯ ಕುರಿತಾದ ಚರ್ಚೆಯನ್ನು ಇದರಲ್ಲಿ ಅಡಕಗೊಳಿಸಿಲ್ಲ. ಕನ್ನಡ ವಿಶ್ವವಿದ್ಯಾಲಯದಲ್ಲಿ ಭಾಷಾ ಅಧ್ಯಯನ ವಿಭಾಗದಲ್ಲಿ 'ಕುಂ.ವೀ. ಅವರ ಆಯ್ದ ಕತೆಗಳು: ಒಂದು ಅಧ್ಯಯನ' ಎಂಬ ಎಂ.ಫಿಲ್. ಪ್ರಬಂಧವು ಮಂಡನೆಯಾಗಿದೆ. ಇದರಲ್ಲಿ ಕುಂ.ವೀ. ಅವರ ಬದುಕು ಮತ್ತು ಬರಹ, ಕನ್ನಡ ಕಥಾಸಾಹಿತ್ಯ ಬೆಳೆದು ಬಂದ ಮಾರ್ಗ, ಆಯ್ದ ಕತೆಗಳ ಪಕ್ಷಿನೋಟ, ಆಯ್ದ ಕತೆಗಳಲ್ಲಿ ಜಾತಿ ಮತ್ತು ವರ್ಗಸಂಘರ್ಷ ಹಾಗೂ ಆಯ್ದ ಕತೆಗಳಲ್ಲಿ ಮಹಿಳಾ ಪಾತ್ರ ಚಿತ್ರಣ, ಕುಂ.ವೀ. ಅವರ ಅಭಿವ್ಯಕ್ತಿ ವಿಧಾನ ಮತ್ತು ಲೇಖಕರ ಧೋರಣೆ ಈ ಹಿನ್ನೆಲೆಯಲ್ಲಿ ಅಧ್ಯಯನವನ್ನು ಕೈಕೊಳ್ಳಲಾಗಿದೆ. ಇದುವರೆಗಿನ ಕುಂ.ವೀ. ಅವರ ಸಾಹಿತ್ಯದ ಅಧ್ಯಯನಗಳು ಬಿಡಿ ಬಿಡಿಯಾಗಿ ಅಧ್ಯಯನಗಳಾಗಿವೆ. ಕಥೆಗಳ ಅಧ್ಯಯನ ಕಾದಂಬರಿಗಳ ಅಧ್ಯಯನ ಹೀಗೆ, ಆದರೆ ಅವರ ಅನುವಾದ ಸಾಹಿತ್ಯದ ಮೇಲೆ ಇದುವರೆಗೆ ಅಧ್ಯಯನಗಳು ನಡೆದಿಲ್ಲ. ಕುಂ.ವೀ. ಅವರ ಅನುವಾದ ಸಾಹಿತ್ಯದ ಮೇಲೆ ವಿಮರ್ಶೆಗಳು ಅಷ್ಟಾಗಿ ನಡೆದಿಲ್ಲ.

ಕುಂ.ವೀ. ಅವರ ಕಥೆ ಮತ್ತು ಕಾದಂಬರಿಯ ಸಾಹಿತ್ಯವನ್ನು ಕುರಿತು ಇದುವರೆಗೂ ನಡೆದಿರುವ ವಿಚಾರ-ವಿಮರ್ಶೆಗಳನ್ನು ಹಾಗೂ ಚರ್ಚೆಗಳ್ನು ಅವಲೋಕಿಸುವುದು ಅಗತ್ಯ ವೆನಿಸುತ್ತದೆ. ಈ ಹಿನ್ನೆಲೆಯಲ್ಲಿ ೧೯೮೬ರಲ್ಲಿ ಪ್ರಕಟವಾದ ಕಪ್ಪು ಕಾದಂಬರಿಯ ಬಗ್ಗೆ ಎಚ್.ಎಸ್. ವೆಂಕಟೇಶಮೂರ್ತಿಯವರು ಈ ರೀತಿ ಹೇಳಿದ್ದಾರೆ.

"ಮೊದಲ ಕಾದಂಬರಿ ಎಂದು ಹೇಳಲಾಗದಷ್ಟು ದಟ್ಟವಾದ ಬರವಣಿಗೆ ಅಲ್ಲಿದೆ. ಕುಂ.ವೀ ಅವರ ಕಥನಕ್ರಮವಂತೂ ಅತ್ಯಂತ ಆಕರ್ಷಕವಾಗಿದೆ. ಮೈಸೂರಿನ ಕೆಳವರ್ಗದ ಭರಮಜ್ಜ ಮತ್ತು ಅವರ ಕುಟುಂಬ ಎರಡು ದೈತ್ಯ ಶಕ್ತಿಗಳಾದ ಕರಿಗೌಡ ಮತ್ತು ಸಣ್ರುದ್ರರ ನಡುವೆ ನಜ್ಜುಗುಜ್ಜಾಗುವ ದುರಂತವನ್ನು ಕಾದಂಬರಿ ಚಿತ್ರಿಸುತ್ತದೆ. ಬಳ್ಳಾರಿ ಆಂಧ್ರಸೀಮೆಯ ಕ್ರೌರ್ಯವನ್ನು ರಕ್ತ ಹೆಪ್ಪುಗಟ್ಟುವಂತೆ ಚಿತ್ರಿಸುವಲ್ಲಿ ಕುಂ.ವೀ. ಸಫಲರಾಗಿದ್ದಾರೆ. ಇವರ ಭಾಷೆ ಬಯಲುಸೀಮೆಯ ಜಾನಪದ ಬನಿಯಿಂದ ಸತ್ವ ತುಂಬಿಕೊಂಡಿದೆ. ಕಾದಂಬರಿಗೆ ಒದಗಿಸುವ ವಿವರಗಳು ಹಳೇ ಮೈಸೂರಿನ ಮಂದಿಗೆ ಹೊಸದಾಗಿವೆ. ಮತ್ತು ಬರವಣಿಗೆಯ ಧಾಟಿ ಸ್ವಲ್ಪ ಅಬ್ಬರವಾದದ್ದು, ಅತಿರಂಜಕ ಸ್ವಭಾವದ್ದು. ಲೈಂಗಿಕತೆಯ ವಿವರಗಳು ಅಗತ್ಯಕ್ಕೂ ಮೀರಿ ಬರುತ್ತಾ ಕೆಲವು ಬಾರಿ ಲೋಲುಪತ್ತೆಯ ಹಾದಿ ಹಿಡಿಯುವುದುಂಟು. ಆದಾಗ್ಯೂ ಆಕರ್ಷಕ

ಕಥನಶಕ್ತಿಯ ಗಟ್ಟಿಮುಟ್ಟಾದ ಬರವಣಿಗೆಯಿಂದ ಕುಂ.ವೀ. ಅವರು ಕನ್ನಡ ಕಾದಂಬರಿ ಲೋಕಕ್ಕೆ ಒಡೆದುತೋರುವ ಹೊಸದನಿಯಾಗಿ ಈ ಕಾದಂಬರಿಯ ಮೂಲಕ ಪ್ರವೇಶ ಮಾಡಿದ್ದಾರೆ" ಎಂದು ಆಕಾಶವಾಣಿಯಲ್ಲಿ ವಿಮರ್ಶೆ ಮಾಡಿದ್ದಾರೆ. 'ಇನ್ನಾದರೂ ಸಾಯಬೇಕು', 'ಡೋಮ ಮತ್ತಿತರ ಕಥೆಗಳು', 'ಭಗವತಿ ಕಾಡು' ಮತ್ತು 'ನಿಜಲಿಂಗ' ಇಲ್ಲಿನ ಕಥೆಗಳ ಬಗ್ಗೆಯೂ ಕುಂ.ಸಿ. ಉಮೇಶ್ ಅವರು ಸಂಕ್ರಮಣದಲ್ಲಿ ವಿಮರ್ಶೆ ಮಾಡಿದ್ದಾರೆ. 'ಅಪೂರ್ವ ಚಿಂತಾಮಣಿ' ಕಥೆ 'ಸುಶೀಲ ಎಂಬ ನಾಯಿಯೂ ವಾಗಿಲಿ ಎಂಬ ಗ್ರಾಮವೂ' ಸಂಕಲನಗಳ ಬಗ್ಗೆಯೂ ಸಂಕ್ರಮಣದಲ್ಲಿ ಬಿಡಿ ಬಿಡಿ ವಿಮರ್ಶೆಗಳು ಪ್ರಕಟವಾಗಿವೆ.

ಕುಂ.ವೀರಭದ್ರಪ್ಪನವರ ಕಾದಂಬರಿ ಸಾಹಿತ್ಯಕ್ಕಿಂತ ಅವರ ಕಥಾಸಾಹಿತ್ಯ ಹೆಚ್ಚು ಚರ್ಚೆಗೆ ವಿಮರ್ಶೆಗೆ ಒಳಪಟ್ಟಿವೆ. ಶಾಮಣ್ಣ ಕಾದಂಬರಿಯ ಬಗ್ಗೆ ವಿಮರ್ಶಕರಾದ ರಾಜೇಂದ್ರ ಚೆನ್ನಿ ಹಾಗೂ ಮರುಳಸಿದ್ಧಪ್ಪನವರು ಕ್ರಮವಾಗಿ ಸಂಕ್ರಮಣ ಮತ್ತು ಮಯೂರ ಪತ್ರಿಕೆಗಳಲ್ಲಿ ವಿಮರ್ಶೆಲೇಖನಗಳನ್ನು ಪ್ರಕಟಿಸಿದ್ದಾರೆ. ಲಂಕೇಶ್ ಪತ್ರಿಕೆ, ಪ್ರಜಾವಾಣಿ ಮತ್ತು ಕನ್ನಡಪ್ರಭ ಪತ್ರಿಕೆಗಳಲ್ಲಿಯೂ ಈ ಕೃತಿಯ ಬಗ್ಗೆ ವಿಮರ್ಶೆಗಳು ಬಂದಿವೆ.

ಕುಂ.ವೀ. ಅವರಿಗೆ ಕೇಂದ್ರಸಾಹಿತ್ಯ ಅಕಾಡೆಮಿ ಪ್ರಶಸ್ತಿ ತಂದುಕೊಟ್ಟ ಕೃತಿ 'ಅರಮನೆ' ವಸ್ತು, ಭಾಷೆ ಮತ್ತು ತಂತ್ರ ಇವುಗಳ ಮೂಲಕ ಒಂದು ಅನನ್ಯ ಕೃತಿಯಾಗಿರುವುದು. ಸಿ.ಎನ್. ರಾಮಚಂದ್ರನ್ ಇವರು ಅರಮನೆಯ ಕೃತಿ ಪ್ರಾರಂಭದಲ್ಲಿ ಬಹಳ ದೀರ್ಘವಾದ ವಿಮರ್ಶೆಯನ್ನು ಮಾಡಿ ಕೃತಿಯ ವೈಶಿಷ್ಟ್ಯತೆಯನ್ನು ಪರಿಚಯಿಸಿದ್ದಾರೆ ಹಾಗೂ ಕುಂ.ವೀ. ಅವರು ವಾಸ್ತವತಾ ಮಾರ್ಗವನ್ನು ಅನುಸರಿಸಿ ಹೇಗೆ ಕೃತಿಯನ್ನು ರಚಿಸುತ್ತಾರೆ ಎಂದು ತಿಳಿಸುತ್ತಾರೆ. ಈ ಹಿನ್ನೆಲೆಯಲ್ಲಿ ಅರಮನೆ ಕೃತಿ ಕಟ್ಟಿಕೊಡುವ ಚಾರಿತ್ರಿಕ-ಧಾರ್ಮಿಕ, ಸಾಂಸ್ಕೃತಿಕ, ಸಾಹಿತ್ಯಕ ಆಯಾಮಗಳನ್ನು ಗುರುತಿಸಿದ್ದಾರೆ. ಇದರ ನಂತರ ಬಂದ ಕೃತಿ 'ಹೇಮರೆಡ್ಡಿಮಲ್ಲಮ್ಮನ ಕಥೆಯು' ಈ ಕಾದಂಬರಿಯಲ್ಲಿ ಕುಂ.ವೀ. ಅವರು ಪೌರಾಣಿಕ ವ್ಯಕ್ತಿಯಾದ ಹೇಮರೆಡ್ಡಿಮಲ್ಲಮ್ಮನ ನಾಟಕವನ್ನು ವಾಗಲಿಯಲ್ಲಿ ಆಡಿಸಿ ಶತದಿನೋತ್ಸವದ ಸಂದರ್ಭದ ಹಿನ್ನೆಲೆಯನ್ನು ಇಟ್ಟುಕೊಂಡು ಇಡೀ ಕಾದಂಬರಿಯನ್ನು ಹೆಣೆದಿದಾರೆ. ಒಂದು ನಾಟಕ ತಂಡ ಊರೊಳಗೆ ಬಂದು ಶತದಿನೋತ್ಸವ ಆಚರಿಸುವಷ್ಟರಲ್ಲಿ ಆ ಗ್ರಾಮದಲ್ಲಿ ಆಗುವ ಸಾಮಾಜಿಕ ಬದಲಾವಣೆಗಳನ್ನು ಮತ್ತು ಜಮೀನ್ದಾರಿ ಕ್ರೌರ್ಯವನ್ನು ಕುಂ.ವೀ. ಅವರು ಇಲ್ಲಿ ಕಟ್ಟಿಕೊಟ್ಟಿದ್ದಾರೆ. ಓ.ಎಲ್ ನಾಗಭೂಷಣ ಸ್ವಾಮಿಯವರು 'ಇದೊಂದು ದುಃಸ್ವಪ್ನಗಳ ಪರಿಷೆ' ಎಂದು ಇದನ್ನು ವಿಮರ್ಶಿಸಿದ್ದಾರೆ.

ಇದುವರೆಗೂ ನಡೆದಿರುವ ಅಧ್ಯಯನಗಳಿಗಿಂತ ಈ ಅಧ್ಯಯನವನ್ನು ಭಿನ್ನವಾಗಿಸಲು ಪ್ರಯತ್ನಿಸಲಾಗಿದೆ. ಕುಂ.ವೀ. ಅವರ ಸಣ್ಣಕತೆಗಳು, ಕಾದಂಬರಿಗಳು ವಿಶೇಷವಾಗಿ 'ಅರಮನೆ' 'ಹೇಮರಡ್ಡಿಮಲ್ಲಮ್ಮನ ಕತೆ' ಹಾಗೂ 'ನಿಜಲಿಂಗ' ಈ ಕತೆಗಳನ್ನು ವಿವರವಾಗಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಜೊತೆ ಇವರ ಅನುವಾದ ಸಾಹಿತ್ಯದ ಕಥೆಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಿರುತ್ತೇನೆ ಮತ್ತು ಕನ್ನಡ ತೆಲುಗರ ಸಂಬಂಧವನ್ನು ರಾಜಕೀಯವಾಗಿ, ಧಾರ್ಮಿಕವಾಗಿ, ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಡೋಮ ಮತ್ತಿತರ ಕಥೆಗಳ ಬೆನ್ನುಡಿಯಲ್ಲಿ ಗಿರಡ್ಡಿ ಗೋವಿಂದರಾಜ ಅವರು "ಕುಂ.ವೀ. ಪ್ರಾದೇಶಿಕ ಭಾಷೆಯನ್ನು ತಮ್ಮ ಕಥೆಗಳಲ್ಲಿ ಅರ್ಥಪೂರ್ಣವಾಗಿ ಬಳಸಿಕೊಂಡಿದ್ದಾರೆ. ಇವರಿಗೆ ದೇವನೂರ ಮಹಾದೇವರಂತೆ ನಿರೂಪಣೆಯ ಭಾಷಾಶೈಲಿಯಲ್ಲಿ ಬಳ್ಳಾರಿ ಜಿಲ್ಲೆಯ ಕೊಟ್ಟೂರಿನ ಕಡೆಯ ಆಡುಮಾತಿನ ಲಯವನ್ನು ಸೇರಿಸಿಕೊಳ್ಳುವ ಜಾಣ್ಮೆಯಿದೆ"(೧೯೮೫ ಕೃತಿಯ ಬೆನ್ನುಡಿ) ಎಂದು ಹೇಳಿದ್ದಾರೆ.

ನವ್ಯೋತ್ತರ ಕಥೆಗಳಲ್ಲಿ ಜನಪರ ನಿಲುವುಗಳನ್ನು ಗುರುತಿಸುತ್ತಾ ಬಸವರಾಜ ಸಬರದ ಅವರು ಕುಂ.ವೀ. ಅವರ ಕಥೆಗಳಲ್ಲಿ ಬಂಡಾಯದ ಝಳಪಿದೆ ಹೋರಾಟದ ಬೆಳಕಿದೆ. ಉಸಿರಿನಷ್ಟೇ ಸಹಜವಾಗಿ ಅರಳುವ ಕಥೆಗಳಲ್ಲಿ ಬದುಕಿನ ತಾಕತ್ತಿದೆ. ಊಳಿಗಮಾನ್ಯ ಪದ್ಧತಿಯ ವಿರುದ್ಧ ಪುಟಿದೇಳುವ ಅವರ ಅನೇಕ ಕತೆಗಳಲ್ಲಿ ಗ್ರಾಮೀಣ ಬದುಕಿನ ಜೀವನ ಚಿತ್ರಣವಿದೆ" (೧೯೮೭: ೫) ಎನ್ನುತ್ತಾರೆ.

ಕುಂ.ವೀ. ಅವರ ಪ್ರಾರಂಭದ ಕಥೆಗಳನ್ನು ಕುರಿತು ಟಿ.ಪಿ. ಅಶೋಕ ಅವರು ಕೆಳವರ್ಗದ ಜೀವನವನ್ನು ದಾಖಲು ಮಾಡುವಾಗ ವೀರಭದ್ರಪ್ಪನವರು ತೋರುವ ಅನುಭವ ಸಮೃದ್ಧಿ ಬೆರಗು ಹುಟ್ಟಿಸುವಂತಿದ್ದರೂ ಆ ಜನಗಳ ಸಾಧ್ಯತೆಗಳನ್ನು ಬಿಂಬಿಸುವಲ್ಲಿ ದುರ್ಬಲವಾಗುವ ವೈಚಾರಿಕ ನೆಲೆಗಟ್ಟು ಇವರ ಕತೆಗಳ ಮಿತಿಗೆ ಮುಖ್ಯ ಕಾರಣವಾಗುತ್ತದೆ"(೧೯೯೧: ೧೧೪) ಎಂದು ಹೇಳಿದ್ದಾರೆ.

ಕಪ್ಪು ಕಾದಂಬರಿಯ ಪ್ರಥಮ ಮುದ್ರಣದ ಬೆನ್ನುಡಿಯಲ್ಲಿ ಚಂದ್ರಶೇಖರ ಪಾಟೀಲ ಅವರು "ಹೊಸ ಪೀಳಿಗೆಯ ಮನೋಧರ್ಮವನ್ನು ಪ್ರಾಮಾಣಿಕವಾಗಿ ಮೈಗೂಡಿಸಿಕೊಂಡಿರುವ ಕುಂ.ವೀ. ಅವರಿಗೆ ಗಡಿನಾಡಿನ ಸಾಹಿತಿ ಎಂಬ ರಿಯಾಯ್ತಿಯನ್ನು ತೋರಿಸುವ ಜರೂರಿಯೇ ಇಲ್ಲ" (೧೯೭೯ ಬೆನ್ನುಡಿ) ಎಂದು ಹೇಳಿದ್ದಾರೆ.

ಕುಂ.ವೀ. ಅವರ ಸಣ್ಣಕತೆಗಳ ಬಗ್ಗೆ ಗಿರಡ್ಡಿ ಗೋವಿಂದರಾಜ ಅವರು ಹೀಗೆ ಪ್ರತಿಕ್ರಿಯೆ ವ್ಯಕ್ತಿಪಡಿಸಿದ್ದಾರೆ. "ಬಂಡಾಯ ಲೇಖಕರು ತಮ್ಮ ಪ್ರತಿಭಟನೆಯನ್ನು ಕತೆಯ ವಿವರದಲ್ಲಿ

ವ್ಯಕ್ತವಾಗಿಯೇ ಎಷ್ಟೋ ಸಲ ವಾಚ್ಯವಾಗಿಯೇ ತೋರಿಸಲು ಇಷ್ಟಪಡುತ್ತಾರೆ ಕುಂ. ವೀರಭದ್ರಪ್ಪ ಅವರ ಬಹುಪಾಲು ಕತೆಗಳ ರೀತಿ ಇಂಥದ್ದು"(೧೯೯೧: ೧೧೫)

ಕುಂ.ವೀ. ಅವರ 'ದೇವರ ಹೆಣ' ಕಥೆಯನ್ನು ವಿಶ್ಲೇಷಿಸುತ್ತಾ ಟಿ.ಪಿ.ಅಶೋಕ ಅವರು "ಈ ಕಥೆಯ ಕೇಂದ್ರ ಪಾತ್ರವಾದ ಕೊಣ್ಣಿಯನ್ನು ವಿಲಕ್ಷಣತೆಯ ನೆಲೆಯಲ್ಲಿಟ್ಟು ಬರೆಯುವ ಕುಂ.ವೀ. ಅವನ ವಿಲಕ್ಷಣ ಎಂದು ತೋರುವ ನಡವಳಿಕೆಯಲ್ಲೇ ಶಿಷ್ಟ ಸಮಾಜದ ವೈರುಧ್ಯಗಳನ್ನು ಬಯಲಿಗೆಳೆಯುವ ರೀತಿ ಮನಮುಟ್ಟುವಂತಿದೆ. ಸತ್ಯದ ನಗ್ನದರ್ಶನ ಓದುಗನನ್ನು ಶಾಕ್ ಮಾಡುತ್ತದೆ" (೧೯೮೬: ೧೨೦) ಎಂದು ಹೇಳಿದ್ದಾರೆ.

ಕುಂ.ವೀರಭದ್ರಪ್ಪ ಅವರ 'ಕಪ್ಪು ನೆಲದಲ್ಲೊಂದು ಕೆಂಪು ಕಥೆ'ಯನ್ನು ಕುರಿತು ಆರ್ಕೆ ಮಣಿಪಾಲ್ ಅವರು "ಶೀರ್ಷಿಕೆಯಲ್ಲಿ ಬರಗೂರರ ಕತೆಗೆ ಹೋಲಿಸಿದರೂ ವಸ್ತುವಿನಲ್ಲಿ ಕೆಲಮಟ್ಟಿಗೆ ಮೂಡಣ ಸೀಮೇಲಿ ಕತೆಗೆ ಸಮಾನಾಂತರವಾಗಿ ಸಾಗುತ್ತದೆ. ಇಲ್ಲಿನ ಪರತನ ಪಾತ್ರವಂತೂ ರಂಗಪ್ಪನ ಪಾತ್ರದಷ್ಟೇ ಜೀವಂತವಾದುದಾಗಿದ್ದು ಆತನ ದುರಂತದ ಕತೆಯನ್ನು ಸಂಯಮದಿಂದ ಚಿತ್ರಿಸಲಾಗಿದೆ. ಹೊಲ ಸಿಗುತ್ತದೆಂಬ ಉತ್ಸಾಹದ ಹುಚ್ಚಿನಲ್ಲಿ ವೈಮರೆತ ಪರತನನ್ನು ಸುಂಕಲಿ ನಮ್ ಹೊಲ ಇರೋದು ಸುಡುಗಾಡಲ್ಲಿ ಎಂಬ ವಾಸ್ತವದ ಭೂಮಿಗೆ ಎಳೆದು ತರುವುದು, ಕೊನೆಗೆ ಅವಳ ಮಾತೇ ನಿಜವಾಗುವುದು ಕಥೆಯ ನಿಷ್ಠುರ ವ್ಯಂಗ್ಯವಾಗಿದೆ" (೧೯೮೧–೧೫) ಎಂದಿದ್ದಾರೆ.

'ಕತ್ತಲನು ತ್ರಿಶೂಲ ಹಿಡಿದ ಕಥೆ'ಯನ್ನು ಕುರಿತು ಆರ್ಕೆ ಮಣಿಪಾಲ್ ಅವರು "ಹಸಿವನ್ನು ಐತಿಹಾಸಿಕ ನೆಲೆಯಲ್ಲಿ ಗುರ್ತಿಸಿ ಅದಕ್ಕೆ ಪಾತ್ರದ ವ್ಯಕ್ತಿತ್ವದ ಮಿತಿಯೊಳಗೆ ಊಹೆಗೆ ನಿಲುಕದ ಪರಿಹಾರವನ್ನು ಕಂಡುಕೊಳ್ಳುವ ಕಥೆ. ಇದು ಲೇಖಕನ ಕ್ರಾಂತಿಕಾರೀ ಸಾಧ್ಯತೆಯೊಂದರ ಆಶಯವನ್ನು ಸಾಬೀತು ಮಾಡುವ ಕತೆಯೂ ಆಗಿದ್ದು ಕತೆಯ ಚೌಕಟ್ಟಿನಲ್ಲೊಂದು ಸಮಾಜವಾದಿ ತರ್ಕತೆಯ ಪರಿಣಾಮವನ್ನು ನಿಯಂತ್ರಿಸುತ್ತದೆ"(೧೯೮೧–೧೬) ಎಂದಿದ್ದಾರೆ. ಮುಂದುವರಿದು. "ಗ್ರಾಮೀಣ ನಗರ ಪರಿಸರಗಳ ಶೋಷಣೆಗೆ ಕಾರಣವಾಗಿರುವ ಊಳಿಗಮಾನ್ಯ ಅಧಿಕಾರಶಾಹಿ ವ್ಯವಸ್ಥೆಯೊಳಗೆ ಮಾನವೀಯತೆ ನಲುಗಿ ಹೋಗುತ್ತಿರುವ ಬಗ್ಗೆ ಹೆಚ್ಚು ಸ್ಪಂದಿಸುತ್ತಿರುವುದನ್ನು ಕಾಣಬಹುದು. ಹಾಗೆಯೇ ಯಜಮಾನ ಸಂಸ್ಕೃತಿಯ ದಬ್ಬಾಳಿಕೆ ಶೋಷಣೆಗಳನ್ನೇ ತನ್ನ ಸೃಜನಶೀಲತೆಗೆ ಮೂಲ ಪ್ರೇರಣೆಯನ್ನಾಗಿಸಿಕೊಂಡಿದ್ದಾರೆ"(೧೯೮೧:೨೭) ಎಂದು ಕುಂ.ವೀ. ಅವರ ಒಟ್ಟಾರೆ ಬರವಣಿಗೆಯನ್ನು ಕುರಿತು ಅಭಿಪ್ರಾಯ ನೀಡುತ್ತಾರೆ.

'ಜಾತ್ರೆ' ಕಥೆಯನ್ನು ಕುರಿತು ಆರ್ಕೆ ಮಣಿಪಾಲ್ ಅವರು "ಮುಗ್ಧ ಹೆಣ್ಣೊಬ್ಬಳು ಧಣಿಯ ಅತ್ಯಾಚಾರಕ್ಕೆ ಒಳಗಾಗಿ ನೀರವವಾಗಿ ಚಡಪಡಿಸುವ ರೀತಿ, ಆಕೆಯ ಮುಗ್ಧ ತಂದೆ ತಾನು ಮೋಸ ಹೋದ ಬಗ್ಗೆ ಗೌರಿಹಬ್ಬದ ಕೊನೆಯಲ್ಲಿ ಅಸಹಾಯಕನಾಗುವುದು ಕಣ್ಣಿಗೆ ಕಟ್ಟಿದಂತೆ

ಕುತೂಹಲಕಾರಿಯಾಗಿ ಚಿತ್ರೀಕೃತವಾಗಿದೆ. ದೇವರು ಎಲ್ಲರ ಸೊತ್ತೆಂಬುದನ್ನು ಕೆಳಜಾತಿಯವರ ಪ್ರತಿಭಟನೆಯ ಮೂಲಕ ಅರ್ಥಪೂರ್ಣವಾಗಿ ಸಾಬೀತುಪಡಿಸಿದ್ದಾರೆ. ಹೆಚ್ಚಿನ ಮೂಲ ಸತ್ವದಿಂದಾಗಿ ಜಾತ್ರೆ ಕಥೆ ಗಮನ ಸೆಳೆಯುತ್ತದೆ"(೧೯೮೧: ೩೨) ಎಂದಿದ್ದಾರೆ.

'ಸುಶೀಲ ಎಂಬ ನಾಯಿಯೂ ವಾಗಿಲಿ ಎಂಬ ಗ್ರಾಮವೂ' ಎಂಬ ಕಥಾಸಂಕಲನವನ್ನು ಕುರಿತಂತೆ ಪಿ. ಲಂಕೇಶ್ ಅವರು.

"ಇವರಿಗೆ ತಮ್ಮದೇ ಆದ ವಸ್ತು ಶೈಲಿ ದೊರಕದೆ ಇರುವುದು, ಗಂಭೀರವಾದ ವಸ್ತುವನ್ನು ತುಂಬಾ ಕಲಾತ್ಮಕವಾಗಿ ಹೇಳುವ ಗೀಳಿನಿಂದ ತಾವು ಹೇಳಲಾರದ ರೀತಿಯಲ್ಲಿ ಕತೆ ಹೇಳತೊಡಗುತ್ತಾರೆ. ದೇವನೂರರ ರೀತಿಯಲ್ಲಿ ಹೇಳುವ ಆಸೆ ಒಂದು ಕಡೆ ಕಂಡುಬಂದರೆ ಇನ್ನೊಂದೆಡೆ ನಮ್ಮ ಜನಪ್ರಿಯ ಲೇಖಕರ ಧೋರಣೆಯೆಲ್ಲಾ ಇವರಲ್ಲಿ ತಲೆದೋರುತ್ತವೆ. ಆದ್ದರಿಂದ ಕುಂ.ವೀ. ತಮ್ಮದೆ ಭಾಷೆ ಮತ್ತು ಶೈಲಿಯಲ್ಲಿ ಬರೆಯುವುದನ್ನು ಆರಂಭಿಸಬೇಕಿದೆ. ಇಲ್ಲದಿದ್ದರೆ ಬರೆಯುವುದು ಯಾಂತ್ರಿಕ ಕ್ರಿಯೆಯಾಗಿ ಉಳಿಯುತ್ತದೆ"(೧೯೮೫:೭) ಎಂದು ಅಭಿಪ್ರಾಯಪಟ್ಟಿದ್ದಾರೆ.

ನಿಜಲಿಂಗ ಕಥಾಸಂಕಲನವನ್ನು ವಿಶ್ಲೇಷಿಸುತ್ತಾ ಟಿ.ಪಿ. ಅಶೋಕ ಅವರು "ಕೆಳವರ್ಗದ ಬದುಕಿನ ಸ್ಥಿತಿ ಸಾಧ್ಯತೆಗಳನ್ನು ಚಿತ್ರಿಸುವುದು ಅವರ ಪ್ರಧಾನ ಆಶಯ. ಈ ಆಶಯ ಅವರ ಹೊಸ ಸಂಕಲನದಲ್ಲೂ ಸಾಗಿದೆ. ಕುಂ.ವೀ. ಕತೆಗಳು ಶೂದ್ರಜಗತ್ತಿನ ವಿವಿಧ ಮುಖಗಳನ್ನು ತೋರುತ್ತವೆ. ಆ ಜನಾಂಗಕ್ಕೆ ಹತ್ತಿರವಾದ ಭಾಷೆಯಲ್ಲಿ, ಗೆಶ್ಚರ್‌ಗಳಲ್ಲಿ, ನುಡಿಗಟ್ಟುಗಳಲ್ಲಿ ಒಂದು ಸಮುದಾಯವನ್ನು ಅದಕ್ಕೆ ಅನನ್ಯವಾದ ದಟ್ಟ ಅನುಭವಗಳನ್ನು ನಮ್ಮೆದುರು ಕಡೆದು ನಿಲ್ಲಿಸುತ್ತಾರೆ. ಜೊತೆಗೆ ಆ ಸಮುದಾಯದ ಜಾತಿ ಮತ್ತು ವರ್ಗ ಸಮಾಜದ ಎಲ್ಲಾ ಕ್ರೌರ್ಯ ಅಮಾನವೀಯತೆಯನ್ನು ಅವುಗಳ ನಗ್ನರೂಪದಲ್ಲಿ ಪ್ರದರ್ಶಿಸುವಂಥದ್ದು ಬೆರಗು ಹುಟ್ಟಿಸುತ್ತದೆ. ಅವರು ಸೃಷ್ಟಿಸುವ ಪಾತ್ರಗಳು ಶೋಷಕ ಶಕ್ತಿಗಳ ವಿರುದ್ಧ ಒಂದು ಸಂಘಟಿತ ಸಂಚಿತ ನಿರೋಧಕ ಮತ್ತು ಆಕ್ರಮಣಕಾರಿ ಅಸ್ತ್ರವಾಗಬಲ್ಲದು. ಆದರೆ ಕುಂ.ವೀ. ಅವರ ಅತ್ಯುತ್ತಮ ಬರವಣಿಗೆ ಆಶಯ ಈ ಶೂದ್ರ ಶಕ್ತಿಯ ಅನಾವರಣವೇ ಆಗಿದೆ"(೧೯೯೩: ಬೆನ್ನುಡಿ) ಎಂದಿದ್ದಾರೆ.

ಕುಂ.ವೀ. ಕಥೆಗಳನ್ನು ವಿಮರ್ಶಿಸುತ್ತಾ ರಹಮತ್ ತರೀಕೆರೆಯವರು ಬಂಡಾಯ ಕತೆ ಕವಿತೆಗಳಲ್ಲಿ ಅಸ್ಪೃಶ್ಯರ ಜಗತ್ತು ಮಾಡುವ ದಿಟ್ಟ ವಿಧಾನದಲ್ಲಿ ಶಿಷ್ಟ ಸಂಸ್ಕೃತಿಯನ್ನು ಧಿಕ್ಕರಿಸುವ ದನಿಯಿರುತ್ತದೆ. ಕುಂ.ವೀ. ಅವರ ಕತೆಗಳ ಅಧ್ಯಯನ ಈ ದೃಷ್ಟಿಯಿಂದ ಹೆಚ್ಚು ಒಳನೋಟ ಗಳನ್ನೊದಗಿಸುತ್ತದೆ"(೧೯೯೨: ೧೨).

ಕುಂ.ವೀ. ಕತೆಗಳನ್ನು ಕುರಿತು ಕಥೆಗಾರರಾದ ಜಿ.ಎಸ್. ಸದಾಶಿವ ಅವರು ಹೊಟ್ಟೆಯ 'ಹಸಿವು' ಮನುಷ್ಯನ ಮೂಲಭೂತ ಅಗತ್ಯಗಳಲ್ಲೊಂದು. ಹಸಿವಿನ ಸಮಸ್ಯೆಯನ್ನೇ ಒಳಗೊಂಡ ಕುಂ.ವೀ. ಕತೆಗಳಲ್ಲಿ 'ಕಿವುಡ ನಾಯಿಯಾದದ್ದು', 'ಕತ್ತಲ ತ್ರಿಶೂಲ ಹಿಡಿದಿದ್ದು' 'ಹುಗ್ಗಿ', 'ದೇವರ ಹೆಣ' ಇತ್ಯಾದಿ ಕಥೆಗಳು ಪ್ರಮುಖವಾಗಿವೆ. ಇವುಗಳಲ್ಲಿ 'ಕತ್ತಲ ತ್ರಿಶೂಲ ಹಿಡಿದಿದ್ದು' ಹಾಗೂ 'ಕಿವುಡ ನಾಯಿಯಾದದ್ದು' ಕಥೆಗಳಂತೂ ಹಸಿದವರ ಹೊಟ್ಟೆಯನ್ನು ಹೊಕ್ಕು ಚಿತ್ರಿಸಿದಂತವು"(೧೯೮೫: ೧೦೫) ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಕುಂ.ವೀ. ಅವರ ಅಪೂರ್ವ ಚಿಂತಾಮಣಿ ಕಥಾಸಂಕಲನ ಕುರಿತು ಹೆಚ್.ವಿ. ಶ್ರೀನಿವಾಸ ಮೂರ್ತಿ ಅವರು "ಕುಂ.ವೀ. ಸಮರ್ಥ ಕತೆಗಾರ ಎನ್ನಿಸಿಕೊಂಡಿರುವುದು ನಿಜವಾದರೂ ಈತನ ಕಥೆಗಳು ಮೊದಲ ಓದಿಗೆ ದಕ್ಕುವಂತವುಗಳಲ್ಲ. ಲಂಬಿತ ವಾಕ್ಯಗಳನ್ನು ಪ್ಯಾರಾಗಳನ್ನು ಹೊಕ್ಕಾಗ ಆಗುವ ಅನುಭವ ಬೇಸರವೆನಿಸಿದರೂ ಓದಿದಂತೆಲ್ಲಾ ವಾಕ್ಯಗಳನ್ನು ಸವಿಯುವ ಅರ್ಥದ ಕಡೆ ಮನ ಒಲಿಸುವ ವಿಸ್ಮಯಲೋಕವನ್ನು ಸೃಷ್ಟಿಸುವ ಸಾಮರ್ಥ್ಯವನ್ನು ಕಂಡುಕೊಳ್ಳಬಹುದಾದ ಸಾರ್ಥಕ ಕತೆಗಾರ"(೧೯೯೫: ಬೆನ್ನುಡಿ) ಎಂದಿದ್ದಾರೆ.

ಕುಂ.ವೀ. ಕತೆಗಳನ್ನು ಕುರಿತು ಅರವಿಂದ ಮಾಲಗತ್ತಿ ಅವರು ದಲಿತ ಬದುಕನ್ನು ದಲಿತತ್ವದ ಒಳಮೈಯಿಂದ ಹೇಳುತ್ತಾ ಹೋಗುವುದು ಒಂದು ಬಗೆಯಾದರೆ ಹೊರಮೈಯಿಂದ ಹೇಳುತ್ತಾ ಹೋಗುವುದು ಇನ್ನೊಂದು ಬಗೆ. ಕುಂ.ವೀ. ಕತೆಗಳಲ್ಲಿ ಈ ಎರಡು ಬಗೆಯ ನಿರೂಪಣಾ ಕ್ರಮವಿದೆ(೧೯೮೩: ೪೩).

ಈ ಅಭಿಪ್ರಾಯದ ಬಗ್ಗೆ ಕುಂ.ವೀ. ಅವರ ಭಾಷಾಶೈಲಿಯನ್ನು ಕುರಿತು ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗಿದೆ.

ಕುಂ.ವೀ. ಅವರ ಕಥೆಗಳನ್ನು ಕುರಿತು ಜಿ. ರಾಜಶೇಖರ್ ಅವರು ಕುಂ.ವೀ. ಅವರಿಗಿರುವ ರಾಜಕೀಯ ಪ್ರಜ್ಞೆ ಅನನ್ಯವಾದದ್ದು. ಅಪರಿಮಿತವಾದದ್ದು. ಸಾಹಿತಿ ಸ್ವತಂತ್ರನಾಗುವುದು ಆತ ರಾಜಕೀಯ ಆಯ್ಕೆ ಮಾಡಿದಾಗ ಮಾತ್ರ. ಆದ್ದರಿಂದ ರಾಜಕೀಯೇತರವಾದ ಕಲೆ ಮತ್ತು ಸಾಹಿತ್ಯ ಎಂಬುದೇ ಇಲ್ಲ. ಈ ಎಲ್ಲರ ಗಾಢ ಅನುಭವ ಅವರಿಗಿದೆ(೧೯೯೬: ೧೬) ಎಂದಿದ್ದಾರೆ.

'ಇನ್ನಾದರೂ ಸಾಯಬೇಕು' ಕಥಾಸಂಕಲನವನ್ನು ಕುರಿತು ಜಿ.ಎಸ್. ಸದಾಶಿವ ಅವರು ಸಾಮಾಜಿಕ ಸಂದರ್ಭಗಳಿಗೆ ಲೇಖಕರು ಸ್ಪಂದಿಸುವ ಕ್ರಮವನ್ನು ಅವರ ಜೀವಂತಿಕೆಯನ್ನು ಪ್ರತಿಫಲಿಸುತ್ತದೆ ಎಂದಿದ್ದಾರೆ. ಕುಂ.ವೀ. ಅವರ ಬಹುಪಾಲು ಕತೆಗಳ ವಸ್ತು ಶೋಷಣೆ, ಹಸಿವು, ಅಮಾನವೀಯತೆ ಮೊದಲಾದವುಗಳಾಗಿವೆ. ಇಲ್ಲಿ ಹಸಿವು ಪಡೆದುಕೊಳ್ಳುವ ನಿಜವಾದ ನೋವಿನ ಧ್ವನಿ ಲಘು ಹಾಸ್ಯವನ್ನು ಮರೆಯದೆ, ಆಕ್ರೋಶವಾಗದೆ ಸಾಗುವ ನಿರೂಪಣೆ ಪರಿಣಾಮಕಾರಿ, ಅರ್ಧ ಶತಮಾನ ಕಳೆದರೂ ಚೋಮನ ಸಮಸ್ಯೆಗಳು ಹಾಗೆಯೇ ಉಳಿದಿವೆ

ಎಂಬುದನ್ನು ತೋರಿಸುವಂತಹ 'ಕಪ್ಪು ನೆಲದಲ್ಲೊಂದು ಕೆಂಪು ಕಥೆ' ಘೋಷಣೆ ಮತ್ತು ಕ್ರಿಯೆಗಳ ಮಧ್ಯ ದುರ್ಬಲರು ಅಸಹಾಯಕರಾಗುವುದನ್ನು ಕೊನೆಯ ವ್ಯಂಗ್ಯದಿಂದ ಚೂಪಾಗಿಸುತ್ತದೆ. 'ಚಂಡಮಾರುತ' ಮತ್ತು 'ಸಂಸ್ಕಾರ'ದಂತಹ ಕಥೆಗಳಲ್ಲಿ ಮಾನವೀಯತೆಯ ಕನಿಷ್ಠ ಮೌಲ್ಯಗಳು ಸವೆದು ಹೋದಂತಹ ಸಂದರ್ಭಗಳಲ್ಲಿ ನಿರೂಪಣೆಗಳು 'ಗರ್ಭ', 'ಜೆದೆ' ಮತ್ತು 'ಬಲಿ'ಯಂತಹ ಕತೆಗಳು ಕುಂ.ವೀ. ಅವರ ಜಾಣ ರಚನೆಗಳು. ಇವುಗಳ ತಂತ್ರ ಸಾಕಷ್ಟು ಸವೆದಿರುವಂತದ್ದು. ಅಷ್ಟು ಗಟ್ಟಿಯಾಗಿ ನಿಲ್ಲಲಾರವು. ಆದರೆ ಇವರ ಭಾಷೆಯ ಕಸುವು ಪ್ರಾದೇಶಿಕ ನುಡಿಗಟ್ಟನ್ನು ಸೂಕ್ತವಾಗಿ ಬಳಸುವ ಕ್ರಮದಿಂದಾಗಿ ಇವರ ಸಾಧಾರಣ ಕತೆಗಳು ನಾವು ಅನಾಸಕ್ತರಾಗುವಂತೆ ಮಾಡುತ್ತವೆ"(೧೯೮೨ ಬೆನ್ನುಡಿ) ಎಂದಿದ್ದಾರೆ.

**ಭಗವತಿ ಕಾಡು** ೧೯೯೦ರ ಕನ್ನಡ ಸಾಹಿತ್ಯ ಪರಿಷತ್ತಿನ **ರತ್ನಾಕರ ಮುದ್ದಣ ಪ್ರಶಸ್ತಿ** ವಿಜೇತ ಕೃತಿ. ಈ ಕಥಾಸಂಕಲನ ಕುರಿತು ಕನ್ನಡಪ್ರಭ ದಿನಪತ್ರಿಕೆಯಲ್ಲಿ ಹೆಚ್.ವಿ.ಶ್ರೀನಿವಾಸಮೂರ್ತಿ ಹೀಗೆ ಹೇಳಿದ್ದಾರೆ.

ಜಾತಿ ಮತ್ತು ವರ್ಗಸಂಘರ್ಷದ ಚಿತ್ರಣವನ್ನು ಒಳಗೊಂಡಿದ್ದರೂ ಸಹ ವ್ಯಕ್ತಿಯ ವೈಯಕ್ತಿಕ ಜೀವನದಲ್ಲಿ ಹೊರಗಿನಿಂದ ಆಗುವ ಶೋಷಣೆಗಿಂತ ಒಳಗಿನವರಿಂದಲೇ ಆಗುವ ಶೋಷಣೆ ಅದೆಷ್ಟು ಅಪಾಯಕಾರಿ ಎಂಬ ಸೂಚನೆ ಇರುವ ಕಥೆಗಳನ್ನು ಈ ಸಂಕಲನ ಒಳಗೊಂಡಿದೆ (ದಿನಾಂಕ: ೧೫-೬-೧೯೯೧).

ಕುಂ.ವೀರಭದ್ರಪ್ಪನವರ ಸಮಗ್ರ ಕಥೆಗಳನ್ನು ಕುರಿತು ಬರಗೂರು ರಾಮಚಂದ್ರಪ್ಪನವರು **ಬಂಡಾಯ ದಲಿತ ಸಾಹಿತ್ಯ** ಕೃತಿಯಲ್ಲಿ ವೀರಭದ್ರಪ್ಪನವರ ಕತೆಗಳ ವೈಶಿಷ್ಟ್ಯವೆಂದರೆ ಅವು ಒಳಗೊಳ್ಳುವ ಮಧ್ಯಮವರ್ಗದ ಓದುಗರಿಗೆ ಅಷ್ಟಾಗಿ ಪರಿಚಿತವಲ್ಲದ, ಅವರನ್ನು ಬೆಚ್ಚಿಬೀಳಿಸಬಲ್ಲ ಕೆಳವರ್ಗದ ಜೀವನ ಪ್ರಪಂಚ. ಬಳ್ಳಾರಿ ಜಿಲ್ಲೆಯ ಕೊಟ್ಟೂರು ಪ್ರದೇಶದ ದೇಶಿ ನುಡಿಗಟ್ಟನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಕೆಳವರ್ಗದ ಸ್ಥಿತಿಯ ದಾಖಲಾತಿ ಮಾತ್ರ ಅವರ ಉದ್ದೇಶವಲ್ಲ. ಬದಲಿಗೆ ಅದು ಬದಲಾಗುವ ಸೂಚನೆಯನ್ನು ಅವರು ಕೊಡುತ್ತಿದ್ದಾರೆ. ಅವರ ಕತೆಗಳ ಕೆಲವು ಮುಖ್ಯ ಪಾತ್ರಗಳಾದ ಡೋಮ, ಉಪ್ಪುಳಿ, ಎಲುಗ, ಠೊಣ್ಣೆ, ಕಿವುಡ ಮುಂತಾದ ವಿಲಕ್ಷಣ ವ್ಯಕ್ತಿಗಳಾಗಿದ್ದಂತೆ ಒಂದು ವರ್ಗದ ನೋವು ನಲಿವುಗಳನ್ನು ದುಃಖದುಮ್ಮಾನಗಳನ್ನು ಕನಸುಗಳನ್ನು ಸಂಕೇತಿಸುವ ಸಾಂಸ್ಕೃತಿಕ ಶಕ್ತಿಗಳು ಆಗುತ್ತವೆ.

ಅವರ ಇನ್ನೊಂದು ವಿಶೇಷವೇನೆಂದರೆ ಕೆಳವರ್ಗದ ಭೀಕರ ಬಡತನ ಮತ್ತು ಆ ಬಡತನದಿಂದಾಗುವ ಅವಮಾನವನ್ನು ದಾಖಲಿಸುವಾಗ ಅವರು ಭಾವಾತಿರೇಕದ ಉರಿಯಲ್ಲಿ ಬೆಂದು ಹೋಗುವುದಿಲ್ಲ. ಆದರೆ ಆ ವರ್ಗದ ಪ್ರತಿಭಟನೆಯ ಧ್ವನಿ ಮಾತ್ರ ತುಂಬಾ

ರೊಮ್ಯಾಂಟಿಕ್ ಆದ ರೀತಿಯಲ್ಲಿ ಪ್ರಕಟವಾಗುವುದಿದೆ. ಅವರು ಕಥೆಗಳ ಮೂಲಕ ಶೂದ್ರಾನುಭವವನ್ನು ಶೂದ್ರರು ಮೈಕೊಡವಿಕೊಂಡು ಮೇಲೆ ಏಳುತ್ತಿದ್ದಾರೆಂಬ ಸೂಚನೆಯನ್ನು ನೀಡುತ್ತಿದ್ದಾರೆ (೧೯೯೦: ೩೦) ಎಂದಿದ್ದಾರೆ.

ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ 'ಕಪ್ಪು' ಕಾದಂಬರಿ ಕುರಿತು ಅದರ ಬೆನ್ನುಡಿಯಲ್ಲಿ ಪಿ.ಲಂಕೇಶ್ ಅವರು. 'ಗೂಳ್ಯಾಂ ಬಳ್ಳಾರಿಯಿಂದ ೨೫ ಕಿ.ಮೀ. ಅಂತರದ ಹಳ್ಳಿ. ಆದ್ದರಿಂದ ಕುಂ.ವೀ. ಗಡಿನಾಡು ಕನ್ನಡಿಗರೆಂದು ಹೆಸರಾಗಿದ್ದಾರೆ. ಅವರು ತಮ್ಮ ಕತೆ–ಕಾದಂಬರಿಗಳಲ್ಲಿ ಬಳ್ಳಾರಿಯ ಹಾಗೂ ಆಂಧ್ರದ ಕ್ರೌರ್ಯ, ಕೆಡುಕು ಮತ್ತು ನೋವನ್ನು ರಕ್ತ ಹೆಪ್ಪುಗಟ್ಟುವಂತೆ ಚಿತ್ರಿಸುತ್ತಾರೆ ಎನ್ನುವ ಹೇಳಿಕೆಯು ಕುಂ.ವೀ. ಅವರ ಆರಂಭದ ಬರವಣಿಗೆಯನ್ನು ಕುರಿತದ್ದಾಗಿದೆ.

ಟಿ.ಪಿ. ಅಶೋಕ ಅವರು 'ಸಾಹಿತ್ಯ ಮತ್ತು ಸಮಾಜ' ಕೃತಿಯಲ್ಲಿ ಕುಂ.ವೀರಭದ್ರಪ್ಪ ಮತ್ತು ದೇವನೂರ ಮಹಾದೇವ ಅವರ ಬರವಣಿಗೆಯನ್ನು ಕುರಿತು ತೌಲನಿಕವಾಗಿ ವಿಚಾರ ಮಾಡುತ್ತಾ ಕುಂ.ವೀ. ತಮ್ಮ ಕತೆಗಳಲ್ಲಿ ಶೋಷಣೆಯ ವಿವಿಧ ಮಜಲುಗಳನ್ನು, ವಿವಿಧ ಹಂತಗಳನ್ನು ಮತ್ತು ವಿವಿಧ ರೀತಿಗಳನ್ನು ಕಂಡರಿಸಿದ್ದಾರೆ. ಅದರೆಲ್ಲಾ ಒಳಸೂಕ್ಷ್ಮಗಳನ್ನು ಕಣ್ಣಿಗೆ ಕಟ್ಟಿದ ಹಾಗೆ, ಮನಸ್ಸಿಗೆ ಮುಟ್ಟುವ ಹಾಗೆ, ಹೃದಯಕ್ಕೆ ತಟ್ಟುವ ಹಾಗೆ ದಟ್ಟವಾಗಿ ಮತ್ತು ಸ್ಪಷ್ಟವಾಗಿ ಚಿತ್ರಿಸುತ್ತಾರೆ. ಕುಂ.ವೀ. ತಮಗಿರುವ ಇಂಥ ಅನುಭವ ಸಮೃದ್ಧಿಯ ಹಿನ್ನೆಲೆಯಲ್ಲಿ ದೇವನೂರ ಮಹಾದೇವರ ಕಲೆಗಾರಿಕೆಯನ್ನು ರೂಢಿಸಿಕೊಂಡಲ್ಲಿ ಅವರನ್ನು ಮೀರಿಸಬಲ್ಲ ಕತೆಗಾರರಾಗಬಹುದು(೧೯೮೦: ೧೧೫) ಎಂದು ಹೇಳಿದ್ದಾರೆ.

ಅಧ್ಯಾಯ ಎರಡು

# ಕುಂ.ವೀರಭದ್ರಪ್ಪ ಅವರ ಜೀವನ

೨.೧. ಬಾಲ್ಯಜೀವನ

೨.೨. ಶೈಕ್ಷಣಿಕ ಜೀವನ

೨.೩. ವೃತ್ತಿಜೀವನ

೨.೪. ಕೌಟುಂಬಿಕ ಜೀವನ

೨.೫. ಪ್ರಭಾವ ಬೀರಿದ ಗ್ರಾಮೀಣ ಪರಿಸರ

ಅಧ್ಯಾಯ ಎರಡು

# ಕುಂ.ವೀರಭದ್ರಪ್ಪ ಅವರ ಜೀವನ

ಯಾವುದೇ ಲೇಖಕನಿಗೆ ಅನುಭವ, ಅನ್ವೇಷಣೆ, ಗ್ರಹಿಕೆಗಳು ತಾನು ಬದುಕುತ್ತಿರುವ ಸಮಾಜ, ಸಂಸ್ಕೃತಿ ಮತ್ತು ಪರಿಸರದಿಂದ ಬರುತ್ತಿರುತ್ತವೆ. ಇದಕ್ಕೆ ತನ್ನ ಕಾಲದ ಸಮಕಾಲೀನತೆ, ಗತ ಬದುಕಿನ ಘಟನಾವಳಿಗಳ ನೆನಪು ಮತ್ತು ತನ್ನ ಓದಿನ ಬೌದ್ಧಿಕತೆಯ ದೃಷ್ಟಿಧೋರಣೆಗಳು ಇವೆಲ್ಲಾ ಅವನ ಬರಹಗಳನ್ನು ರೂಪಿಸುತ್ತಿರುತ್ತವೆ. ಈ ಹಿನ್ನೆಲೆಯಲ್ಲಿ ಕುಂ.ವೀ. ಅವರು ನಡೆದು ಬಂದ ಅವರ ಬದುಕಿನ ಹೆಜ್ಜೆ ಗುರುತುಗಳನ್ನು ಮತ್ತು ಅವರ ಸಾಹಿತ್ಯದ ರಚನೆಗಳನ್ನು ಇಲ್ಲಿ ಪರಿಶೀಲಿಸಬಹುದಾಗಿದೆ.

## ೨.೧. ಬಾಲ್ಯಜೀವನ

ಕರ್ನಾಟಕದ ಪ್ರಮುಖ ಜಿಲ್ಲೆಗಳಲ್ಲಿ ಬಳ್ಳಾರಿಯೂ ಸಹ ಒಂದು. ಇದು ಶ್ರೀಮಂತವಾದ ಖನಿಜ ಸಂಪತ್ತು ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದ ಜಿಲ್ಲೆಯಾಗಿದೆ. ತುಂಗಭದ್ರಾ ನದಿಯ ದಂಡೆಯಲ್ಲಿರುವ ಹೊಸಪೇಟೆಗೆ ೬೫ ಕಿ.ಮೀ. ದೂರದಲ್ಲಿರುವ ಕೊಟ್ಟೂರು ಕಲೆ, ಸಂಸ್ಕೃತಿ, ವಚನ ಸಾಹಿತ್ಯ ಇವುಗಳ ತವರು ಭೂಮಿಯಾಗಿದೆ. ಇಲ್ಲಿ ಬಾಳಿ ಬದುಕಿದ ಶರಣ ಶ್ರೀ ಕೊಟ್ಟೂರು ಗುರುಬಸವೇಶ್ವರರು ಒಬ್ಬ ಜಾತ್ಯತೀತವಾದಿ ಶರಣ ಪರಂಪರೆಯ ಹರಿಕಾರರಾಗಿದ್ದರು. ಇದು ಒಂದು ಪುಣ್ಯಕ್ಷೇತ್ರವಾಗಿದೆ. ಇಂತಹ ಪುಣ್ಯಕ್ಷೇತ್ರದಲ್ಲಿ ಕುಂ.ವೀರಭದ್ರಪ್ಪ ನವರು ಅಕ್ಟೋಬರ್ ಒಂದು ೧೯೫೩ರಲ್ಲಿ ಜನಿಸಿದರು. ಇವರ ತಂದೆ ಹಾಲಪ್ಪ, ತಾಯಿ ಕೊಟ್ರಮ್ಮ. ಕುಂ.ವೀ. ಅವರಿಗೆ ಅಕ್ಕ ರುದ್ರಮ್ಮ, ತಂಗಿ ಮಹಾದೇವಮ್ಮ ಹಾಗೂ ಈರಣ್ಣ ಮತ್ತು ಶಿವಮೂರ್ತಿ ಎಂಬ ಇಬ್ಬರು ತಮ್ಮಂದಿರು ಇದ್ದರು. ಇವರಲ್ಲಿ ತಮ್ಮ ಈರಣ್ಣ ಅಕಾಲಿಕ ಮರಣಕ್ಕೆ ತುತ್ತಾದನು.

ಕುಂ.ವೀ. ಅವರೇ ಹೇಳುವಂತೆ, "ಒಂದು ರೀತಿಯ ಅಲೆಮಾರಿ ವಂಶ ನಮ್ಮದು. ಅವರ ಪೂರ್ವಿಕರು ಹೇಳುವಂತೆ ಒಂದು ಸಂಶೋಧನೆಯ ಪ್ರಕಾರ ನಮ್ಮ ಹಿರಿಯರ ಮೂಲ ಇರುವುದು ಹಂಪೆಯ ಹತ್ತಿರ ಇರುವ ರಾಮಸಾಗರ... ಬರದಿಂದಾಗಿಯೋ ತಂಟೆತಕರಾರಿ ನಿಂದಾಗಿಯೋ ಅವರು ಅಲ್ಲಿಂದ ವಲಸೆ ಹೊರಟು ತೆಕ್ಕಲಕೋಟೆಗೆ ಹೋಗಿ ನೆಲೆ ಕಂಡುಕೊಂಡರಂತೆ. ನಂತರ ಅವರ ತಂದೆಯ ಪ್ರೇಮಪ್ರಕರಣದಿಂದ ಅವರು ವಿಶಿಷ್ಟ ಗುಣಲಕ್ಷಣಗಳಿರುವ ಕೊಟ್ಟೂರ ಕಡೆ ಬಂದು ನೆಲೆ ನಿಂತರು."[೧]

ಕುಂ.ವೀ. ಅವರ ಮೇಲೆ ಅವರ ತಂದೆಯವರು ಸಾಕಷ್ಟು ಪ್ರಭಾವ ಬೀರಿದ್ದಾರೆ. ಅವರ ತಂದೆಯವರು ಒಬ್ಬ ಕಲಾವಿದರಾಗಿದ್ದರು. ಬಳ್ಳಾರಿ ಮತ್ತು ಆಂಧ್ರದ ಸರಹದ್ದಿನಲ್ಲಿ ಹರಿಯುವ ಹಗರಿಯ ಇಕ್ಕೆಲದಲ್ಲಿರುವ ಪ್ರದೇಶ ಜಾನಪದ ದೃಷ್ಟಿಯಿಂದ ಸಂಪದ್ಭರಿತವಾದುದು. ಈ ಪ್ರದೇಶದಲ್ಲಿ ಬರುವ ರೈತಾಪಿ ಜನರು ವರ್ಷದಲ್ಲಿ ಎರಡು ಮೂರು ಸಾರಿಯಾದರೂ ಬಣ್ಣ ಹಚ್ಚುವವರೆ. ಈ ಭಾಗದಲ್ಲಿ ಬಯಲಾಟಗಳು ಹೆಚ್ಚು ಪ್ರಸಿದ್ಧಿಯಲ್ಲಿ ಇದ್ದವು. ಲೇಖಕರ ತಂದೆ ಹಾಲಪ್ಪ(ಅಳ್ಳೆಪ್ಪ) ಈ ನಾಟಕಗಳಲ್ಲಿ ಸ್ತ್ರೀ ಪಾತ್ರಗಳನ್ನು ಧರಿಸುವುದರಲ್ಲಿ ಹಾಗೂ ಅವುಗಳನ್ನು ಅಚ್ಚುಕಟ್ಟಾಗಿ ನಿಭಾಯಿಸುವುದರಲ್ಲಿ ಅದ್ಭುತ ಕಲಾವಿದರಾಗಿ ಹೆಸರಾಗಿದ್ದರು. ಇವರು ಅನಕ್ಷರಸ್ಥ ರಾದರೂ ಅವಿದ್ಯಾವಂತರೇನಾಗಿರಲಿಲ್ಲ. ಜಾನಪದ ಕತೆ, ಹಾಡುಗಳು, ಮಹಾಭಾರತ, ರಾಮಾಯಣ ಪ್ರಸಂಗಗಳನ್ನು ಹೇಳುತ್ತಿದ್ದರು.

### ೨.೨. ಶೈಕ್ಷಣಿಕ ಜೀವನ

ಕುಂ.ವೀ. ಅವರ ಪ್ರಾಥಮಿಕ ಶಿಕ್ಷಣವು ಕೊಟ್ಟೂರಿನಲ್ಲಿಯೇ ಆಯಿತು. ಇವರ ವಂಶದಲ್ಲಿ ಇವರೇ ಅಕ್ಷರಸ್ಥರಾದವರಲ್ಲಿ ಪ್ರಥಮರಾಗಿದ್ದಾರೆ. ಇವರು ತುಂಬಾ ಬಡತನದ ಸ್ಥಿತಿಯಲ್ಲಿಯೇ ಪ್ರಾಥಮಿಕ ಹಾಗೂ ಪ್ರೌಢಶಾಲಾ ಶಿಕ್ಷಣವನ್ನು ಮುಗಿಸಿದರು. ಕುಂ.ವೀ. ಅವರು ತಾವು ಅಕ್ಷರ ಕಲಿತ ಪ್ರಸಂಗವನ್ನು ಈ ರೀತಿ ಹೇಳುತ್ತಾರೆ –"ಗ್ರಾಹ್ಯವಲ್ಲದ ಗೋತ್ರ, ವರ್ಣವಿಲ್ಲದ ಕಣ್ಣು, ಕಿವಿಯಿಲ್ಲದ ಕೈಕಾಲಿಲ್ಲದ ಹಾಗೂ ನಿತ್ಯ ಸರ್ವವ್ಯಾಪಿಯಾದ ಸರ್ವಗತ. ಅತ್ಯಂತ ಸೂಕ್ಷ್ಮ ಅಧ್ಯಯನವಾದ ಅಕ್ಷರಜ್ಞಾನವನ್ನು ತರಗತಿಯಿಂದ ತರಗತಿಗೆ ಕೈವಶ ಮಾಡಿಕೊಳ್ಳುತ್ತಾ ಏಳನೆ ತರಗತಿ ಪಬ್ಲಿಕ್ ಪರೀಕ್ಷೆಯನ್ನು ನಾನು ಪಾಸ್ ಮಾಡಿದಾಗ ತಂದೆ ಕುಂಬಾರ ಹಾಲಪ್ಪನಿಗೆ ಆದ ಸಂತೋಷ ಅಷ್ಟಿಷ್ಟಲ್ಲ. ಆತ ಹೋಳಿಗೆ ಮಾಡಿಸಿ ಶಿಕ್ಷಕರಿಗೆ ಹಾಗೂ ಇಡೀ ಓಣಿಗೆ ಊಟ ಹಾಕಿದ."[೨] ಹಾಲಪ್ಪನವರಿಗೆ ಮಗನ ಭವಿಷ್ಯ ಮುಖ್ಯವಾಗಿತ್ತು. 'ಅಪ್ಪನಿಗೆ ಒಲಿಯದ ಇಂಗ್ಲೀಷ್ ತನ್ನ ಜೇಷ್ಠ ಪುತ್ರನಿಗಾದರೂ ಒಲಿಯಲೇಬೇಕು ಎಂಬ ಸದುದ್ದೇಶದಿಂದ ಏನೆಲ್ಲಾ ಪ್ರಯತ್ನ ನಡೆಸಿದ್ದರು. ಲೇಖಕರೇ ಹೇಳುವಂತೆ ಅವರು ಇಂಗ್ಲೀಷ್ ಕಲಿಯುವಲ್ಲಿ ನಡೆದ

ಒಂದು ಹಾಸ್ಯ ಪ್ರಸಂಗ–"ಒಟ್ಟಿನಲ್ಲಿ ಆ ದಿವಸ ನನ್ನ ಗ್ರಹಚಾರ ಸರಿಯಿರಲಿಲ್ಲವೆಂದು ಕಾಣಿಸುತ್ತದೆ". ಆತ ನನ್ನನ್ನು ಎದುರಿಗೆ ಕೂಡ್ರಿಸಿಕೊಂಡು "ಬಣವಿಗೆ ಇಂಗ್ಲೀಷ್‌ನಲ್ಲಿ ಏನಂತಾರೆ"? ಎಂದು ಕೇಳುವದೇನು?... ನಾನು ಹಿಂದೆ ಮುಂದೆ ನೋಡದೆ "ಕೊಟಾರ್" ಎಂದು ಉತ್ತರಿಸಿ ಬಿಟ್ಟೆನು, ಆದ್ದರಿಂದ ಖುಷಿಗೊಂಡ ಆತ ಎಂದಿನಂತೆ ನಾಕಾಣೆಯನ್ನು ಕೊಟ್ಟು ಬೆನ್ನು ಚಪ್ಪರಿಸಿ ಕಳಿಸಿದೊಡನೆ ನೆಮ್ಮದಿಯ ಉಸಿರುಬಿಟ್ಟೆ. ಆಗ ನನಗೆ ಇಂಗ್ಲೀಷ್ ಹೇಳಿಕೊಡುತ್ತಿದ್ದ ಪೇದೆ ನಾಗಪ್ಪ ಬೇರೆ ಊರಲ್ಲಿದ್ದುದು ಅದೃಷ್ಟವೆಂದೇ ಭಾವಿಸಿದೆ. ಆದರೆ ಅಪ್ಪ ಎರಡು ಮೂರು ದಿವಸಗಳ ಕಾಲ ಅಶ್ವಮೇಧಯಾಗದ ಕುದುರೆಯಂತೆ ಊರಲ್ಲಿ ಸಂಚರಿಸಿ ಕೆಲವು ಶಿಕ್ಷಕರನ್ನು ಖುದ್ದು ಭೇಟಿ ಮಾಡಿ ಬಣವಿಗೆ ಇಂಗ್ಲೀಷ್ ಅರ್ಥವನ್ನು ಹೇಗೋ ಪತ್ತೇ ಹಚ್ಚಿದ. ಮುಂದೊಂದು ದಿವಸ ಪುನಃ ನನ್ನನ್ನು ಕರೆದು ಎದುರಿಗೆ ಕೂಡ್ರಿಸಿಕೊಂಡು "ಬಣವಿಗೆ ಇಂಗ್ಲೀಷಿನಲ್ಲಿ ಏನನ್ನುವರು? ಎಂದು ಕೇಳಿಬಿಡುವುದೇನು?... ನನಗೆ ನೆನಪಿದ್ದರೆ ತಾನೆ "ಡೆಕಾರ್" ಎಂದುತ್ತರಿಸಿದೆನು. ಪ್ರಸನ್ನ ವದನರಾಗಿ ತೀರಾ ಸನಿಹದಲ್ಲಿ ಕೂಡ್ರಿಸಿಕೊಂಡು ಮೈದಡುವುತ್ತಾ "ನಿನ್ನ ಇಂಗ್ಲೀಷ್ ಬಾಳ ಬೆರಕಿ ಐತೆ ಬಿಡಪ್ಪಾ... ಅದು ಒಂದು ವಾರದಲ್ಲಿ ಇಷ್ಟೊಂದು ಬಣ್ಣ ಬದಲಾಯಿಸಿತೆಂದು ಕೊಂಡಿರಲಿಲ್ಲ. ಉದಾಹರಣೆಗೆ ಬಣವೆಗೆ ಹಿಂದಿನ ವಾರ ಕೊಟಾರ್ ಅಂತ ಇದ್ದುದ್ದು ಈ ದಿವಸ 'ಡೆಕಾರ್' ಆಗಿಬಿಟ್ಟಿರುವುದಲ್ಲಾ"... ಎಂದು ಹೇಳಿದೊಡನೆ ನಾನು ಪಾತಾಳಕ್ಕಿಳಿದು ಬಿಟ್ಟೆ. "ಅಲ್ಲಲೆ... ನನ್ನನ್ನೇನು ಕುಂಬಾರ ಅಂದ್ಕೊಂಡು ಬಿಟ್ಟೆಯಾ... ಸುಳ್ಯಾಮಗನೆ" ಎಂದು ಹೇಳುತ್ತಾ ರಪ್ಪಂತ ಕೆನ್ನೆಗೆ ಬಾರಿಸಿದ. ಕಣ್ಣಲ್ಲಿ ದೀಪಾವಳಿ... ಈ ರೀತಿಯ ಕಲಿಕಾ ಕಿರುಕುಳವಿರದಿದ್ದಲ್ಲಿ ನಾನು ಇಂಗ್ಲೀಷ್‌ನಲ್ಲಿ ಮಹಾಪಂಡಿತನಾಗುತ್ತಿದ್ದೇನೇನೋ... ಎಂದು ಲೇಖಕರು ತಮ್ಮ ಕಲಿಕೆಯಲ್ಲಿ ಆದ ಕಹಿ ಅನುಭವಗಳನ್ನು ಹಂಚಿಕೊಂಡಿದ್ದಾರೆ.'[೬] ಇದರ ಜೊತೆಗೆ ಇದೇ ಇಂಗ್ಲೀಷಿಗೆ ಸಂಬಂಧಪಟ್ಟಂತ ಮತ್ತೊಂದು ಪ್ರಸಂಗವನ್ನು ಅವರು ಹೇಳುತ್ತಾರೆ. ಒಂದು ದಿವಸ ಅವರ ತರಗತಿಯ ಶಿಕ್ಷಕರಾದ ಕರಿಯಪ್ಪ ಒಂದು ದಿವಸ "ಲೇ ವೀರಭದ್ರಿ... ಹೆಡ್ ಮಾಸ್ತರಾಫೀಸಿಗೆ ಹೋಗಿ ಒಂದು ಸ್ಟೂಲ್ ತಗೊಂಡು ಬಾ" ಎಂದು ಹೇಳಿದರು. ಸುಯ್ಯಂತ ಹೋಗಿ ತಲುಪಿದೆ. ಆಫೀಸಿನಲ್ಲಿ ಮೇಷ್ಟ್ರುಗಳೆಲ್ಲ ಹರಟೆ ಹೊಡೆಯುತ್ತಾ ಕೂತಿದ್ದರು. ತಲುಪಿದೊಡನೆ "ಸಾರ್ ಮೇಷ್ಟ್ರು ಹೇಳಿದರು... ಸ್ಕೂಲ್ ಕೊಡಬೇಕಂತೆ" ಎಂದೆ. ಅದಕ್ಕವರು ಗೊಳ್ಳಂತ ನಕ್ಕರು... ಕಾರಣ ನಾನು ಸ್ಟೂಲ್ ಎಂಬ ಪದಕ್ಕೆ ಬದಲಾಗಿ ಸ್ಕೂಲ್ ಎಂದು ಪದ ಬಳಸಿದ್ದೆ. ನಗಲು ಅವರಿಗೆ ಅಷ್ಟೇ ಸಾಕಾಗಿತ್ತು. ಅವರ ಪೈಕಿ ಒಬ್ಬ "ಲೇ... ನೀನ್ ಕುಂಬಾರನೆಂದರೆ ಥೇಟ್ ಕುಂಬಾರ ನೋಡು. ನಿನ್ನಂಥೋರಿಗೆ ಇಂಗ್ಲೀಷೊಂದು ಕೇಡು" ಎಂದು ಅವಹೇಳನ ಮಾಡಿದ್ದರು."[೭]

ಕುಂ.ವೀ. ಅವರ ಬಾಲ್ಯದ ಕಹಿ ಅನುಭವಗಳು, ಕುಂಬಾರಿಕೆಯ ಕೀಳರಿಮೆಯಿಂದಾಗಿಯೋ ಅವರೇ ಹೇಳುವಂತೆ ಎಲ್ಲರನ್ನೂ ಓವರ್‌ಟೇಕ್ ಮಾಡಬೇಕೆಂಬ ಹುಂಬುತನದಿಂದಾಗಿಯೋ ಶಾಲೆಯನ್ನು ಜಿಗಣೆಯಂತೆ ಅಂಟಿಕೊಂಡು ಛಲದಿಂದ ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಿದರು. ತಂದೆ ಹಾಲಪ್ಪನವರು ಬಾಲ್ಯದಲ್ಲಿಯೇ ಅವರಿಗೆ ಓದಲಿಕ್ಕೆ ಕೃಷ್ಣಶಾಸ್ತ್ರಿಗಳ ವಚನಭಾರತವನ್ನು, ತಿದ್ದುತ್ತಾ ಅವರಿಂದ ಬಂಧು ಬಾಂಧವರಿಗೆ ಪತ್ರ ಬರೆಯಿಸುತ್ತಿದ್ದರು. ಬಾಲ್ಯದಲ್ಲಿ ಅವರ ತಂದೆ ಮತ್ತು ಅಜ್ಜಿಯು ಅವರಿಗೆ ಹೆಚ್ಚು ಹೆಚ್ಚು ಕಥೆಗಳನ್ನು ಹೇಳುತ್ತಾ ಅವರೊಳಗೊಬ್ಬ ಕಥೆಗಾರನನ್ನು ಸೃಷ್ಟಿಸಿದರು.

ಕುಂ.ವೀ. ಅವರು ೧೫ನೇ ವಯಸ್ಸಿನಲ್ಲಿ ೧೧ನೇ ತರಗತಿಯನ್ನು ಪಾಸುಮಾಡಿದರು. ಬಡತನದ ಬವಣೆಯಿಂದಾಗಿ ಕೆಲವು ವರ್ಷ ರೈಲ್ವೆ ಇಲಾಖೆಯಲ್ಲಿ ದಿನಗೂಲಿ ನೌಕರರಾಗಿ ಸೇವೆಯನ್ನು ಸಲ್ಲಿಸಿದರು. ಕಲಿಯಬೇಕೆಂಬ ಆಸೆ ಇದ್ದ ಇವರು ೧೯೭೧-೧೯೭೩ರಲ್ಲಿ ಪ್ರಮುಖ ವಿದ್ಯಾಪ್ರಸಾರದ ಕೇಂದ್ರಗಳಲ್ಲಿ ಒಂದಾದ ತುಮಕೂರಿನ ಸಿದ್ಧಗಂಗಾಮಠದಲ್ಲಿ ಟಿ.ಸಿ.ಎಚ್. ತರಬೇತಿಯನ್ನು ಪೂರೈಸಿದರು. ಮುಂದೆ ಬಡತನದ ಸ್ಥಿತಿಯಲ್ಲಿ ಓದಲು ಆಗದಿದ್ದರಿಂದ ಇವರು ಉಪಜೀವನಕ್ಕಾಗಿ ಉದ್ಯೋಗವನ್ನು ಅರಸಿ ನಡೆದರು. ಕೆಲವು ವರ್ಷಗಳಲ್ಲಿ ಉದ್ಯೋಗವನ್ನು ಪಡೆದ ನಂತರ ಕೆಲಸದಲ್ಲಿದ್ದುಕೊಂಡೇ ಮೈಸೂರು ವಿಶ್ವವಿದ್ಯಾನಿಲಯದಿಂದ ಎಂ.ಎ. ಪದವಿಯನ್ನು ಪಡೆದುಕೊಂಡರು. ಹೀಗೆ ಬಡತನದ ಪರಿಸ್ಥಿತಿಯಲ್ಲಿಯೂ ಕುಂ.ವೀ. ಅವರು ಉನ್ನತ ಮಟ್ಟದ ಸ್ನಾತಕೋತ್ತರ ಪದವಿಯನ್ನು ಪಡೆದ ಅವರ ಮನೋದಾರ್ಢ್ಯವನ್ನು ಸೂಚಿಸುತ್ತದೆ. ಒಂದು ಗುರಿಯನ್ನು ಅಥವಾ ಸಾಧನೆಯನ್ನು ಗೈಯಬೇಕೆನ್ನುವ ವ್ಯಕ್ತಿ ಎಷ್ಟೇ ಕಷ್ಟ ಬಂದರೂ ಛಲ ಬಿಡದೇ ತನ್ನ ಗುರಿಯನ್ನು ಮುಟ್ಟುತ್ತಾನೆ ಎನ್ನುವುದಕ್ಕೆ ಕುಂ.ವೀ. ಅವರ ಜೀವನವೇ ಸಾಕ್ಷಿಯಾಗಿದೆ.

**೨.೩. ವೃತ್ತಿಜೀವನ**

ಅತ್ಯಂತ ಕಷ್ಟದಿಂದ ವಿದ್ಯಾಭ್ಯಾಸ ಪೂರೈಸಿದ ಇವರಿಗೆ ವಿದ್ಯಾಭ್ಯಾಸ ಎಷ್ಟು ಮುಖ್ಯವಾಗಿತ್ತೋ ಉದ್ಯೋಗವು ಸಹ ಅಷ್ಟೇ ಮುಖ್ಯವಾಗಿತ್ತು. ಪ್ರಾರಂಭದ ದಿನಗಳಲ್ಲಿ ರೈಲ್ವೆ ಇಲಾಖೆಯಲ್ಲಿ ದಿನಗೂಲಿ ನೌಕರರಾಗಿ ಸೇರಿಕೊಳ್ಳುತ್ತಾರೆ. ನಂತರದ ಕೆಲವು ದಿನಗಳಲ್ಲಿ ರಾಯಚೂರಿನ 'ವಾಣಿ' ಪತ್ರಿಕೆಯಲ್ಲಿ ವರದಿಗಾರರಾಗಿ ಕೆಲವು ತಿಂಗಳು ಕಾರ್ಯ ನಿರ್ವಹಿಸುತ್ತಾರೆ. ಇದರಿಂದ ಪ್ರಾರಂಭದಲ್ಲಿ ತಮ್ಮ ಕವಿತೆ ಹಾಗೂ ಕತೆಗಳಿಗೆ ಅನುಕೂಲವಾಗುತ್ತದೆ. ಕುಂ.ವೀ. ಅವರು ಟಿ.ಸಿ.ಎಚ್. ಮುಗಿಸಿದ ಸಂದರ್ಭದಲ್ಲಿ ಇಂದಿರಾಗಾಂಧಿಯವರು ತುರ್ತುಪರಿಸ್ಥಿತಿಯನ್ನು ಹೇರಿದ್ದರು. ಇದೇ ಸಂದರ್ಭದಲ್ಲಿ ಜಯಪ್ರಕಾಶ ನಾರಾಯಣ ಅವರು ಇಂದಿರಾಗಾಂಧಿಯವರ

ಸರ್ವಾಧಿಕಾರದ ವಿರುದ್ಧ ಪ್ರತಿಭಟನೆ ಯನ್ನು ಹಮ್ಮಿಕೊಂಡಿದ್ದರು. ಅದನ್ನು ಪ್ರತಿಭಟಿಸಲು ಧಾರವಾಡದಲ್ಲಿ ವಿದ್ಯಾರ್ಥಿಗಳು, ಲೇಖಕರು ಬೀದಿಗೆ ಬಂದಾಗ ಕುಂ.ವೀ. ಅವರು ಧಾರವಾಡಕ್ಕೆ ಬಂದು ನವನಿರ್ಮಾಣ ವೇದಿಕೆಯಲ್ಲಿ ಸೇರಿಕೊಳ್ಳುವುದರ ಮೂಲಕ ಪ್ರತಿಭಟನೆ ವ್ಯಕ್ತಪಡಿಸಿದರು. ಇಂತಹ ಪ್ರತಿಭಟನೆಗಳು ಅವರ ಸಾಹಿತ್ಯದ ಮೇಲೆ ಗಾಢವಾದ ಪರಿಣಾಮವನ್ನು ಬೀರಿದವು. ಮಗನ ಮನೋಭಾವವನ್ನು ಅರಿತ ಅವರ ತಂದೆಯವರು ಇವರನ್ನು ಅವರ ದೊಡ್ಡ ಮಗಳು ಆಂಧ್ರದಲ್ಲಿರುವ ರುದ್ರಮ್ಮನಲ್ಲಿಗೆ ಕಳುಹಿಸಿದರು. ಟಿ.ಸಿ.ಎಚ್. ಮುಗಿಸಿದ್ದ ಇವರಿಗೆ ಅಲ್ಲಿ ಶಿಕ್ಷಕವೃತ್ತಿ ದೊರಕಿತು. ತಮ್ಮ ಶಿಕ್ಷಕ ವೃತ್ತಿಯನ್ನು ಆಂಧ್ರಪ್ರದೇಶದ ವಂದವಾಗಿಲಿಯಲ್ಲಿ ೧೯೮೧ರಲ್ಲಿ ಪ್ರಾರಂಭಿಸಿದರು. ಕೆಲವು ವರ್ಷಗಳ ನಂತರ ಮುಖ್ಯೋಪಾಧ್ಯಾಯರಾಗಿ ಸೇವೆ ಸಲ್ಲಿಸಿದರು. ನಂತರ ಇವರು ಬಳ್ಳಾರಿಯಿಂದ ೪೦ ಕಿ.ಮೀ. ದೂರದಲ್ಲಿರುವ ಆಂಧ್ರಪ್ರದೇಶದ ಕರ್ನೂಲು ತಾಲೂಕಿನ ಗೂಳ್ಯಂಗೆ ಪ್ರೌಢಶಾಲಾ ಶಿಕ್ಷಕರೆಂದು ಬಡ್ತಿ ಹೊಂದಿ ವರ್ಗಾವಣೆ ಯಾದರು. ಇಲ್ಲಿ ಕನ್ನಡ ಉಪಾಧ್ಯಾಯರಾಗಿ ಕಾರ್ಯ ಮಾಡುವ ಮೂಲಕ ಗಡಿಭಾಗದ ಕನ್ನಡ ಭಾಷೆ ಹಾಗೂ ಸಂಸ್ಕೃತಿಯ ಬಗೆಗೆ ಗಡಿಭಾಗದ ಜನತೆಯಲ್ಲಿ ಜಾಗೃತಿ ಮೂಡಿಸಿದರು. ಅಲ್ಲಿ ಹಲವರು ಯುವಕರೊಂದಿಗೆ ಸೇರಿ "ಗಡಿನಾಡ ಕನ್ನಡ ಯುವಕ ಸಂಘ"ವನ್ನು ಸ್ಥಾಪಿಸಿದರು ಮತ್ತು ಕನ್ನಡಪರವಾದ ಹಲವು ಅಭಿವೃದ್ಧಿ ಕಾರ್ಯವನ್ನು ಕೈಕೊಂಡರು. ಗೂಳ್ಯಂದಲ್ಲಿ ಕೆಲವು ವರ್ಷ ಕಾರ್ಯ ನಿರ್ವಹಿಸಿದ ಇವರು ಕರ್ನಾಟಕದ ಹಂಪಿಯ ಕನ್ನಡ ವಿಶ್ವವಿದ್ಯಾಲಯದಲ್ಲಿ ೧೯೯೩-೧೯೯೪ನೇ ಸಾಲಿನಲ್ಲಿ ಸಂದರ್ಶಕ ಪ್ರಾಧ್ಯಾಪಕರೆಂದು ನೇಮಕಗೊಂಡರು. ನಂತರ ಇವರು ಬಳ್ಳಾರಿಯ ಹತ್ತಿರವಿರುವ ಕರ್ನಾಟಕ ಮತ್ತು ಆಂಧ್ರದ ಗಡಿಭಾಗದ ಹಿರೇಹಾಳ ಎಂಬ ಗ್ರಾಮದಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಿ ಅಲ್ಲಿಯೇ ನಿವೃತ್ತಿ ಹೊಂದಿದರು.

### ೨.೪. ಕೌಟುಂಬಿಕ ಜೀವನ

ಪ್ರತಿಯೊಬ್ಬ ಮನುಷ್ಯನ ಜೀವನದಲ್ಲಿ ಕುಟುಂಬವೆಂಬುದು ಬಹುಮುಖ್ಯ ಪಾತ್ರ ವಹಿಸುತ್ತದೆ. ವ್ಯಕ್ತಿಸಂಸ್ಕಾರದ ಹಿಂದೆ ಕುಟುಂಬದ ಕೊಡುಗೆ ಅಪಾರವಾದದ್ದು. ಈ ಹಿನ್ನೆಲೆಯಲ್ಲಿ ಕುಂ.ವೀ. ಅವರ ಬಾಲ್ಯಜೀವನ, ಅವರ ವಿದ್ಯಾಭ್ಯಾಸ ಎಷ್ಟು ಮುಖ್ಯವೋ ಅವರ ಯೌವನದ ಅನುಭವಗಳು ಅಷ್ಟೇ ಮುಖ್ಯವಾಗುತ್ತವೆ. ಕುಟುಂಬಜೀವನಕ್ಕೆ ಕಾಲಿಟ್ಟ ಕುಂ.ವೀ. ಅವರು ಸುಂದರ ಪರಿಸರ ಮತ್ತು ಸಾಂಸ್ಕೃತಿಕ ಮಹತ್ವವನ್ನು ಪಡೆದುಕೊಂಡ ಹಾಸನ ಜಿಲ್ಲೆಯ ಯಮಸಂದಿ ಗ್ರಾಮದ ಅನ್ನಪೂರ್ಣ ಇವರನ್ನು ೧೯೮೩ರಲ್ಲಿ ಮದುವೆಯಾಗುತ್ತಾರೆ. ಇಲ್ಲಿಂದ ಲೇಖಕರ ಜೀವನದ ಮತ್ತೊಂದು ಅಧ್ಯಾಯವು ಪ್ರಾರಂಭವಾಗುತ್ತದೆ.

ವಿನಯಶೀಲರು, ಸುಸಂಸ್ಕೃತರು ಆದ ಸರಳ ವ್ಯಕ್ತಿತ್ವದ ಅನ್ನಪೂರ್ಣ ಅವರು ಅವರ ಬದುಕನ್ನು ಪ್ರವೇಶಿಸುವುದರ ಮೂಲಕ ಅವರ ಸಾಹಿತ್ಯಲೋಕದ ಬರಹಗಳಲ್ಲಿ ಕಥೆಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಇವರ ಪ್ರೀತಿಯ ದ್ಯೋತಕವಾಗಿ ಮೂವರು ಪುತ್ರರತ್ನರಾದ ಪುರೂರವ, ಶಾಲಿವಾಹನ ಹಾಗೂ ಪ್ರವರ. ಈ ಮಕ್ಕಳೊಂದಿಗೆ 'ಅನ್ನಪೂರ್ಣ' ನಿವಾಸದಲ್ಲಿ ಸುಂದರ ಹಾಗೂ ಸುಮಧುರ ದಾಂಪತ್ಯ ಜೀವನ ನಡೆಸುತ್ತಿದ್ದಾರೆ. ಪ್ರಸ್ತುತ ಈಗ ಕುಂ.ವೀ. ಅವರು ಕೇಂದ್ರ ಸಾಹಿತ್ಯ ಅಕಾಡೆಮಿ 'ರೈಟರ್ಸ್ ಇನ್ ರೆಸಿಡೆನ್ಸಿ' ಎಂಬ ಯೋಜನೆಯ ಅಡಿಯಲ್ಲಿ ತಮ್ಮ ಕೆಲವು ಕೃತಿಗಳಿಗೆ ಆರ್ಥಿಕ ಸಹಾಯವನ್ನು ಪಡೆದಿದ್ದಾರೆ.

**೨.೫. ಪ್ರಭಾವ ಬೀರಿದ ಗ್ರಾಮೀಣ ಪರಿಸರ**

ಲೇಖಕರ ಮೇಲೆ ಪ್ರಭಾವ ಬೀರಿದ ಕೊಟ್ಟೂರು ಐತಿಹಾಸಿಕವಾಗಿ ಪ್ರಸಿದ್ಧವಾಗಿದೆ. ಚಿಕ್ಕದೂ ಅಲ್ಲದ ದೊಡ್ಡದೂ ಅಲ್ಲದ ಪುಟ್ಟ ಪಟ್ಟಣ. ಈ ಊರಿನಲ್ಲಿ ಮೂವತ್ತಕ್ಕೂ ಹೆಚ್ಚು ಶಿಲಾಶಾಸನಗಳು ಇವೆ. ಈ ಊರಿನ ಮೂಲೆ ಮೂಲೆಯಲ್ಲಿ ಕದಂಬರು, ಚಾಲುಕ್ಯರು, ವಿಜಯನಗರದ ಅರಸರು ಮತ್ತು ಪಾಳೇಗಾರರು ನಿರ್ಮಿಸಿರುವ ಗುಡಿಗಳಿವೆ. ಶ್ರೀ ಗುರು ಕೊಟ್ಟೂರೇಶ್ವರರು ತಮ್ಮ ಲೀಲೆಯನ್ನು ತೋರಿಸಿದ ಐದು ಪ್ರಮುಖ ಮಠಗಳಿವೆ. ಈ ಮಠಗಳಿಂದಲೇ ಇದು ಇಂದು ಪುಣ್ಯಕ್ಷೇತ್ರವಾಗಿದೆ. ಕೊಟ್ಟೂರಿನ ಒಂದು ತುಂಬು ಓಣಿಯಲ್ಲಿ ಲೇಖಕರ ಮನೆ ಇದ್ದ ಕಾರಣ ಅಲ್ಲಿ ಎಲ್ಲಾ ವರ್ಗದ ಜನರು ವಾಸಿಸುತ್ತಿದ್ದರು. ಉಳ್ಳವರು, ಇಲ್ಲದವರು, ಜಗಳಗಂಟರು, ಸಂಪನ್ನರು, ರೋಗಿಗಳು, ಮಾನಸಿಕ ಅಸ್ವಸ್ಥರು, ವಿದೇಶದಲ್ಲಿ ನೆಲಸಿದವರು ಆಗಾಗ ತಮ್ಮ ಊರಿಗೆ ಬರುತ್ತಿರುತ್ತಾರೆ. ಇವರೆಲ್ಲರ ಸ್ನೇಹ, ಪರಿಚಯ ಲೇಖಕರ ಮೇಲೆ ಪ್ರಭಾವ ಬೀರಿದೆ. ಎಲ್ಲಕ್ಕಿಂತ ಹೆಚ್ಚು ಊರಿನ ಪ್ರಸಿದ್ಧ ಎರಡು ಮಠಗಳಾದ ಗಚ್ಚಿನ ಮಠ ಮತ್ತು ತೊಟ್ಟಿಲ ಮಠ ಇವರ ಮನೆಯ ಹತ್ತಿರವಿರುವ ಕಾರಣ ನಾನಾತರದ ಯಾತ್ರಿಕರು, ನಾನಾ ರೀತಿಯಲ್ಲಿ ಜನರು ಈ ಶ್ರದ್ಧಾಕೇಂದ್ರಗಳಿಗೆ ನಡೆದುಕೊಳ್ಳುವ ರೀತಿ, ಈ ಪರಿಸರದಲ್ಲಿ ಬಾಳಿ ಬದುಕುವ ಜನರ ದಿನನಿತ್ಯದ ಬದುಕಿನ ಜಂಜಾಟಗಳನ್ನು ತಮ್ಮ ಕೃತಿಯ ಉದ್ದಕ್ಕೂ ನಿರೂಪಿಸುತ್ತಾ ಸಾಗಿದರು. ಈ ಓಣಿಯಲ್ಲಿ ನಡೆಯುವ ಸಾವು ನೋವು ಜನಗಳ ಬದುಕಿನ ರೀತಿ-ನೀತಿಗಳನ್ನು ಅತ್ಯಂತ ನೈಜವಾಗಿ ಕಥೆಯಾಗಿಸಿ ಹೆಣೆದಿದ್ದಾರೆ. ಇವರ ಮನೆಯ ಹತ್ತಿರವೇ ಪೊಲೀಸ್‌ಠಾಣೆ ಇರುವುದರಿಂದ ದಿನನಿತ್ಯ ಅಲ್ಲಿ ನಡೆಯುವ ಗಲಾಟೆಗಳು, ಪೊಲೀಸ್ ಅಧಿಕಾರಶಾಹಿ ಧೋರಣೆ ಇವೆಲ್ಲವನ್ನು ಸೂಕ್ಷ್ಮಗ್ರಾಹಿಗಳಾದ ಲೇಖಕರು ತಮ್ಮ ಕಥೆಗಳಲ್ಲಿ ದಾಖಲಿಸುತ್ತಾ ಹೋಗುತ್ತಾರೆ. ಎಲ್ಲಕ್ಕಿಂತ ಮುಖ್ಯವಾಗಿ ಪ್ರತಿ ಮನೆಯೂ ತನ್ನದೇ ಆದ ಒಂದು ಪೂರ್ವ ಇತಿಹಾಸವನ್ನು ಹೊಂದಿರುತ್ತದೆ. ಪ್ರತಿ ವ್ಯಕ್ತಿಯ ಬದುಕು ಕೂಡ

ಅನೇಕ ರಮ್ಯ ಅದ್ಭುತ ಘಟನೆಗಳ ಒಂದು ಕಣಜವೇ ಆಗಿರುತ್ತದೆ. ಲೇಖಕರು ತಮ್ಮ ಸೂಕ್ಷ್ಮಗ್ರಹಿಕೆಯ ಮೂಲಕ ಸಮಾಜದಲ್ಲಿ ನಡೆಯುವ ಅನ್ಯಾಯ, ಬಡತನ, ದಬ್ಬಾಳಿಕೆ, ಹಾಸ್ಯ ಸಾವು, ನೋವು ಇವುಗಳನ್ನೆಲ್ಲಾ ಬಾಲ್ಯದಿಂದಲೂ ಹತ್ತಿರದಿಂದ ನೋಡುತ್ತಾ ಬಂದದ್ದರಿಂದ ಆ ಜನಗಳ ಪಾಡನ್ನು ಕಥೆಗಳಲ್ಲಿ ವಾಸ್ತವದ ನೆಲೆಗಟ್ಟಿನ ಮೇಲೆ ಚಿತ್ರಿಸುತ್ತಾ ಬಂದಿದ್ದಾರೆ. ಇವರ ಕಥೆಗಳಲ್ಲಿ ಬರುವ ಬಹಳಷ್ಟು ಪಾತ್ರಗಳು ಕೊಟ್ಟೂರಿನ ಪ್ರತಿ ಮನೆಯಲ್ಲಿಯೂ ಇದ್ದಂತಿವೆ. ಉದಾಹರಣೆಗೆ ಡಾ. ರೇವಣಸಿದ್ಧಪ್ಪ, ಶಿವಪೂಜೆ ಗೌಡರು, ಶೆಟ್ರು ಗುರುಶಾಂತಪ್ಪ, ಅಪಾರಿ ಸೆನಸೆಟ್ಟ ಕೊಟ್ರಜ್ಜ, ರುದ್ರಜ್ಜ, ಡಾ. ನಂಜಪ್ಪ, ನಿಜಲಿಂಗ, ನಿಲುವಂಜಿ ನಿಂಗವ್ವ ಹೀಗೆ ಹೇಳುತ್ತಾ ಹೋದರೆ ಈ ಪಾತ್ರಗಳ ಸಂಖ್ಯೆ ಬೆಳೆಯುತ್ತಾ ಹೋಗುತ್ತದೆ. ಇಂತಹ ಪಾತ್ರಗಳು ಕೊಟ್ಟೂರಿನಲ್ಲಿ ಬಾಳಿ ಬದುಕಿ ಸತ್ತು ಹೋದವರು ಇವರ ಕಥೆಗಳ ಪಾತ್ರಗಳಾಗಿ ಮತ್ತೆ ಬದುಕಿದ್ದಾರೆ. ಇಂತಹ ಗಟ್ಟಿ ಹಿನ್ನೆಲೆಯ ಗ್ರಾಮೀಣ ಭಾರತದ ಪಾತ್ರಗಳ ಚಿತ್ರಣ ಇವರಷ್ಟು ಸಮರ್ಥರಾಗಿ ಕಟ್ಟಿ ಕೊಟ್ಟವರು ವಿರಳವೆಂದೇ ಹೇಳಬಹುದು.

**ಕೊನೆಟಿಪ್ಪಣಿ**

೧. ಕುಂ.ವೀರಭದ್ರಪ್ಪ, ಗಾಂಧಿ ಕ್ಲಾಸು, ೨೦೧೦, ಸಪ್ನ ಬುಕ್‌ಹೌಸ್, ಬೆಂಗಳೂರು, ಪು. ೧೭

೨. ಕುಂ.ವೀರಭದ್ರಪ್ಪ, ನಿಜಲಿಂಗ ಕಥಾಸಂಕಲನ, ಮುನ್ನುಡಿ, ೧೯೯೪, ಯುವಕ ಸಂಘ, ರಾಮನಗರ.

೩. ಕುಂ.ವೀರಭದ್ರಪ್ಪ, ಗಾಂಧಿ ಕ್ಲಾಸು, ೨೦೧೦, ಸಪ್ನ ಬುಕ್‌ಹೌಸ್, ಬೆಂಗಳೂರು, ಪು. ೩೭

೪. ಅದೇ ಪು. ೪೪

ಅಧ್ಯಾಯ ಮೂರು

# ಕುಂ. ವೀರಭದ್ರಪ್ಪನವರ ಸಾಹಿತ್ಯ: ಪ್ರೇರಣೆ, ಪ್ರಭಾವ ಮತ್ತು ಪರಿಸರ

೩.೧. ಕುಂ.ವೀ. ಅವರ ಸಾಹಿತ್ಯ: ಬಂಡಾಯ ಸಾಹಿತ್ಯದ ಪ್ರೇರಣೆ

೩.೨. ಕುಂ.ವೀ. ಅವರ ಸಾಹಿತ್ಯ: ಕಥೆಗಾರರ ಪ್ರಭಾವ

೩.೩. ಕುಂ.ವೀ. ಅವರ ಸಾಹಿತ್ಯ: ವಿಚಾರವಾದಗಳ ಪ್ರಭಾವ

೩.೪. ಕುಂ.ವೀ. ಅವರ ಸಾಹಿತ್ಯ: ತೆಲುಗು ವಿಪ್ಲವ ಸಾಹಿತ್ಯ ಪ್ರಭಾವ

೩.೫. ಕುಂ.ವೀ. ಅವರ ಸಾಹಿತ್ಯ: ಕರ್ನಾಟಕ-ಆಂಧ್ರದ ಪರಿಸರ ಪ್ರಭಾವ

ಅಧ್ಯಾಯ ಮೂರು

# ಕುಂ. ವೀರಭದ್ರಪ್ಪನವರ ಸಾಹಿತ್ಯ: ಪ್ರೇರಣೆ, ಪ್ರಭಾವ ಮತ್ತು ಪರಿಸರ

ಕುಂ.ವೀ. ಅವರದು ಕಥನಕ್ಕೊಗ್ಗಿದ ಪ್ರತಿಭೆ. ಸಮಾಜದ ನಿರ್ಲಕ್ಷಿತ ಜನರ ಜೀವನವನ್ನು ಸಮೀಪದಿಂದ ಹಾಗೂ ಆಳವಾಗಿ ನೋಡಿದವರು. ದಟ್ಟವಾದ ಅನುಭವ, ಸೂಕ್ಷ್ಮ ವಿವರಣೆಗಳಿಂದ ಕೂಡಿದ ನಿರೂಪಣೆ, ಭಾಷೆಯ ಮೂಲಕವಾಗಿಯೇ ಪಾತ್ರಗಳನ್ನು ಜೀವಂತಗೊಳಿಸುವ ಕಲೆಯಿಂದಾಗಿ ಅವರು ನಮ್ಮ ಮಹತ್ವದ ಕತೆಗಾರರಲ್ಲೊಬ್ಬರಾಗಿದ್ದಾರೆ.

ಕುಂ.ವೀ. ಅವರ ಸಾಹಿತ್ಯ ಮನುಷ್ಯ ಮತ್ತು ಸಮಾಜದ ಬಗೆಗಿನ ವಿವರಣೆಯನ್ನು ನೀಡುವುದೇ ಆಗಿದೆ. ಶೋಷಣೆಯ ವಿರುದ್ಧ ಬಂಡೇಳುವುದು, ಅಸಮಾನತೆಯ ವಿರುದ್ಧ ಸಿಡಿದೇಳುವುದು, ವಿರೋಧಿಸುವುದು, ಬದುಕಿನಲ್ಲಿ ಸಹಬಾಳ್ವೆಯನ್ನು ರೂಪಿಸುವುದು, ಸಮಾಜದ ವವ್ಯಸ್ಥೆಯನ್ನು ಬದಲಾಯಿಸುವಲ್ಲಿ ಒತ್ತಾಯಿಸುವುದೇ ಆಗಿದೆ. ಅವರ ಸಾಹಿತ್ಯದಲ್ಲಿ ದಲಿತ ಮತ್ತು ದಲಿತೇತರರ ಬದುಕನ್ನು ತೌಲನಿಕವಾಗಿ ನೋಡಿದಾಗ ಹೋಲಿಸಲಾರದಷ್ಟು ಅಸಮಾನತೆ ಕಂಡುಬಂದದ್ದು ಪ್ರತಿಭಟನೆಯ ಕಾರಣಗಳಲ್ಲೊಂದು. ಅದು ಸ್ಫೋಟಗೊಳ್ಳುವಂತದ್ದೇ ಆಗಿದೆ. ಏಕೆಂದರೆ ವ್ಯವಸ್ಥೆಯಲ್ಲಿನ ಜನರು ತಮ್ಮ ಒತ್ತಡಗಳನ್ನು ಎಲ್ಲಿಯ ತನಕ ತಡೆದಾರು? ಇವು ಸಾಮಾಜಿಕ ವ್ಯವಸ್ಥೆಯ ಕ್ರೂರತೆಯನ್ನು ವಿರೋಧಿಸುವ ಅಂಶಗಳಾಗಿ ಅವರ ಸೃಜನಶೀಲ ಸಾಹಿತ್ಯದಲ್ಲಿ ಕಂಡುಬರುತ್ತದೆ.

### ೩.೧. ಕುಂ.ವೀ. ಅವರ ಸಾಹಿತ್ಯ: ಬಂಡಾಯ ಸಾಹಿತ್ಯದ ಪ್ರೇರಣೆ

ಕನ್ನಡ ಬಂಡಾಯ ಸಾಹಿತ್ಯಕ್ಕೆ ಪ್ರೇರಣೆಗಳಲ್ಲಿ ಪ್ರಮುಖವಾಗಿ ತೆಲುಗಿನ ದಿಗಂಬರ ಕಾವ್ಯ, ಮರಾಠಿಯ ದಲಿತ ಪ್ಯಾಂಥರ್ಸ್, ಆಫ್ರಿಕಾದ ಕಪ್ಪುಸಾಹಿತ್ಯದ ಪ್ರಭಾವಗಳ ಜೊತೆಗೆ ಮೂರನೆಯ ಜಗತ್ತಿನಲ್ಲಿ ನಡೆದ ಗೆರಿಲ್ಲಾ ಹೋರಾಟ ಸಾಹಿತ್ಯ ಕೂಡ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಬಂಡಾಯ ಮತ್ತು ದಲಿತ ಸಾಹಿತ್ಯಕ್ಕೆ ಪ್ರೇರಣೆ ಪ್ರೋತ್ಸಾಹ ನೀಡಿವೆ.

೧೯೬೫ರಿಂದೀಚೆಗೆ ಆಂಧ್ರಪ್ರದೇಶದಲ್ಲಿ ಬಹು ವ್ಯಾಪಕವಾಗಿ ಬೆಳೆದುಬಂದ ದಿಗಂಬರ ಕಾವ್ಯ ಕನ್ನಡ ಬಂಡಾಯ ದಲಿತ ಸಾಹಿತ್ಯದ ಮೇಲೆ ಸಾಕಷ್ಟು ಪ್ರೇರಣೆ ನೀಡಿದೆ. ಈ ಪ್ರೇರಣೆಯನ್ನು ಬಹಳ ಸ್ಪಷ್ಟವಾಗಿ ಗುರುತಿಸುವಾಗ ಚೆರಬಂಡರಾಜು, ನಗ್ನಮುನಿ, ಭೈರವಯ್ಯ, ನಿಖಿಲೇಶ್ವರ್, ಮಹಾಸ್ವಪ್ನ ಮತ್ತು ಜ್ವಾಲಾಮುಖಿ ಮೊದಲಾದವರನ್ನು ನೆನಪಿಸಿಕೊಳ್ಳುವುದುಂಟು. ಒಮ್ಮೆ ರಿಕ್ಷಾ ವಾಲನಿಂದ, ಮತ್ತೊಮ್ಮೆ ಕ್ಲೀನರ್‌ನಿಂದ ರಾತ್ರಿ ಹೊತ್ತಿನಲ್ಲಿ ಬೀದಿಯಲ್ಲಿ ಕೃತಿ ಬಿಡುಗಡೆ ಮಾಡಿಸಿದ ದಿಗಂಬರ ಕವಿಗಳು ಹೈದರಾಬಾದ್ ಕರ್ನಾಟಕ ಪ್ರದೇಶದ ಬಂಡಾಯ ದಲಿತ ಲೇಖಕರ ಮೇಲೆ ಅಗಾಧ ಪರಿಣಾಮ ಬೀರಿದ್ದಾರೆ.

**ಕನ್ನಡ ಬಂಡಾಯ ಸಾಹಿತ್ಯದ ಪ್ರೇರಣೆಗಳು**

ಹೊಸಗನ್ನಡ ಸಾಹಿತ್ಯವನ್ನು ನವೋದಯ, ಪ್ರಗತಿಶೀಲ, ನವ್ಯ ಮತ್ತು ನವ್ಯೋತ್ತರಗಳೆಂಬ ನಾಲ್ಕು ಆಯಾಮಗಳ ಮೂಲಕ ಗುರುತಿಸಲಾಗಿದೆ. ೧೯೭೦ರ ನಂತರ ಕರ್ನಾಟಕದಲ್ಲಿ ಪ್ರಾರಂಭವಾದ ದಲಿತ ಸಂಘಟನೆ ಶೂದ್ರಶಕ್ತಿಯ ಪ್ರಾದುರ್ಭಾವ ಮೊದಲಾದ ವಿಚಾರವಾದಿ ಆಂದೋಲನಗಳೆಲ್ಲಾ ಬಂಡಾಯ ಸಾಹಿತ್ಯದ ಮೂಲ ಪ್ರೇರಣೆಗಳಾಗಿವೆ. ಅನಂತರದ ತುರ್ತುಪರಿಸ್ಥಿತಿ ಈ ಬಗೆಯ ಸಾಹಿತ್ಯಕ್ಕೆ ಹೊಸ ಮೊನಚನ್ನು ತಂದುಕೊಟ್ಟಿದೆ. ಇವೆಲ್ಲದರ ಒಟ್ಟು ಪರಿಣಾಮಕಾರಿಯಾಗಿ ೧೯೭೮ರಲ್ಲಿ ಎಲ್ಲಾ ಎಡ ಮತ್ತು ಪ್ರಜಾಪ್ರಭುತ್ವವಾದಿ ಶಕ್ತಿಗಳು, ಮುಖ್ಯವಾಗಿ ಮಾರ್ಕ್ಸ್, ಲೋಹಿಯಾ ಹಾಗೂ ಅಂಬೇಡ್ಕರ್ ಅವರ ವಿಚಾರಧಾರೆಗಳ ತಳಹದಿಯ ಮೇಲೆ ಒಂದು ಸಾಮಾನ್ಯ ವೇದಿಕೆಯಾಗಿ ಕರ್ನಾಟಕದಲ್ಲಿ ಕನ್ನಡ ಬಂಡಾಯ ಸಾಹಿತ್ಯ ಸಂಘಟನೆಯನ್ನು ಸ್ಥಾಪಿಸಿದವು. ಇದು ಕನ್ನಡ ನಾಡಿನ ಸಾಂಸ್ಕೃತಿಕ, ಸಾಮಾಜಿಕ ಹಾಗೂ ಸಾಹಿತ್ಯಕ ಕ್ಷೇತ್ರಗಳ ಮೇಲೆ ಗಾಢವಾದ ಪ್ರಭಾವ ಬೀರಿವೆ. ಬಂಡಾಯ ಮತ್ತು ದಲಿತ ಸಾಹಿತ್ಯಗಳು ಒಂದೇ ಕಾಲದಲ್ಲಿ ರೂಪಗೊಂಡು ಒಟ್ಟೊಟ್ಟಿಗೆ ಬೆಳೆದರೂ ನಂತರ ಬಂಡಾಯ ಚಳುವಳಿಯೊಂದಿಗೆ ಇದ್ದ ದಲಿತ ಸಾಹಿತಿಗಳು ಪ್ರತ್ಯೇಕವಾದ ಅಸ್ತಿತ್ವವನ್ನು ಅಪೇಕ್ಷಿಸಿದರು. ಇವರೆಡು ಸಾಹಿತ್ಯಗಳು ಎಡಪಂಥೀಯ ಹಾಗೂ ಬಂಡಾಯ ಮನೋಧರ್ಮವನ್ನು ಹೊಂದಿವೆ.

ದಲಿತ ಸಾಹಿತ್ಯಕ್ಕಿಂತ ಬಂಡಾಯ ಸಾಹಿತ್ಯ ವ್ಯಾಪಕವಾದುದು. ಜಡ್ಡುಗಟ್ಟಿದ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ವ್ಯವಸ್ಥೆಗಳೆಲ್ಲದರ ಪ್ರತಿರೋಧವನ್ನು ಇದು ಒಳಗೊಳ್ಳುತ್ತದೆ. ಆದ್ದರಿಂದ ದಲಿತ ಸಾಹಿತಿಗಳಾದವರು ಬಂಡಾಯ ಸಾಹಿತಿಗಳೂ ಆಗಬಲ್ಲರು. ಆದರೆ ಬಂಡಾಯ ಸಾಹಿತಿಗಳಾದವರೆಲ್ಲಾ ದಲಿತ ಸಾಹಿತಿಗಳಾಗಲು ಸಾಧ್ಯವಿಲ್ಲ. ಇವೆರಡರಲ್ಲಿ ಸಂಬಂಧಗಳಿದ್ದರೂ ದಲಿತರು ತಮ್ಮ ಪ್ರತ್ಯೇಕ ಅಸ್ತಿತ್ವಕ್ಕಾಗಿ ದನಿಯನ್ನು ಎತ್ತುತ್ತಲೇ ಬಂದಿದ್ದಾರೆ.

ಅಸ್ಪೃಶ್ಯತೆ ಎನ್ನುವುದು ಭಾರತೀಯರದೇ ಆದ ವಿಶಿಷ್ಟ ಸಮಸ್ಯೆಯಾದ್ದರಿಂದ ಭಾರತದ ಚೌಕಟ್ಟಿನೊಳಗೆ ದಲಿತರು ಕಾರ್ಯ ನಿರ್ವಹಿಸಬೇಕಾಗುತ್ತದೆ. ದಲಿತ ಸಾಹಿತ್ಯ, ಬಂಡಾಯ ಸಾಹಿತ್ಯದ ಒಂದು ಭಾಗವಾಗಿದ್ದರೂ ಇಂದು ಸ್ವತಂತ್ರವಾಗಿ ಅದನ್ನು ಗುರುತಿಸುವ ಹಲವು ಪ್ರಯತ್ನಗಳು ನಡೆಯುತ್ತಿವೆ. ಅನೇಕ ಬರಹಗಾರರು ಈ ಹಣೆಪಟ್ಟಿಯಿಂದ ಬಿಡಿಸಿಕೊಂಡು ಸ್ವತಂತ್ರ ಮನೋಧರ್ಮದಿಂದ ಸಾಹಿತ್ಯ ರಚನೆಗೆ ತೊಡಗಿದ್ದಾರೆ.

ನವ್ಯ ಸಾಹಿತ್ಯಗಳು ವೈಯಕ್ತಿಕತೆಗೆ ಅತಿಯಾದ ಒತ್ತನ್ನು ನೀಡುವುದರ ಜೊತೆಗೆ ಒಂಟಿತನ ಅನಾಥಪ್ರಜ್ಞೆ, ಪ್ರಕ್ಷುಬ್ಧತೆ ಹಾಗೂ ಜೀವನದ ಅಸಂಗತತೆಗಳನ್ನು ಚಿತ್ರಿಸುವುದರ ಕಡೆಗೆ ಹೆಚ್ಚು ಗಮನ ನೀಡಿದರು. ಸಾಮಾಜಿಕ ಸ್ಥಿತಿಗತಿಗಳ ಬಗ್ಗೆ ವಿಚಾರ ಮಾಡದೆ ಮಣ್ಣಿನ ವಾಸನೆಯ ಬಗ್ಗೆ ಹೇಳಿದ ನವ್ಯರು, ಈ ನೆಲದ ವಾಸ್ತವ ಬದುಕನ್ನು ಚಿತ್ರಿಸಲಿಲ್ಲ. ಇದನ್ನು ಅರ್ಥ ಮಾಡಿಕೊಂಡ ಲೇಖಕರಾದ ತೇಜಸ್ವಿ, ಲಂಕೇಶ್, ಚಂಪಾ ಮೊದಲಾದ ಪ್ರಮುಖರು ನವ್ಯ ಸಾಹಿತ್ಯದಿಂದ ಪಕ್ಕಕ್ಕೆ ಸರಿದು ನವ್ಯೋತ್ತರ ಸಾಹಿತ್ಯದ ಹುಟ್ಟಿಗೆ ಕಾರಣವಾದರು. ಇದಕ್ಕೆ ಪೂರಕವಾದ ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿಯೂ ಕೆಲವು ಮಹತ್ವದ ಘಟನೆಗಳು ಸಂಭವಿಸಿದವು. ಇದರ ಪ್ರೇರಣೆಯಿಂದ ನೊಂದವರ, ನಿರ್ಲಕ್ಷಿತರ ಹಾಗೂ ಕೊಳಚೆನಿವಾಸಿಗಳ ಧ್ವನಿಗಳು ಕೇಳಿಸ ತೊಡಗಿದವು. ದಲಿತ ಚಳುವಳಿಯ ಸ್ವರೂಪ ಸಹ ಆ ಸಾಮಾಜಿಕ ಸಂದರ್ಭದ ಸ್ಥಿತಿಗತಿಯನ್ನು ಅವಲಂಬಿಸಿಯೇ ರೂಪಗೊಂಡಿತು.

ದಲಿತ ಮತ್ತು ಬಂಡಾಯ ಸಾಹಿತ್ಯ ಚಳುವಳಿಗಳು ವ್ಯವಸ್ಥೆಯೊಳಗೆ ಬೇರುಬಿಟ್ಟಿರುವ ಜಾತಿ, ವರ್ಗ, ಸ್ವಭಾವವನ್ನು ಮೀರುವುದರೊಂದಿಗೆ ದಿಟ್ಟ ನಿರ್ಧಾರ ಕೈಗೊಂಡವು. ಹಾಗೆಯೇ ಈ ಹೊಸ ಸಾಹಿತ್ಯ ಚಳುವಳಿ ಹಳೆಯದರ ಬಗೆಗಿನ ಆತೃಪ್ತಿಯ ಸಾಕ್ಷಿಯಾಗಿ ಪ್ರತಿಷ್ಠಿತ ಶಕ್ತಿಗಳಿಗೆ ಪ್ರತಿಕ್ರಿಯಾತ್ಮಕವಾದ ಧೋರಣೆಯನ್ನು ಸ್ಫೋಟಿಸಿದವು.

ಬಂಡಾಯ ಸಾಹಿತ್ಯ ಚಳುವಳಿಯಲ್ಲಿ ಲೋಹಿಯಾವಾದಿಗಳು, ಅಂಬೇಡ್ಕರ್‌ವಾದಿಗಳು ಮತ್ತು ಮಾರ್ಕ್ಸ್‌ವಾದಿಗಳು ಇದ್ದಾರೆ. ಈ ಸಂಘಟನೆಯಲ್ಲೆಲ್ಲ ವರ್ಗಸ್ವಭಾವವೇ ಮೂಲ ತಳಹದಿ ಯಾಗಿದ್ದರೂ ಜಾತಿಯ ಚೌಕಟ್ಟಿನಿಂದ ಬಿಡುಗಡೆಯಾಗದಿರುವುದು ವಾಸ್ತವವಾಗಿದೆ. ಈ ಬರಹಗಾರರ ಸಮಾನ ಗುಣಗಳು, ಅವರೆಲ್ಲರ ತಾತ್ವಿಕ ಗ್ರಹಿಕೆಗಳು ಒಂದಾಗಿ ನಿಲ್ಲಿಸುವ ಬೆಸುಗೆಯಾಗಿದೆ. ಆದ್ದರಿಂದ ಇಲ್ಲಿಯ ವೈಚಾರಿಕ ಚಳುವಳಿ ವರ್ಗಸ್ವಭಾವದ ತಳಹದಿಯಿಂದಲೇ ರೂಪಗೊಂಡರೂ ಜಾತಿಪದ್ಧತಿ ಮತ್ತು ಅಸ್ಪೃಶ್ಯತೆಯನ್ನು ಒಟ್ಟಾರೆಯಾಗಿ ಪುರೋಹಿತಶಾಹಿಯನ್ನು ವಿರೋಧಿಸುತ್ತದೆ. ಜಮೀನ್ದಾರಿ ಪದ್ಧತಿಯನ್ನು ಹಾಗೂ ಬಂಡವಾಳಶಾಹಿ ಪದ್ಧತಿಯನ್ನು ವಿರೋಧಿಸಿ ಲಿಂಗಾಧಾರಿತ ಸಾಮಾಜಿಕ ಅಸಮಾನತೆಯನ್ನು ತಿರಸ್ಕರಿಸುತ್ತದೆ. ಹಾಗೆಯೇ

ಕೋಮುಗಲಭೆಯನ್ನು ಧಿಕ್ಕರಿಸುತ್ತಾ ಸಹಬಾಳ್ವೆಯನ್ನು ಗೌರವಿಸುತ್ತದೆ. ಜನಪರವಾದ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಸೈದ್ಧಾಂತಿಕತೆಗೆ ಸಾಣೆ ಹಿಡಿಯುತ್ತದೆ. ಭಾಷೆಗೆ ಸಂಬಂಧಿಸಿದಂತೆ ಈ ಚಳುವಳಿಗಾರರು ಜನಸಾಮಾನ್ಯರ ಭಾಷೆಗಿರುವ ಸಾಮಾಜಿಕ ಜವಾಬ್ದಾರಿ ಹಾಗೂ ಬದ್ಧತೆಯನ್ನು ಖಚಿತಪಡಿಸುತ್ತಾರೆ.

ಸಾಹಿತ್ಯ ಮತ್ತು ಸಾಹಿತ್ಯೇತರ ಪ್ರಭಾವಕ್ಕೆ ಒಳಗಾದ ಬಂಡಾಯ ಸಾಹಿತ್ಯ ಸಮಾಜವಾದಿ ಚಿಂತಕರ ಆದರ್ಶಗಳ ಪರಿಣಾಮವಾಗಿ ಬಂಡಾಯ ಮನೋಧರ್ಮವು ಹೊರಹೊಮ್ಮಿರುವುದು ಸಹಜವೇ ಆಗಿದೆ. ಅಕ್ಷರ ಮಾಧ್ಯಮವನ್ನು ರೂಪಿಸಿಕೊಂಡ ಜನತೆ ಸಹಜವಾಗಿ ಇಂತಹ ದಾರುಣ ಬದುಕನ್ನು ವಿರೋಧಿಸಿದರು. ಹೀಗೆ ಸಂಪ್ರದಾಯಬದ್ಧ ಜಡ್ಡುಗಟ್ಟಿದ ಮೌಲ್ಯಗಳನ್ನು ಹಾಗೂ ಸಂಪೂರ್ಣವಾಗಿ ವ್ಯವಸ್ಥೆಯನ್ನು ವಿರೋಧಿಸುವ ಸಂದರ್ಭದಲ್ಲಿ ಪ್ರತಿಭಟನೆ ರೂಪಗೊಂಡಿದೆ. ಬಂಡಾಯ ಸಾಹಿತ್ಯವು ವ್ಯವಸ್ಥೆಯ ವಿರುದ್ಧ ಅನ್ಯಾಯ ಹಿಂಸೆಗಳ ವಿರುದ್ಧ, ಪುರೋಹಿತಶಾಹಿ, ಜಮೀನ್ದಾರಿ, ಬಂಡವಾಳಶಾಹಿ ವ್ಯವಸ್ಥೆಯ ವಿರುದ್ಧ ಪ್ರತಿಕ್ರಿಯೆ ನೀಡಿದೆ. ಈ ಹಿನ್ನೆಲೆಯಲ್ಲಿ ಸಂಘರ್ಷದ ಮೂಲಕ ನೊಂದವರ, ಅಸಹಾಯಕರ, ಮುಗ್ಧರ ಹಾಗೂ ಶೋಷಿತರಾದವರ ಅಭಿವೃದ್ಧಿಯನ್ನು ಸಾಧಿಸುವುದೇ ಬಂಡಾಯದ ಪ್ರಧಾನ ಆಶಯವಾಗಿದೆ. ಪರಿಸ್ಥಿತಿಯ ತೀವ್ರ ಒತ್ತಡದ ಜೊತೆಗೆ ನವ್ಯಸಾಹಿತ್ಯದ ಮಿತಿಗಳು ಬಂಡಾಯ ಸಾಹಿತ್ಯದ ಸೃಷ್ಟಿಗೆ ಕಾರಣವಾಗಿದ್ದರೂ ಅಂಬೇಡ್ಕರ್, ಲೋಹಿಯಾ ಮತ್ತು ಗಾಂಧಿವಾದಗಳು ಸಮೃದ್ಧ ಸಂಪನ್ಮೂಲಗಳಾಗಿ ಕಾರ್ಯ ನಿರ್ವಹಿಸಿದೆ. ಹಾಗೆಯೇ, ತೆಲುಗು ವಿಪ್ಲವ ಕಾವ್ಯ, ಮರಾಠಿಯ ದಿಗಂಬರ ಸಾಹಿತ್ಯ ಮತ್ತು ಆಫ್ರಿಕಾದ ಗೆರಿಲ್ಲಾ ಸಾಹಿತ್ಯ ಪ್ರಕಾರಗಳು ಪ್ರಾದೇಶಿಕ ಹಿನ್ನೆಲೆಯಲ್ಲಿ ಭದ್ರವಾದ ತಳಪಾಯವನ್ನು ಬಂಡಾಯ ಸಾಹಿತ್ಯಕ್ಕೆ ಒದಗಿಸಿಕೊಟ್ಟಿವೆ. ಇವುಗಳೆಲ್ಲದರ ಸ್ಫೂರ್ತಿ ಪ್ರೇರಣೆಗಳು ಬಂಡಾಯ ಬರಹಗಾರರ ಬರವಣಿಗೆಯಲ್ಲಿ ಅಭಿವ್ಯಕ್ತಗೊಂಡಿವೆ. ಈ ವಿಚಾರಗಳು ಕುಂ.ವೀ. ಅವರ ಸಾಹಿತ್ಯ ರಚನೆಯನ್ನು ರೂಪಿಸುವಲ್ಲಿ ಬಲಿಷ್ಠವಾದ ಪ್ರೇರಕವಾದ ಪರಿಕರಗಳಾಗಿವೆ.

**೩.೨. ಕುಂ.ವೀ. ಅವರ ಸಾಹಿತ್ಯ: ಕಥೆಗಾರರ ಪ್ರಭಾವ**

ಕುಂ.ವೀ. ಅವರೇ ಹೇಳುವಂತೆ, ತೇಜಸ್ವಿ, ಮಹಾದೇವ, ರಾಮಣ್ಣನವರ ಕತೆಗಳ ಗುಂಗಿನಿಂದ ಹೇಗಾದರೂ ಬಿಡಿಸಿಕೊಂಡು ಅನಂತಮೂರ್ತಿ, ದೇಸಾಯಿ ಮತ್ತು ಸದಾಶಿವರಂತೆ ಬರೆಯಬೇಕೆಂಬ ಕೆಟ್ಟ ಹಠದಿಂದ **'ಸಾಕ್ಷಿ'** ತರದ ಪತ್ರಿಕೆಗಳನ್ನು ತಿಣುಕಿ ಓದುತ್ತಿದ್ದೆ. ಇವರಾರೂ ಧಕ್ಕದಂತಾಗಿ ಈಶ್ವರ ಸಣಕಲ್ ಅವರದ್ದೋ, ಸಾ.ಶಿ. ಮರುಳಯ್ಯನವರದ್ದೋ ಯಾವುದಾದರೂ ಪದ್ಯದ ಸಾಲುಗಳನ್ನು ಕದ್ದು ಹೊಸ ಪದ್ಯ ಮಾಡಿ **'ಪರಂಜ್ಯೋತಿ'** ಪತ್ರಿಕೆಗೂ **'ಹೇಮಕೂಟ'**

ಅಥವಾ **'ಸಿದ್ಧಗಂಗಾ'** ಪತ್ರಿಕೆಗೂ ಕಳುಹಿಸಿಕೊಡುತ್ತಿದ್ದೆ. ಅವು ಪ್ರಕಟಗೊಂಡಾಗ ಬುರಬುರನೆ ಉಬ್ಬಿ ಬಿಡುತ್ತಿದ್ದೆ. ನಾನು ಕವಿತೆ ಬರೆಯುವುದನ್ನು ಕಲಿತದ್ದೇ ಕದಿಯೋದರ ಮೂಲಕ. ಕಳ್ಳತನವಷ್ಟೆ ಮುಖ್ಯ ಬಂಡವಾಳವಾಗಿರಲಿಲ್ಲ. ಕವಿ ಆಗಬೇಕೆಂಬ ಕೆಟ್ಟ ಹಠವೂ ಇತ್ತು. ತಕ್ಕ ಶ್ರಮವೂ ಇತ್ತು. ಅವಮಾನ ಮತ್ತು ಹಸಿವೆಯ ವಿರುದ್ಧ ಪ್ರತಿಭಟಿಸಬೇಕೆಂದು. ನಾನು ಕವಿತೆಗಳನ್ನು ಕಥೆಗಳನ್ನು ಬರೆಯತೊಡಗಿದ್ದು, ಬರೆಯದೆ ಇದ್ದರೆಲ್ಲಿ ಮಾನಸಿಕ ಕ್ರಿಯೆ ಅಸ್ತವ್ಯಸ್ತಗೊಂಡು ಬಿಡುವುದೋ ಎಂಬ ತಲ್ಲಣವು ನನ್ನನ್ನು ನಿರಂತರವಾಗಿ ಬರೆಯಲು ತೊಡಗಿಸಿತು. ಬರೆಯುತ್ತಾ ಹೋದೆ. ಜನ ಮೆಚ್ಚಿಕೊಳ್ಳುತ್ತಾ ಹೋದರು"[೯](೧೯೯೩: ಮುನ್ನುಡಿ, ಪು.೮).

ಕುಂ.ವೀ. ಅವರು ಕೆಲವು ದಿನಗಳ ಕಾಲ ರಾಯಚೂರಿನ 'ವಾಣಿ ಪತ್ರಿಕೆ'ಯಲ್ಲಿ ವರದಿಗಾರರಾಗಿ ಕೆಲಸ ಮಾಡಿದ್ದಾರೆ. ಅಲ್ಲಿಯೇ ಶಾಂತರಸ, ಚೆನ್ನಣ್ಣ ವಾಲೀಕಾರ ಇವರೆಲ್ಲರ ಪ್ರೇರಣೆ, ಪ್ರೋತ್ಸಾಹ ಗಳಿಂದ ವೈಚಾರಿಕ ಲೇಖನಗಳನ್ನು ಬರೆದು ಪ್ರಕಟಿಸಿದ್ದಾರೆ. ಅವರಿಂದ ಇತ್ಯಾತ್ಮಕ ಪ್ರತಿಕ್ರಿಯೆ ದೊರೆಯಿತು. ಇವರ ಪ್ರತಿಭೆಯನ್ನು ಬಾಲ್ಯದಿಂದಲೂ ಕಂಡು ಗುರ್ತಿಸಿದ ಗುರುಮೂರ್ತಿ ಪೆಂಡಕೂರು, ವಕೀಲ ಗೆಳೆಯ ಪಂಡಿತಾರಾಧ್ಯ, 'ಮಯೂರ' ಪತ್ರಿಕೆಯ ಸಂಪಾದಕರಾದ ಜಿ.ಎಸ್.ಸದಾಶಿವ, ಕತೆಗಾರ ರಾಜಶೇಖರ ನೀರಮಾನ್ವಿ ಮೊದಲಾದವರೆಲ್ಲಾ ಕುಂ.ವೀ. ಅವರ ಬರಹಕ್ಕೆ ಪ್ರೇರಕರಾಗಿದ್ದಾರೆ. ಕಟ್ಟೀಮನಿ, ನಿರಂಜನ, ಲಂಕೇಶ್, ತೇಜಸ್ವಿ ಕುಂ.ವೀಯವರಿಗೆ ಸ್ಫೂರ್ತಿಯ ಸೆಲೆಯಾಗಿದ್ದಾರೆ. ಎಂ.ಬಿ.ಸಿಂಗ್, ಜಿ.ಎಸ್.ಸದಾಶಿವ, ಸಂತೋಷ ಕುಮಾರ್ ಗುಲ್ವಾಡಿ ಇವರು ತಮ್ಮ ಪತ್ರಿಕೆಗಳಾದ ಸುಧಾ, ಮಯೂರ ಮತ್ತು ತರಂಗದಲ್ಲಿ ಇವರ ಕಥೆಗಳನ್ನು ಪ್ರಕಟಿಸಿ ಬರವಣಿಗೆಗೆ ಪ್ರೇರಕ ಶಕ್ತಿಯಾಗಿದ್ದಾರೆ.

ತುಮಕೂರಿನ ಸಿದ್ಧಗಂಗ ಮಠದಲ್ಲಿ ಓದುತ್ತಿರಬೇಕಾದರೆ ಕುಂ.ವೀ. ಅವರಿಗೆ ಕವಿತೆ ಬರೆಯುವ ಹುಚ್ಚು ಹುಟ್ಟಿಕೊಂಡಿತು. ಅಲ್ಲಿ ಓದುತ್ತಿರಬೇಕಾದರೆ ಸಾಂಸ್ಕೃತಿಕ ವಿಭಾಗದ ಕಾರ್ಯದರ್ಶಿಯಾಗಿದ್ದ ಸಂದರ್ಭದಲ್ಲಿ ಮಠದಲ್ಲಿ ಸಾಹಿತ್ಯ ಸಮ್ಮೇಳನ ನಡೆಯಿತು. ಅದರಲ್ಲಿ ಜಿ.ಎಸ್.ಶಿವರುದ್ರಪ್ಪ, ಎಂ. ಚಿದಾನಂದಮೂರ್ತಿ ಮತ್ತು ಎಲ್ ಬಸವರಾಜು ಭಾಗವಹಿಸಿದಾಗ ಅವರ ಉಪನ್ಯಾಸಗಳನ್ನು ಕೇಳುವ ಅವಕಾಶ ಸಿಕ್ಕಿತು. ಜಿ.ಎಸ್. ಶಿವರುದ್ರಪ್ಪನವರಿಗೆ ತಮ್ಮ ಕವಿತೆಗಳನ್ನು ತೋರಿಸಿದಾಗ 'ಮೊದಲು ಸಾಹಿತ್ಯ ಓದುವ ಅಭ್ಯಾಸ ಮಾಡಿಕೊ' ಎಂಬ ಸಲಹೆಯನ್ನು ಕೊಡುತ್ತಾರೆ. ನಿರಾಸೆಯಾದರೂ ಅವರು ಸಾಹಿತ್ಯವನ್ನು ಅಧ್ಯಯನ ಮಾಡುತ್ತಾ ಹೋಗುತ್ತಾರೆ. ನಂತರ ಬರೆಯಲು ಪ್ರಾರಂಭಿಸುತ್ತಾರೆ. ಕೆಲವು ದಿನಗಳ ನಂತರ ವೀರಭದ್ರಪ್ಪನವರಿಗೆ ಶರ್ಮ ಎಂಬ ವ್ಯಕ್ತಿಯ ಪರಿಚಯವಾಗುತ್ತದೆ. ಅವರು ಮೈಸೂರಿನಲ್ಲಿ ಕನ್ನಡ ಎಂ.ಎ.

ಮಾಡುತ್ತಿದ್ದು, ಇವರಿಗೆ ಪರಿಚಯವಾಗಿ ಇವರ ಕವಿತೆಗಳನ್ನು ಐದು ನಿಮಿಷದಲ್ಲಿ ತಿರುವಿಹಾಕಿ "ನೀನು ನವ್ಯರನ್ನು ಓದಿಕೊಂಡಿರುವೆಯೋ" ಎಂದು ಕೇಳುತ್ತಾರೆ. ಇಲ್ಲವೆಂದು ಇವರು ಹೇಳಿದಾಗ ಒಳಗೆ ಹೋಗಿ ಕೆಲವು ಪುಸ್ತಕಗಳನ್ನು ತಂದುಕೊಡುತ್ತಾ ಇವರಿಗೆ "ಸುಮ್ಮನೆ ಓದ್ಕೋ ನಿನಗೆ ತಿಳೀತ್ತೈತೆ" ಎಂದು ಹೇಳಿದರು. ಆ ಕವಿತೆಗಳನ್ನು ಇವರು ಓದಿದರು. ಆದರೆ ಇವರಿಗೆ ಅವು ಅರ್ಥವಾಗಲಿಲ್ಲ. ಆ ಪುಸ್ತಕವನ್ನು ಮರಳಿಸಲು ಹೋದಾಗ ಶರ್ಮರು ನವ್ಯ ಸಾಹಿತ್ಯ ಕುರಿತು ಮಾಡುತ್ತಾರೆ. ಅದರ ತಳಬುಡ ಇವರಿಗೆ ಅರ್ಥವಾಗಲಿಲ್ಲ. ನಂತರ ಶರ್ಮ ಹೇಳುತ್ತಾರೆ. "ಇದರೊಳಗಿನ ಕವಿತೆಗಳನ್ನು ಮತ್ತೆ ಮತ್ತೆ ಓದು ನಿನಗೆ ಅರ್ಥವಾಗುತ್ತೆ" ಎಂದು ಹೇಳಿ ಈ ಪುಸ್ತಕ ನೀನೇ ಇಟ್ಟುಕೊ" ಎಂದು ಹೇಳುತ್ತಾರೆ. ನಂತರ ಮಠದಲ್ಲಿ ಮಲ್ಲೇಪುರಂ ಇವರ ಸ್ನೇಹದಿಂದಾಗಿ ಭಾವಗೀತೆ ಬರೆಯುವುದಕ್ಕಿಂತ ನವ್ಯ ಕವಿತೆ ಬರೆಯುವುದು ಇವರಿಗೆ ಸಲಭವಾಗುತ್ತಾ ಹೋಗುತ್ತದೆ.

ಲೇಖಕರು ಕೆಲವು ದಿನ ರಾಯಚೂರಿನ ಅಬಕಾರಿ ವಲಯದಲ್ಲಿ ಕೆಲಸ ಮಾಡುತ್ತಿದ್ದಾಗ ಅನಕೃ, ಗಳಗನಾಥ ಇವರ ಐತಿಹಾಸಿಕ ಕಾದಂಬರಿಗಳನ್ನು ಓದಿಕೊಂಡಿದ್ದರು. ಇವರು ಬಿಡುವು ದೊರಕಿದಾಗಲೆಲ್ಲ ಕೋಟೆ ಕೊತ್ತಲಗಳನ್ನು ಸುತ್ತಲು ಹೋಗುತ್ತಿದ್ದರು. ಅಂತಹ ಸಂದರ್ಭದಲ್ಲಿ ಇವರು ಶಾಂತರಸರನ್ನು ನೋಡಿ ಪ್ರಭಾವಿತರಾಗುತ್ತಾರೆ. ರಾಯಚೂರಿನಲ್ಲಿ ಇವರ ಮೇಲೆ ಪ್ರಭಾವ ಬೀರಿದ ವ್ಯಕ್ತಿ ಚೆನ್ನಣ್ಣ ವಾಲೀಕಾರ. ಆಗ ಅವರ 'ಕರಿತೆಲಿ ಮಾನವನ ಗೀಗೀ ಪದ' ಸಂಕಲನಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿರುತ್ತದೆ. ಇಂತಹ ಸಂದರ್ಭದಲ್ಲಿ ಅವರ ಸ್ನೇಹ ಮತ್ತು ಪ್ರಭಾವ ಲೇಖಕರ ಮೇಲಾಗುತ್ತದೆ. ತಂದೆಯ ಅನಾರೋಗ್ಯದ ನಿಮಿತ್ತ ಧಾರವಾಡಕ್ಕೆ ಬಂದ ಲೇಖಕರು ಅಲ್ಲಿನ ಕರ್ನಾಟಕ ವಿದ್ಯಾವರ್ಧಕ ಸಂಘದ ಪರಿಚಯವನ್ನು ಮಾಡಿಕೊಂಡು ಅಲ್ಲಿ ನಡೆಯುವ ಹೋರಾಟಗಳ ಪ್ರಭಾವಕ್ಕೆ ಸಿಲುಕಿದ ಲೇಖಕರು ಲಂಕೇಶ್, ತೇಜಸ್ವಿ, ನಂಜುಂಡಸ್ವಾಮಿಯ ಹಾಗೂ ಇತರರು ಮಾಡಿದ ಭಾಷಣಗಳಿಂದ ಸಾಕಷ್ಟು ಪ್ರಭಾವಿತರಾಗಿ ಸಾಹಿತ್ಯದ ಬಗ್ಗೆ, ಚಳುವಳಿಯ ಬಗ್ಗೆ, ಹೊಸ ಹೊಸ ಚಿಂತನೆಗಳನ್ನು ಮೂಡಿಸಿಕೊಂಡರು.

ಕುಂ.ವೀ. ಅವರ ಮೇಲೆ ಲಂಕೇಶರ ಪ್ರಭಾವ ಸಾಕಷ್ಟಾಗಿದೆ. ಅದನ್ನು ಅವರು ತಮ್ಮ ಗಾಂಧಿ ಕ್ಲಾಸು ಆತ್ಮಕಥನದಲ್ಲಿ ವಿವರವಾಗಿ ಹೇಳಿಕೊಂಡಿದ್ದಾರೆ. ಕೊಟ್ಟೂರಿನ ಕೊಟ್ಟೂರೇಶ್ವರ ಕಾಲೇಜಿನ ವಾರ್ಷಿಕೋತ್ಸವಕ್ಕೆ ಬಂದ ಲಂಕೇಶರ ಪರಿಚಯ ಗೆಳೆಯ ಪಂಡಿತಾರಾಧ್ಯರಿಂದ ಆದಾಗ ಅವರ ಪ್ರಭಾವಕ್ಕೆ ಲೇಖಕರು ಸಿಲುಕುತ್ತಾರೆ. ಆಗ ಲಂಕೇಶರು ತಮ್ಮ ಪತ್ರಿಕೆಗೂ ಬರಹಗಳನ್ನು ಕಳಿಸಿ ಎಂದು ಹೇಳುತ್ತಾರೆ. ಲಂಕೇಶ್ ಪತ್ರಿಕೆಯ ಬಗ್ಗೆ ಕುಂ.ವೀ. ಅವರಿಗೆ

ಎಷ್ಟು ಅಭಿಮಾನವಿತ್ತೆಂದರೆ ಅವರೇ ಹೇಳುವಂತೆ "ಆ ಪತ್ರಿಕೆ ಕೇವಲ ಲಂಕೇಶ್ ಅವರದ್ದಾಗಿ ರಲಿಲ್ಲ. ಆರಂಭದಲ್ಲಿ ನಾಡಿನ ಎಲ್ಲ ಪ್ರಗತಿಪರರು ಅದನ್ನು ತಮ್ಮ ಜನಪರ ಹೋರಾಟದ ಮುಖವಾಣಿಯೆಂದೇ ಭಾವಿಸಿ ಅದಕ್ಕೆ ಬರೆಯುತ್ತ ಅದನ್ನು ಜನಪ್ರಿಯಗೊಳಿಸಿದರು." ಪತ್ರಿಕೆ ಆರಂಭಿಸಿದ ಇನ್ನಿಂಗ್ಸ್ ಅತ್ಯದ್ಭುತವಾಗಿತ್ತು. ನಾನು ಬರೆದ ಕೆಲವು ಲೇಖನಗಳು ಕೆಲವರ ಮೂಗುಗಳನ್ನು ಕೆಂಪೇರಿಸದೆ ಇರಲಿಲ್ಲ. ಮೇಷ್ಟ್ರ ಮೇಲೆ ಮಾನನಷ್ಟ ಮೊಕದ್ದಮೆಗಳು ಒಂದೆರಡು ನ್ಯಾಯಾಲಯಗಳಲ್ಲಿ ದಾಖಲುಗೊಂಡವು. "ಪುಣ್ಯಾತ್ಮ ನೀನು ನಮ್ಮ ಪತ್ರಿಕೆಗೆ ಬರೆಯದಿದ್ದರೇನೆ ಒಳ್ಳೆಯದು" ಎಂದು ಹೇಳಿದರು. ಲಂಕೇಶರನ್ನು ಕಾಣಲು ಪ್ರತಿ ತಿಂಗಳು ಕುಂ.ವೀ. ಅವರು ಬೆಂಗಳೂರಿಗೆ ಹೋಗಿ ಬರುತ್ತಿದ್ದರು.

**೩.೩. ಕುಂ.ವೀ. ಅವರ ಸಾಹಿತ್ಯ: ವಿಚಾರವಾದಗಳ ಪ್ರಭಾವ**

೧೯೭೦ರ ದಶಕದಲ್ಲಿ ಕನ್ನಡ ಸಾಹಿತ್ಯದಲ್ಲಿ ಹೊಸ ಬೆಳವಣಿಗೆ ಕಾಣಿಸಿಕೊಳ್ಳತೊಡಗಿತು. ಪಾಶ್ಚಾತ್ಯ ಸಾಹಿತ್ಯದ ಪ್ರಭಾವಕ್ಕೊಳಗಾಗಿದ್ದ ಕನ್ನಡ ಸಾಹಿತ್ಯ ದೇಶಿ ಚಿಂತನೆಗಳತ್ತ ಮುಖ ಮಾಡಿತು. ವಸಾಹತುಶಾಹಿ ತಂದ ಹೊಸ ಮೌಲ್ಯಗಳಿಗೆ ನಮ್ಮ ಸಮಾಜದ ಪ್ರತಿಕ್ರಿಯೆ ಏಕರೀತಿ ಯದಾಗಿರಲಿಲ್ಲ. ನಮ್ಮ ಬಹುಮುಖಿ ಸಂಸ್ಕೃತಿಯು ವ್ಯಕ್ತಪಡಿಸಿದ ಪ್ರತಿಕ್ರಿಯೆಯೂ ಬಹುರೂಪಿ ಯಾಗಿತ್ತು. ಕೆಲವು ಬದಲಾವಣೆಗಳು ನಮ್ಮನ್ನು ತಲ್ಲಣಗೊಳಿಸಿದರೆ ಮತ್ತೆ ಕೆಲವು ಒಂದು ಬಗೆಯ ವಿಮೋಚನೆ ಯನ್ನು ಉಂಟುಮಾಡಿದವು.

ಮಾರ್ಚ್ ೧೦-೧೧-೧೯೭೯ರಂದು ಬೆಂಗಳೂರಿನಲ್ಲಿ ನಡೆದ ಪ್ರಥಮ ಬಂಡಾಯ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಹೊರತಂದ ಕರಪತ್ರದಲ್ಲಿಯೇ ಇಂಥ ವಿಚಾರವಾದಗಳಿಂದ ಪ್ರೇರಿತವಾದ ಆಶಯವು ಪ್ರಕಟಗೊಂಡಿತ್ತು! ನಮ್ಮ ದೇಶದ ಚರಿತ್ರೆಯಲ್ಲಿ ಈಚೆಗೆ ನಡೆದ ವಿದ್ಯಮಾನಗಳು ಸಾಹಿತ್ಯದಲ್ಲಿ ಎರಡು ಲೋಕಗಳನ್ನು ಸೃಷ್ಟಿಸಿವೆ.

ಒಂದು: "ಸಮಕಾಲೀನ ಬದುಕಿಗೆ ಪ್ರತಿಸ್ಪಂದಿಸಿ ಅದರ ಬದಲಾವಣೆಗೆ ಹೋರಾಡುವ ಸಾಹಿತಿಗಳದು, ಎರಡು: ಸಮಕಾಲೀನತೆಯನ್ನು ಬದುಕಿನ ದಿನನಿತ್ಯದ ಘಟನೆಗಳಲ್ಲಿ ಗುರುತಿಸದೆ ತಂತಮ್ಮ ಭ್ರಮೆಗಳಲ್ಲಿ ತೇಲಾಡುವ ಸಾಹಿತಿಗಳದ್ದು. ಈ ಗುಂಪಿನವರು ತಮ್ಮ ಸುತ್ತಮುತ್ತಲಿನ ಕ್ರೂರವಾಸ್ತವಗಳಾದ-ಪೋಲಿಸರ ಮತ್ತು ಸೈನ್ಯದ ಗುಂಡಿನ ಸುರಿಮಳೆ, ಸಾಮೂಹಿಕ ನರಹತ್ಯೆ, ದಲಿತರ ಕಗ್ಗೊಲೆ, ವಿವಿಧ ಶೋಷಣೆಗಳ ರುದ್ರಕುಣಿತ, ಪ್ರಜಾಪ್ರಭುತ್ವದ ವಿನಾಶ ಈ ಎಲ್ಲಾ ಭಯಾನಕ ಸತ್ಯಗಳ ಕಡೆಗೆ ಕಣ್ಣು ಮುಚ್ಚಿದ್ದಾರೆ. ಬೆಂಕಿಯ ಸಾಗರದ ಮಧ್ಯೆ ಮಂಜಿನ ಗೋಪುರಗಳನ್ನು ಕಟ್ಟಿಕೊಳ್ಳುವ ಯತ್ನ ನಡೆಸಿದ್ದಾರೆ. ಆದರೆ ಮೊದಲ ಗುಂಪಿನ ಲೇಖಕರು ಎಲ್ಲಾ ಕ್ರೌರ್ಯದ ವಿರುದ್ಧ ಹೋರಾಟ ನಡೆಸುವ ಛಲ ಹೊತ್ತವರು; ಇವರು ಪ್ರಜಾಪ್ರಭುತ್ವದ ರಕ್ಷಣೆಗೆ,

ವಿಸ್ತರಣೆಗೆ ದುಡಿಯುತ್ತಿರುವ ಜನ. ಕ್ರಾಂತಿಕಾರಿ ರಾಜಕೀಯ ಪ್ರಜ್ಞೆಯನ್ನು ಹೊಂದಿ ಜನತೆಯ ಹೋರಾಟದ ಬದುಕಿನೊಂದಿಗೆ ಬೆರೆಯಲು ಯತ್ನಿಸುತ್ತಿರುವ ಈ ಸಾಹಿತಿಗಳು ಹೊಸ ಸಂಸ್ಕೃತಿಯನ್ನು ಸೃಷ್ಟಿಸುವ ಆಸೆ ಹೊಂದಿದ್ದಾರೆ. ಅಂಥ ಬಂಡಾಯ ಸಾಹಿತಿಗಳ ಸಮಾವೇಶ ಇದು."[೨]

ಕರಪತ್ರದ ಸೂಕ್ಷ್ಮ ವಿಶ್ಲೇಷಣೆಯಲ್ಲಿ ಹೊಸ ಸಂಸ್ಕೃತಿ–ಕ್ರಾಂತಿ–ಪ್ರತಿಭಟನೆ ಹೋರಾಟ ಇತ್ಯಾದಿ ಸಮಾಜವಾದಿ ವಿಚಾರಗಳ ಪರಿಕಲ್ಪನೆಗಳು ಹಾಗೂ ರಾಜಕೀಯ ಪ್ರಜ್ಞೆಯನ್ನೊಳಗೊಂಡ ಮನಸ್ಸು ಇರುವುದು ಥಕ್ಕನೆ ಹೊಳೆಯುತ್ತದೆ. ಈ ಕರಪತ್ರದ ವಿನ್ಯಾಸದಲ್ಲಿ ಸಾಹಿತ್ಯದ–ಸಾಂಸ್ಕೃತಿಕ ಚಿಂತನೆಗಳಿಗಿಂತ ಸಮಾಜವಾದಿ ಚಿಂತನೆಗಳಿಗೆ ಪ್ರಾಮುಖ್ಯತೆ ಲಭಿಸಿದೆ. ಅಷ್ಟೇ ಅಲ್ಲದೆ ಇದು ಯಾವುದೇ ಬಗೆಯ ಪಾಶ್ಚಾತ್ಯ ವಿಚಾರಧಾರೆಗಳು ಮತ್ತು ಹೋರಾಟಗಳ ಸ್ಫೂರ್ತಿಯಿಂದ ಒಡಮೂಡಿದ 'ಜಾಗೃತಿ'ಯಾಗಿರದೆ ಸ್ಥಳೀಯವಾದ ದೇಶೀಯ ಹೋರಾಟ ಗಳಿಂದ ಮೂಡಿದ ಅರಿವಾಗಿದೆ. ವಿಚಾರವಾದಗಳು ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ, ಚಾರಿತ್ರಿಕ ಅಂಶಗಳನ್ನು ವಿಶ್ಲೇಷಿಸಿದವು. ಅಂಬೇಡ್ಕರ್‌ವಾದ, ಮಾರ್ಕ್ಸ್‌ವಾದ, ಲೋಹಿಯಾವಾದ, ಮಹಿಳಾವಾದ ಮುಂತಾದ ವಾದಗಳು ಕುಂ.ವೀ. ಅವರ ಮೇಲೆ ಗಾಢವಾದ ಪರಿಣಾಮವನ್ನು ಉಂಟು ಮಾಡಿವೆ. ಕುಂ.ವೀ. ಅವರ ಕಥೆಗಳಲ್ಲಿ ಕಾಣಿಸಿಕೊಳ್ಳುವ ಆಕ್ರೋಶ, ಪ್ರತಿಭಟನೆ, ಧಿಕ್ಕಾರ, ಹಿಂಸೆಯ ಮೂಲಬೇರು ಈ ವಾದಗಳಲ್ಲಿಯೇ ಅಡಕವಾಗಿದೆ.

ಅಂಬೇಡ್ಕರ್ ಅವರಲ್ಲಿ ಈ ವ್ಯವಸ್ಥೆ ಕುರಿತು ತೀವ್ರವಾದ ಸಿಟ್ಟು, ಅಸಹನೆ ಮತ್ತು ವಿಷಾದ ಅಡಗಿತ್ತು. ಭಾರತೀಯ ಚರಿತ್ರೆ ಕುರಿತು, ಹಿಂದೂಧರ್ಮ, ದೇವರು, ಸ್ವಾಮಿ, ಸನ್ಯಾಸಿಗಳನ್ನು, ಬ್ರಾಹ್ಮಣ್ಯವನ್ನು ಕುರಿತು ಅವರಿಗಿರುವ ಎಲ್ಲಾ ಬಗೆಯ ಅಸಹನೆಗಳು ನವ್ಯೋತ್ತರ ಸಾಹಿತ್ಯದಲ್ಲಿ ಮೂರ್ತರೂಪ ಪಡೆದಿವೆ. ಅಂಬೇಡ್ಕರರ ಕೇಂದ್ರಚಿಂತನೆ ಭಾರತೀಯ ಜಾತಿಪದ್ಧತಿ ಮತ್ತು ಹರಿಜನ ಉದ್ಧಾರ ಮತ್ತು ಅವರ ಮೇಲೆ ನಡೆದಿರುವ ವಿವಿಧ ಬಗೆಯ ದೌರ್ಜನ್ಯಗಳನ್ನು ಕುರಿತಾಗಿತ್ತು. ಕೆಳವರ್ಗದವರ ಮೇಲೆ ನಡೆದಿರುವ ಹಲ್ಲೆ, ಅಸ್ಪೃಶ್ಯತೆ, ಕೊಲೆ, ಅತ್ಯಾಚಾರ, ಭೂಮಾಲೀಕರ ದೌರ್ಜನ್ಯ ಇವೆಲ್ಲಾ ಕುಂ.ವೀ. ಅವರ ಕಥೆಗಳಾದ 'ಸಿದ್ದನು ಗುರಿ ಇಟ್ಟಿದ್ದು', 'ನಾಯಿಗಳು', 'ಕಪ್ಪು', 'ಹತ್ತೆ', 'ಬೆಟ್ಟದಾಚೆ', 'ಕೆಂಡದಮಳೆ ಕರೆವಲ್ಲಿ ಉದಕವಾದವರು', 'ಕಪ್ಪು ನೆಲದಲ್ಲೊಂದ ಕೆಂಪು ಕತೆ', 'ಡೋಮ', 'ಈಡಾಪಿಂಗಳ ಸುಷುಮ್ನಾನಾಳ ಮಧ್ಯದ ಕೂಗು', 'ಕರಿವೇಮಲ', 'ಬೇಟೆ', 'ಬೇಲಿ ಮತ್ತು ಹೊಲ', 'ಕನಕಾಂಗಿ ಕಲ್ಯಾಣ' ಮುಂತಾದ ಕತೆಗಳಲ್ಲಿ ವಸ್ತುರೂಪ ಪಡೆದಿವೆ.

ಲೋಹಿಯಾ ಅವರ ವಿಚಾರಗಳು ಮಧ್ಯಮವರ್ಗ ಮತ್ತು ಕೆಳಜಾತಿಗಳಾದ ಶೂದ್ರ ಸಮುದಾಯವನ್ನು ಕುರಿತದ್ದಾಗಿದ್ದವು. ಅವರ ತಾತ್ವಿಕ ಚಿಂತನೆಗಳಲ್ಲಿ ವಸಾಹತುಶಾಹಿ ಸಂಸ್ಕೃತಿ, ಭಾಷೆ, ನಡತೆ ಕುರಿತು ಅವರಿಗೆ ತೀವ್ರ ವಿರೋಧವಿತ್ತು. ಅಂತರ್‌ಜಾತೀಯ ವಿವಾಹ, ಮೂಢನಂಬಿಕೆಗಳ ವಿರುದ್ಧ ಪ್ರತಿಭಟನೆ, ಎಲ್ಲಕ್ಕಿಂತ ಸ್ವಾತಂತ್ರ್ಯದ ಮೇಲೆ ನಡೆಯುವ ಎಲ್ಲಾ ಬಗೆಯ ದಬ್ಬಾಳಿಕೆಗಳಿಗೂ ಅವರ ಪ್ರತಿರೋಧವಿತ್ತು.

ಸಾಹಿತ್ಯ ಪ್ರಯೋಜನವನ್ನು ಕುರಿತು ಲೋಹಿಯಾ ಅವರು ಹೀಗೆ ಹೇಳುತ್ತಾರೆ. "ನಮ್ಮ ದೇಶದಲ್ಲಿ ಜನಸಾಮಾನ್ಯರ ಅನಿಸಿಕೆಗೂ ಬುದ್ಧಿಜೀವಿಗಳ ಚಿಂತನೆಗೂ ನಡುವೆ ಇಂಥ ಆಳವಾದ ಕಂದಕ ಏಕೆ ಉಂಟಾಯಿತು ಎಂದು ಮೇಲಿಂದ ಮೇಲೆ ನನಗೆ ಯೋಚನೆಯಾಯಿತು. ಅದಕ್ಕೆ ಉತ್ತರವನ್ನು ಕಂಡುಕೊಂಡಿದ್ದೇನೆ. ಮೂಲಕಾರಣ, ಒಂದೇ ಇಂಡಿಯಾದ ಬುದ್ಧಿ ಜೀವಿಗಳೆಲ್ಲಾ ಸಾಮಾನ್ಯವಾಗಿ ಮೇಲುಜಾತಿಗೆ ಸೇರಿದವರು. ಆದರೆ ಕಾಮದಲ್ಲೋ, ಧಾರ್ಮಿಕ ಅಥವಾ ರಾಜಕೀಯ ದುರಂತಗಳಲ್ಲೋ ಸಾಯುವವರು ಕೀಳುಜಾತಿಯ ಜನ ಹರಿಜನರೇ ಮುಂತಾದವರು. ಆ ಮೇಲುಜಾತಿಗಳು ಈ ಕೀಳುಜಾತಿಗಳು ಇವು ಬೇರೆ ಬೇರೆಯಾದ ಎರಡು ಪ್ರಪಂಚಗಳು. ಇಂಡಿಯಾದ ಬುದ್ಧಿಜೀವಿ ತನ್ನ ಜಾತಿ ಸಂಕುಚಿತತೆಯ ಹೊದಿಕೆ ಚರ್ಮದಿಂದ ಹೊರಗೆ ಕಾಲಿಟ್ಟು ಬರಲಾರನಾದರೆ ಹಿಂದುಳಿದ ಜಾತಿಯ ಜನಗಳ ಹಸಿವು ಕಷ್ಟಕಾರ್ಪಣ್ಯವನ್ನು ಕೆಲ ಮಟ್ಟಿಗಾದರೂ ಅನುಭವಿಸಲು ಶಕ್ತನಾಗದೆ ಹೋದರೆ ಆತ ಮಹಾಲೇಖಕನಿಗಿರಬೇಕಾದ ಸೂಕ್ಷ್ಮಪ್ರಜ್ಞೆಯನ್ನು ಸರ್ವಥಾ ಪಡೆದುಕೊಳ್ಳಲಾರ"[೩] ಎಂಬ ನಿಲುವನ್ನು ವ್ಯಕ್ತಪಡಿಸಿದ್ದಾರೆ.

ಮಾರ್ಕ್ಸ್‌ವಾದವು ಇದೇ ಬಗೆಯದಾದರೂ ಅದು ವರ್ಗಸಂಘರ್ಷದ ಹಿನ್ನೆಲೆಯಲ್ಲಿ ಅಂತಾರಾಷ್ಟ್ರೀಯ ದೃಷ್ಟಿಕೋನದಿಂದ ಸ್ಥಳೀಯ ಸಮಸ್ಯೆಗಳನ್ನು ವಿಶ್ಲೇಷಿಸುವ ವಿಶಾಲ ಗ್ರಹಿಕೆಯನ್ನು ಒಳಗೊಂಡಿದೆ. ಮಾರ್ಕ್ಸ್‌ನು ಹೆಗಲ್‌ರ ಆದರ್ಶವಾದ(Idialism)ವನ್ನು ತಿರುಗುಮುರುಗು ಮಾಡಿ ಅದನ್ನು ಭೌತವಾದವನ್ನಾಗಿ ಮಾಡಿದ(Materialism)ನಲ್ಲದೆ, ಜಗತ್ತಿನಲ್ಲಿ ಪ್ರತಿಯೊಂದು ಕ್ರಿಯೆಯೂ ಕಾರ್ಯಕಾರಣ ಬದ್ಧವಾಗಿದೆ ಹಾಗೂ ವರ್ಗರಹಿತ ಸಮಾಜವು ಅಸ್ತಿತ್ವಕ್ಕೆ ಬಂದ ಕೂಡಲೆ ದುಡಿಯುವವರ ಆದರ್ಶರಾಜ್ಯ ಅಸ್ತಿತ್ವಕ್ಕೆ ಬರುತ್ತದೆ ಎಂದು ಘೋಷಿಸಿದೆ. ಕಲೆ ಹಾಗೂ ಉಳಿದೆಲ್ಲ ಸಾಂಸ್ಕೃತಿಕ ಚಟುವಟಿಕೆಗಳಿಗೆ ಆ ಸಮಾಜದ ಆರ್ಥಿಕ ಚಟುವಟಿಕೆಗಳೇ ಕಾರಣ. ಕಲೆಯನ್ನು ಅದೊಂದು ಸಾಮಾಜಿಕ ಕ್ರಿಯೆ ಎಂದು ಇದನ್ನೇ ಸಮಾಜವಾದಿ ವಿಮರ್ಶಕ ಪ್ಲೆಖನೋವ್ "ಸಮಾಜ ವಿಶ್ಲೇಷಣೆಯೇ ಸಾಹಿತ್ಯ ವಿಮರ್ಶೆಯ ಕಾರ್ಯ; ಸಾಹಿತ್ಯವು ಪ್ರೇರಕ ಶಕ್ತಿಯಲ್ಲ, ಅದು ಒಂದು ವರ್ಗದ ಅಭಿವ್ಯಕ್ತಿ, ದೃಷ್ಟಿಕೋನ ಕಲಾಕಾರನನ್ನು ತಿಳಿದುಕೊಳ್ಳುವುದಾದರೆ

ಆತ ಎಂಥ ಸಮಾಜದಲ್ಲಿದ್ದ, ಯಾವ ವರ್ಗವನ್ನು ಪ್ರತಿನಿಧಿಸುತ್ತಿದ್ದನೆನ್ನುವುದನ್ನು ತಿಳಿದುಕೊಳ್ಳಬೇಕು ಮತ್ತು ಆ ವರ್ಗದ ಹಿತಾಸಕ್ತಿಗಳು ಆತನ ಕೃತಿಯಲ್ಲಿ ಎಷ್ಟು ಪ್ರತಿಪಾದಿತವಾಗಿದೆಯೆಂಬುದನ್ನು ನೋಡಬೇಕು. ಐತಿಹಾಸಿಕ ವಿಶ್ಲೇಷಣೆಯಲ್ಲಿ ವಸ್ತುನಿಷ್ಠತೆ ವಿಮರ್ಶಕನ ಗುಣ''[೪] ಎಂದಿದ್ದಾರೆ.

ಕುಂ.ವೀ. ಅವರ ಸಾಹಿತ್ಯದ ಮೇಲೆ ದಲಿತ ಬಂಡಾಯ ಸಾಹಿತ್ಯ ಪ್ರತಿಭಟನೆ ಹೋರಾಟಗಳು ಹೇಗೆ ಪ್ರಭಾವ ಬೀರಿದವೋ ಹಾಗೆಯೇ ಅಂಬೇಡ್ಕರ್, ಲೋಹಿಯಾ, ಮಾರ್ಕ್ಸ್, ಗಾಂಧಿವಾದದ ಪ್ರಭಾವಗಳಿವೆ. ಹಾಗೆಯೇ ಸ್ತ್ರೀವಾದದ ಪ್ರಭಾವವು ಕೂಡ ಇವರ ಸಾಹಿತ್ಯದ ಮೇಲೆ ಪರಿಣಾಮವನ್ನು ಉಂಟುಮಾಡಿದೆ ಎಂದೇ ಹೇಳಬಹುದು.

### ಸ್ತ್ರೀವಾದ

'ಫೆಮಿನಿಸಮ್' ಎಂದು ಇಂಗ್ಲಿಷ್‌ನಲ್ಲಿ ಚಾಲ್ತಿಯಲ್ಲಿರುವ ಈ ಪರಿಕಲ್ಪನೆ ಪಾಶ್ಚಿಮಾತ್ಯ ಜಗತ್ತಿನಲ್ಲಿ ಹದಿನೆಂಟನೆಯ ಶತಮಾನದ ಕೊನೆ ಹಾಗೂ ಹತ್ತೊಂಬತ್ತನೆಯ ಶತಮಾನದ ಆರಂಭದಲ್ಲಿ ಕಂಡುಬಂದದ್ದು, ನಿಧಾನವಾಗಿ ಮೂರನೆಯ ಜಗತ್ತಿಗೆ ಕಾಲಿರಿಸಿತು. ವರ್ಗವರ್ಣಗಳ ನಡುವಿನ ಭೇದ ಹೇಗೆ ಹೋರಾಟಕ್ಕೆ ಬೀಜವಾಯಿತೋ ಹೇಗೆ ಹೊಸ ಚಿಂತನೆಗಳಿಗೆ ಬೀಜಾಂಕುರ ವಾಯಿತೋ, ಹಾಗೆಯೇ ಲಿಂಗಭೇದ ಅದರಿಂದ ವ್ಯಕ್ತಿ-ವ್ಯಕ್ತಿಯ ಮಟ್ಟದಲ್ಲಿ ಕೌಟುಂಬಿಕ ಮಟ್ಟದಲ್ಲಿ ಹಾಗೂ ಸಾಮಾಜಿಕ, ಆರ್ಥಿಕ, ರಾಜಕೀಯ ಸ್ತರಗಳಲ್ಲಿ ಉಂಟಾಗಿರುವ ಅಸಮಾನತೆ ಕೂಡ ಹೊಸ ಚಿಂತನೆ ಹಾಗೂ ಎಚ್ಚರಗಳಿಗೆ ಕಾರಣವಾಗಿದೆ. ಕನ್ನಡದಲ್ಲಿ 'ಸ್ತ್ರೀವಾದ' ಎಂಬ ಪರಿಕಲ್ಪನೆಯಲ್ಲಿ ಬಳಕೆಯಾಗುತ್ತಿದೆ.

ಸ್ತ್ರೀಶೋಷಣೆಗೆ ಪುರುಷನಷ್ಟೇ ಕಾರಣವಾಗಿರದೆ ಜಾತಿ, ವರ್ಗ, ಸಮಾಜ, ಒಟ್ಟಾರೆ ವ್ಯವಸ್ಥೆ ಅದರಲ್ಲಿನ ಆರ್ಥಿಕ ಅಸಮಾನತೆ, ನಿರುದ್ಯೋಗ, ಬಂಡವಾಳಶಾಹಿ ಪದ್ಧತಿಗಳು ಕಾರಣವಾಗಿರುತ್ತವೆ. ಸ್ತ್ರೀ-ಪುರುಷರ ನಡುವಣ ಸಮಾನತೆ ಮತ್ತು ಸ್ವಾತಂತ್ರ್ಯಗಳು ಈ ಎಲ್ಲದರ ಬದಲಾವಣೆಯ ಜೊತೆ ಸಂಲಗ್ನಗೊಂಡಿರುತ್ತವೆ. ಇಂತಹ ಅಸಮಾನತೆಯನ್ನು ಕುಂ.ವೀ. ಅವರ ಕಥೆಗಳಲ್ಲಿ ಬರುವ ಸ್ತ್ರೀಪಾತ್ರಗಳು ಪ್ರತಿನಿಧಿಸುತ್ತವೆ. ಕೆಳಸಮುದಾಯದ ಹೆಣ್ಣುಗಳ ಮೇಲೆ ನಡೆಯುವ ಲೈಂಗಿಕ ದೌರ್ಜನ್ಯ, ಶೋಷಣೆ ಸಂಪ್ರದಾಯದ ಹೆಸರಿನಲ್ಲಿ ನಡೆಯುವ ಅತ್ಯಾಚಾರಗಳು(ಉದಾ: ಕಪ್ಪು ಕಾದಂಬರಿ) ಕುಂ.ವೀ. ಅವರ ಕಥೆಗಳಲ್ಲಿ ಶೋಷಣೆಗೆ ಒಳಗಾದರೆ, ಕೆಲವು ಪಾತ್ರಗಳು ಅನ್ಯಾಯದ ವಿರುದ್ಧ ಪ್ರತಿಭಟಿಸುವ, ಅಸ್ತಿತ್ವಕ್ಕಾಗಿ ಹೋರಾಡುವ ಪಾತ್ರಗಳು ಇನ್ನೊಂದು ಕಡೆ (ಉದಾ: ಭಗವತಿ ಕಾಡು), ಆಡಳಿತಗಾರರ ವಿರುದ್ಧ ತಿರುಗಿ ನಿಂತು ಪ್ರತಿಭಟಿಸುವ ಪಾತ್ರಗಳೂ ಕಂಡುಬರುತ್ತವೆ.

## ಗಾಂಧಿವಾದದ ಪ್ರಭಾವ

ಕುಂ.ವೀ. ಅವರ ಸಾಹಿತ್ಯದ ಮೇಲೆ ಗಾಂಧೀಜಿಯವರ ಪ್ರಭಾವೂ ಇದೆ. ಬಂಡವಾಳದ ಸಾಮ್ಯವಾದ ಮತ್ತು ಸಮಾಜವಾದಗಳ ಬಗ್ಗೆ ಗಾಂಧಿ ಸ್ಪಷ್ಟ ಹಾಗೂ ಖಚಿತವಾದ ನಿಲುವುಗಳನ್ನು ಹೊಂದಿದ್ದರು. ಗಾಂಧೀಜಿ ವರ್ಗ, ಸಂಘರ್ಷ, ಆರ್ಥಿಕ ಅಸಮಾನತೆ, ಜಾತಿಯ ವೈರುಧ್ಯಗಳ ಪರಿಹಾರಕ್ಕೆ ಅಹಿಂಸಾತ್ಮಕವಾಗಿ ಸಹಕರಿಸುವುದರ ಮೂಲಕ ಮುಕ್ತರಾಗಬಹುದು ಎನ್ನುತ್ತಾರೆ. ಗಾಂಧಿವಾದ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಪ್ರಗತಿಗೆ ಅನುವು ಮಾಡಿಕೊಡುತ್ತದೆ. ಸ್ವಚ್ಛಜೀವನವನ್ನು ಸಮಾಜದ ಹಿತಕ್ಕಾಗಿ ಧಾರೆ ಎರೆಯಬೇಕು. ಈ ಸಮಾಜದಲ್ಲಿ ಸ್ವಾತಂತ್ರ್ಯ ಸಮಾನತೆ, ಸಮೃದ್ಧಿ ಮತ್ತು ಶಾಂತಿ ಶಾಶ್ವತವಾಗಿ ನೆಲೆಗೊಂಡಿರುತ್ತದೆ ಎಂದು ಗಾಂಧೀಜಿ ಭಾವಿಸಿದ್ದರು.

ಗಾಂಧಿವಾದವು ರಾಷ್ಟ್ರೀಯತೆಗೆ ಹೆಚ್ಚು ಗಮನ ಕೊಡುತ್ತದೆ. ದೇಶದಲ್ಲಿರುವ ಜನರ ಬಡತನ, ಅಜ್ಞಾನ, ಜಾತಿಭೇದ ಮುಂತಾದ ಸಮಸ್ಯೆಗಳಿಂದ ಬಿಡುಗಡೆಯಾಗುವುದು ಗಾಂಧಿತತ್ವದ ಗುರಿಯಾಗಿತ್ತು. ಅಸ್ಪೃಶ್ಯತಾ ನಿವಾರಣೆ, ದಲಿತೋದ್ಧಾರ, ಖಾದಿ ಗ್ರಾಮೋದ್ಯೋಗ, ಪುನರುಜ್ಜೀವನ, ಗ್ರಾಮನೈರ್ಮಲ್ಯ, ಸಾಕ್ಷರೀಕರಣ ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ದೇಶದ ಮಾನವರ ಜೀವನದಲ್ಲಿ ಬದಲಾವಣೆಗಳನ್ನು ತರಲು ಗಾಂಧೀಜಿಯವರು ಪ್ರಯತ್ನಿಸಿದರು. ಸಾಮಾಜಿಕ ಅನಿಷ್ಟಗಳ ವಿರುದ್ಧ ಜನತೆಯನ್ನು ವ್ಯಕ್ತಿಗತವಾಗಿ ಹಾಗೂ ಸಾಂಘಿಕವಾಗಿ ಎಚ್ಚರಿಸಿದರು. ಶೋಷಣಾರಹಿತ ಸಮಾಜ ನಿರ್ಮಾಣದ ಆಶಯವನ್ನು ಹೊಂದಿದ ಗಾಂಧೀಜಿ ವಿಮೋಚನೆಗಾಗಿ ಅಹಿಂಸಾತ್ಮಕ ಮಾರ್ಗವನ್ನು ಬಲವಾಗಿ ನಂಬಿದ್ದರು. ಒಟ್ಟಾರೆ ಮೇಲೆ ಚರ್ಚಿಸಲಾದ ಎಲ್ಲಾ ತಾತ್ವಿಕ ನಿಲುವುಗಳು ಬಂಡಾಯ ಹಾಗೂ ದಲಿತ ಸಾಹಿತ್ಯದ ಬರಹಗಾರರ ಮೇಲೆ ಪ್ರಭಾವಿತವಾಗಿವೆ. ಗಾಂಧೀಜಿಯವರ ತಾತ್ವಿಕ ನಿಲುವುಗಳು ಕುಂ.ವೀ. ಅವರ ಸಾಹಿತ್ಯದ ಮೇಲೆಯೂ ಪ್ರಭಾವ ಬೀರಿವೆ.

## ೩.೪. ಕುಂ.ವೀ. ಅವರ ಸಾಹಿತ್ಯ: ತೆಲುಗು ವಿಪ್ಲವ ಸಾಹಿತ್ಯ ಪ್ರಭಾವ

ನಕ್ಸಲ್ಬರಿ ಪಶ್ಚಿಮ ಬಂಗಾಳದ ಡಾರ್ಜಿಲಿಂಗ್ ಜಿಲ್ಲೆಯ ಸಿಲಿಗುರಿ ಉಪವಿಭಾಗಕ್ಕೆ ಸೇರಿದ ಒಂದು ಭಾಗವಾಗಿದೆ. ಹಿಮಾಲಯ ಪರ್ವತಗಳ ತಪ್ಪಲಿನಲ್ಲಿ ಇದು ನೆಲೆಗೊಂಡಿದ್ದು ಇಲ್ಲಿನ ಜನತೆ ಮುಖ್ಯವಾಗಿ ಸಂತಾಲರು, ಉರಾವ್ ಮತ್ತು ರಾಜವಂಶಿ ಬುಡಕಟ್ಟಿಗೆ ಸೇರಿದವರಾಗಿದ್ದಾರೆ. ಜೋಡಿದಾರರ ಅಧಿಹಾರ್ ವ್ಯವಸ್ಥೆಯಲ್ಲಿ ಅಂದರೆ ಬಹುತೇಕ ಗುತ್ತಿಗೆ ಆಧಾರದ ಮೇಲೆ ಭೂಮಿಯನ್ನು ಉಳುತ್ತ ತೀವ್ರ ರೀತಿಯ ಶೋಷಣೆಗೆ ಒಳಗಾಗಿದ್ದರೂ ಅಲ್ಲಿನ ಭೂಮಾಲೀಕರ ಹಾಗೂ ಟೀ ತೋಟಗಳ ಮಾಲೀಕರ ವಿರುದ್ಧ ಸಶಸ್ತ್ರದಂಗೆಯನ್ನು ಪ್ರಾರಂಭಿಸಿದರು. ಒಂದು ಪ್ರಾಂತ್ಯದಿಂದ ಆರಂಭವಾದ ಈ ಹೋರಾಟ ಕ್ರಮೇಣ ರಾಷ್ಟ್ರವ್ಯಾಪ್ತಿಯಾಗಿ ಹರಡಿತು.

ಆಂಧ್ರದ ಶ್ರೀಕಾಕುಳಂ ಕೂಡ ಬುಡಕಟ್ಟಿನ ಪ್ರದೇಶ. ಸವಾರ ಮತ್ತು ಜಟಾಪು ಬುಡಕಟ್ಟಿನವರು ಇಲ್ಲಿ ವಾಸಿಸುತ್ತಾರೆ. ಲಖಿಂಪುರ ಖೇರಿಯ ರೈತರು ಸಹ ಬುಡಕಟ್ಟಿನವರು. ೧೯೬೭ರ ಹೊತ್ತಿಗೆ ರಾಜಕೀಯ ಸಂಪರ್ಕವುಳ್ಳ ಭೂಮಾಲೀಕರಿಂದ ಹಲವಾರು ಮಂದಿ ಕಾನೂನು ಬಾಹಿರವಾಗಿ ಆಸ್ತಿಯನ್ನು ಕಳೆದುಕೊಂಡ ವಿವರಗಳು **'ಬದ್ದಂ'** ಅವರ ಕಥೆ ಮತ್ತು ಕಾದಂಬರಿಗಳಲ್ಲಿ ಕಾಣಬಹುದು.

೧೯೬೮ರ ಹೊತ್ತಿಗೆ ಉತ್ತರ ಬಿಹಾರದಲ್ಲಿನ ಮುಜಾಫರ್‌ಪುರ ಜಿಲ್ಲೆಯ ಮಶಾಹರಿಗೆ ನಕ್ಸಲೀಯರಿಂದ 'ಹಾವಾ' ಪಸರಿಸಿತು. ಆರ್ಥಿಕ ಸಮಸ್ಯೆಗಳ ಮೇಲಿನ ಚಳುವಳಿಯು ತತ್‌ಕ್ಷಣವೇ ಸಶಸ್ತ್ರಬಂಡಾಯವಾಗಿ ಮಾರ್ಪಟ್ಟಿತು. ಆಂಧ್ರದ ತೆಲಂಗಾಣ ಪ್ರದೇಶದಲ್ಲಿ ಜಮೀನ್ದಾರಿ ದುರಾಡಳಿತವು ತೀವ್ರರೂಪದಲ್ಲಿತ್ತು. ಶೋಷಣೆಗೆ ಪ್ರತಿಯಾಗಿ ಜನತೆ ಪ್ರತಿಭಟನೆ ವ್ಯಕ್ತಪಡಿಸ ತೊಡಗಿದರು. ಸ್ವಾತಂತ್ರ್ಯ ಪೂರ್ವದಲ್ಲಿಯೇ ಆಂಧ್ರ ಮಹಾಸಭಾದ ಮೂಲಕ ಲೇಖಕರು, ಬುದ್ಧಿಜೀವಿಗಳು ಮುಂತಾದವರು ಸೇರಿ 'ಸಂಘಂ' ಸಂಸ್ಥೆಯನ್ನು ರಚಿಸಿಕೊಂಡು ಪ್ರಚಲಿತ ಅನಿಷ್ಟಗಳಿಗೆ ಸೂಕ್ತ ಪ್ರತಿಕ್ರಿಯೆ ತೋರಿಸಿದರು. ಆರ್ಥಿಕ ಸಾಮಾಜಿಕ ಸಮಸ್ಯೆಗಳತ್ತ ದಿಟ್ಟ ಹೆಜ್ಜೆ ಇರಿಸಿ ಬಂಧಿತನ ಸಪ್ತಾಹ, ಬಿಟ್ಟಿಚಾಕರಿ ಸಪ್ತಾಹ ಮತ್ತು ಹತ್ತಾರು ಪ್ರತಿಭಟನಾ ಸಪ್ತಾಹಗಳನ್ನು ಹಮ್ಮಿಕೊಂಡರು. ಜನರ ಬದುಕು ಸುಧಾರಿಸಿದ ನಂತರವೇ ಸಾಹಿತ್ಯದ ಬಗ್ಗೆ ಯೋಚಿಸುವುದೆಂದು ಸಭೆ ನಿರ್ಧರಿಸಿತು. ಈ ಸಂಘಟನೆಯಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದ ಬದ್ದಂ, ಎಲ್ಲಾರೆಡ್ಡಿ, ಕೋದಂಡರಾಮರೆಡ್ಡಿ ಮುಂತಾದ ಲೇಖಕರು ಮುಂದೆ ಕಮ್ಯುನಿಸ್ಟ್ ಸಿದ್ಧಾಂತದಿಂದ ಪ್ರಭಾವಿತ ರಾದರು.

ಜುಲೈ ೪, ೧೯೪೬ರಂದು ತೆಲಂಗಾಣ ಹೋರಾಟಕ್ಕೆ ಮುಖ್ಯ ತಿರುವು ಸಿಕ್ಕಿತು. ಕಾಲದ ದೃಷ್ಟಿಯಿಂದಲೂ ಇದು ಸಂಕ್ರಮಣ ಸ್ಥಿತಿ ೧೯೪೬ರಿಂದ ೧೯೫೧ರವರೆಗೆ ಹರಡಿದೆ. ೧೯೩೦ರಲ್ಲಿ ಏರ್ಪಟ್ಟ ಆಂಧ್ರಮಹಾಸಭೆಯೇ ಈ ಸಂಕ್ರಮಣ ಸ್ಥಿತಿಗೆ ಪೂರ್ವರಂಗವನ್ನು ಸಿದ್ಧಮಾಡಿಕೊಟ್ಟಿತು. ಈ ಐದು ವರ್ಷದ ಅವಧಿಯಲ್ಲಿ ಹುಟ್ಟಿಕೊಂಡ ಸಾಹಿತ್ಯ ಜನಸಮುದಾಯವನ್ನು ಪ್ರತಿಭಟನಾತ್ಮಕ ವಾಗಿ, ಸಾಂಸ್ಕೃತಿಕವಾಗಿ, ಸೈದ್ಧಾಂತಿಕವಾಗಿ ರೂಪಿಸಿತು. ನೂರಾರು ಮಂದಿ ಪ್ರಜಾಕವಿಗಳು ವೈವಿಧ್ಯಮಯವಾಗಿ ಕಥೆ, ಕವಿತೆಗಳನ್ನು ರಚಿಸಿ ಹಾಡಿದರು. ಈ ಕಥೆ, ಕವಿತೆಗಳು ಕುಂ.ವೀರಭದ್ರಪ್ಪ ಅವರ ಆರಂಭದ 'ದಿವೀ ಸೀಮೆಯ ಹಾಡು' ಮತ್ತು 'ಡೋಮ ಮತ್ತಿತರ ಕಥೆಗಳು' ಕಥಾ ಸಾಹಿತ್ಯದ ಮೇಲೆ ತೀವ್ರವಾದ ಪ್ರಭಾವವನ್ನು ಬೀರಿವೆ.

ಜಮೀನ್ದಾರಿ ವ್ಯವಸ್ಥೆಯ ವಿರುದ್ಧ ಹೋರಾಡಿ ಮಡಿದ ದೊಡ್ಡಿ ಕೊಮರಯ್ಯ ಮತ್ತಿತರ ಅನೇಕ ವೀರರನ್ನು ಆಧರಿಸಿ ಗಂಗಾನೇನಿ ವೆಂಕಟೇಶ್ವರರಾವು 'ಎರ್ರಜೆಂಡಾಲು'(ಕೆಂಪು ನಿಶಾನೆ)

ಶೀರ್ಷಿಕೆಯಲ್ಲಿ ಮೂರು ಸಂಪುಟಗಳನ್ನು ಹೊರತಂದರು. ತೆಲಂಗಾಣ ರೈತ ಹೋರಾಟದ ಯಥಾರ್ಥ ಚಿತ್ರಣವನ್ನು ಪಟ್ಟಿಕೋಟಿ ಆಳ್ವಾರುಸ್ವಾಮಿ, ಪೊಟ್ನಪಲ್ಲಿ ರಾಮರಾವು, ಸಿ.ವಿ. ಕೃಷ್ಣರಾವು ಕಾಳೋಜಿ ಮುಂತಾದವರ ಕಥೆಗಳಲ್ಲಿ ಕಾಣಬಹುದು.

ತೆಲಂಗಾಣ ಹೋರಾಟದಷ್ಟೇ ಶ್ರೀಕಾಕುಳಂ ಗಿರಿಜನರ ಸಶಸ್ತ ಹೋರಾಟವು ಕೂಡ ತೆಲುಗಿನ ವಿಪ್ಲವ ಸಾಹಿತ್ಯವನ್ನು ಭದ್ರಪಡಿಸಿದೆ. ಬಂಗಾಲದ ನಕ್ಸಲ್ಬರಿಯಲ್ಲಿ ಸಶಸ್ತ್ರಚಳುವಳಿ ತನ್ನ ಜ್ವಾಲೆಯನ್ನು ಶ್ರೀಕಾಕುಳಂ ಕಡೆ ಚಾಚಿತು. ತೆಲಂಗಾಣ ಮತ್ತು ಶ್ರೀಕಾಕುಳಂ ಹೋರಾಟದ ವಾತಾವರಣಗಳೆರಡೂ ಒಂದೇ. ಈ ಎರಡೂ ಚಳುವಳಿಗಳಿಗೆ ಗುರಿ ಜಮೀನ್ದಾರಿ ವ್ಯವಸ್ಥೆ ಮತ್ತು ಕಾಂಗ್ರೆಸ್ ಸರ್ಕಾರ್ದ ಬಂಡವಾಳಶಾಹಿಪರ ನಾಟಕೀಯ ಧೋರಣೆಗಳು ಎನ್ನಬಹುದು. ವಿಪ್ಲವ ಬರಹಗಾರರ ಸಂಘದ ಬಹುಪಾಲು ಲೇಖಕರು ಹೋರಾಟ, ಬಂಡಾಯ ಮತ್ತು ಪ್ರತಿಭಟನೆಯನ್ನು ಮಾಡುತ್ತಾ ಹಿಂಸೆಯಿಂದಲೇ ಜೀವನ ನಡೆಸುತ್ತಿರುತ್ತಾರೆ. ವಾಸ್ತವ ಜೀವನಕ್ಕೂ, ಸಾಹಿತ್ಯಕ್ಕೂ ಅವರಲ್ಲಿ ವ್ಯತ್ಯಾಸವೇ ಇಲ್ಲವಾಗಿದೆ. ಆದ್ದರಿಂದಲೇ ತೆಲುಗು ವಿಪ್ಲವ ಸಾಹಿತ್ಯ ಮತ್ತು ವಿಪ್ಲವ ಕವಿಗಳು ಅಷ್ಟೊಂದು ತೀವ್ರವಾದ ಹಸಿ ಹಸಿ ಅನುಭವಗಳನ್ನು ತಮ್ಮ ಕಥೆ, ಕಾದಂಬರಿ, ಕಾವ್ಯಗಳಲ್ಲಿ ಸಮೃದ್ಧವಾಗಿ ಪರಿಣಾಮಕಾರಿಯಾಗಿ ಸೆರೆ ಹಿಡಿದಿದ್ದಾರೆ.

ಆಂಧ್ರದ ತೆಲುಗು ವಿಪ್ಲವ ಸಾಹಿತ್ಯದಿಂದ ಪ್ರೇರಣೆ ಪಡೆದ ಕನ್ನಡ ಬಂಡಾಯ ಮತ್ತು ದಲಿತ ಸಾಹಿತ್ಯದ ಬರಹಗಾರರ ಅನುಭವಗಳು ಸಾಮ್ಯತೆಯನ್ನು ಪಡೆದುಕೊಂಡಿರುವುದರಿಂದ ಅದೇ ರೀತಿಯ ಧೋರಣೆಗಳನ್ನು ಅಳವಡಿಸಿಕೊಂಡು ಸಾಹಿತ್ಯ ರಚನೆಗೆ ತೊಡಗಿದ್ದಾರೆ. ವಿಶೇಷವಾಗಿ ಆಂಧ್ರದ ಗಡಿಭಾಗದಲ್ಲಿ ತಮ್ಮ ಜೀವಿತದ ಬಹುಪಾಲು ಕಾಲಾವಧಿಯನ್ನು ಕಳೆದ ಕುಂ.ವೀರಭದ್ರಪ್ಪ ನವರಿಗೆ ಬಂಡಾಯ ಸಾಹಿತ್ಯದಿಂದ ಮತ್ತು ತೆಲುಗು ವಿಪ್ಲವ ಸಾಹಿತ್ಯದಿಂದ ಪ್ರೇರಣೆ ಪ್ರಭಾವಗಳಾಗಿವೆ. ಕುಂ.ವೀ. ಕಥಾಸಾಹಿತ್ಯದಲ್ಲಿ ಮೇಲ್ಜಾತಿ ಮತ್ತು ಮೇಲ್ವರ್ಗದವರ, ಕೆಳಜಾತಿ ಮತ್ತು ಕೆಳವರ್ಗದವರ ಮೇಲೆ ಶೋಷಣೆ, ದೌರ್ಜನ್ಯ ಮತ್ತು ಭ್ರಷ್ಟಾಚಾರಗಳು ವಸ್ತುಗಳಾಗಿವೆ. ಹಸಿವಿನ ಚಿತ್ರಣವಂತೂ ಹಸಿದವರ ಹೊಟ್ಟೆಯ ಒಳಹೊಕ್ಕು ಚಿತ್ರಿಸಿರುವಂತೆ ಮೈನವಿರೇಳಿಸುವ ಅನುಭವ ಕೊಡುತ್ತವೆ. ಈ ಬಗೆಯ ಬರವಣಿಗೆ ಶೈಲಿ ಮತ್ತು ವಸ್ತುವಿನ ಆಯ್ಕೆಯೇ ಕುಂ.ವೀರಭದ್ರಪ್ಪನವರನ್ನು ಇತರೆ ಬಂಡಾಯ ಬರಹಗಾರರಿಗಿಂತ ಪ್ರತ್ಯೇಕಿಸಿ ಬಂಡಾಯ ಸಾಹಿತ್ಯದಲ್ಲಿ ವಿಶೇಷವಾದ ಛಾಪನ್ನು, ಸ್ಥಾನವನ್ನು ನೀಡಿದೆ ಎನ್ನಬಹುದು.

**ಕುಂ.ವೀ. ಅವರೇ ಹೇಳುವಂತೆ**

"ಸಾಹಿತ್ಯಕ್ಕೆ ಸಂಬಂಧಿಸಿದಂತೆ ಯಾವುದೇ ಪ್ರೇರಣೆ ಪ್ರಭಾವ ವ್ಯಕ್ತಿಯಿಂದ ಅಥವಾ ಕೃತಿಯಿಂದ ತೀವ್ರವಾಗಿ ಆಗದಿದ್ದರೂ ಅಂತಿಮ ಪ್ರೇರಣೆ ಸಿಕ್ಕಿರೋದು ಬದುಕಿನಿಂದ. ನಾನು

ಹುಟ್ಟಿನಿಂದ ಕುಂಬಾರಿಕೆಯ ಜನಾಂಗದವನು. ಈ ಎಲ್ಲಾ ಪರಿಸ್ಥಿತಿಗಳಿಗೆ ಪ್ರತಿಕ್ರಿಯಿಸಲೆಂದು ಅಭಿವ್ಯಕ್ತಿ ಮಾಧ್ಯಮವಾಗಿ ಬರಹವನ್ನು ಆರಿಸಿಕೊಂಡೆ"(೯೯೩-೯) ಎನ್ನುವ ಕುಂ.ವೀ. ಅವರು ತಾವು ಬರಹಗಾರರನಾದದ್ದೇ ಆಕಸ್ಮಿಕ ಎಂದು ಹೇಳುತ್ತಾರೆ. ತಮ್ಮ ಸಾಹಿತ್ಯದ ಧೋರಣೆ ಹೇಗೆ ರೂಪಗೊಂಡಿತು ಎಂಬುದರ ಬಗ್ಗೆ ಹೀಗೆ ಹೇಳುತ್ತಾರೆ. "ಬರಹ ಬದುಕಿಗಿಂತ ಭಿನ್ನವಾಗಿಲ್ಲ. ಬರೆಯುತ್ತಾ ಆಲೋಚಿಸುತ್ತಾ ಹೋದಂತೆ ಸಾಹಿತ್ಯಕ್ಕೆ ಖಚಿತವಾದ ರೂಪ ದೊರಕಿತು. ಅದಕ್ಕೆ ಪೂರಕವಾಗಿ ಮಾವೋ, ಮಾರ್ಕ್ಸ್, ಗಾಂಧಿ, ಲೋಹಿಯಾ, ಅಂಬೇಡ್ಕರ್ ಇವರುಗಳ ಬರಹ ಆದರ್ಶ ಮತ್ತು ಆಲೋಚನೆ ಗಳಿಂದ ಪ್ರೇರಿತನಾಗಿದ್ದೇನೆ."(೯೯೩-೧೦) ಎಂದು ಕುಂ.ವೀ. ಅವರೇ ಹೇಳಿಕೊಂಡಿದ್ದಾರೆ. ಇವರು ಅಸಹಾಯಕ ಮತ್ತು ನಿರ್ಗತಿಕರ ಬಗ್ಗೆ ಮಾನವೀಯ ಅನುಕಂಪ ಹೊಂದಿದ್ದಾರೆ. ಕುಂ.ವೀರಭದ್ರಪ್ಪ ತೆಲುಗು ವಿಪ್ಲವದ ನಕ್ಸಲ್‌ಬಾರಿ ಚಳುವಳಿಯ ಚೆರಬಂಡರಾಜು, ವರವರರಾವು, ವೆಂಕಟರಾಮರೆಡ್ಡಿ, ಭೈರವಯ್ಯ, ಜ್ವಾಲಾಮುಖಿ, ನಗ್ನಮುಖಿ ಮೊದಲಾದ ಕ್ರಾಂತಿಕಾರಿ ಬರಹಗಾರರ ಬರವಣಿಗೆಯಿಂದ ಮತ್ತು ಅಲ್ಲಿನ ಗಡಿಭಾಗದ ಭೀಕರ ಪರಿಸರದಿಂದಲೂ ಉತ್ತೇಜಿತರಾಗಿದ್ದಾರೆ. ಅದು ಅವರ ಕಥೆ-ಕಾದಂಬರಿ ಗಳಲ್ಲಿ ಸಾಂದರ್ಭಿಕವಾಗಿ ಹಾಗೂ ಸ್ಪಷ್ಟವಾಗಿ ಮೂಡಿಬಂದಿದೆ.

**೩.೫. ಕುಂ.ವೀ. ಅವರ ಸಾಹಿತ್ಯ: ಕರ್ನಾಟಕ-ಆಂಧ್ರದ ಪರಿಸರ ಪ್ರಭಾವ**

ಕುಂ.ವೀ. ಅವರು ತಮ್ಮ ಶಿಕ್ಷಕವೃತ್ತಿಯನ್ನು ಆಂಧ್ರ ಮತ್ತು ಕರ್ನಾಟಕದ ಗಡಿಭಾಗಗಳಲ್ಲಿ ಮಾಡಿರುವುದರಿಂದ ಅವರ ಕಥೆಗಳ ಬಹುಪಾಲು ಪಾತ್ರಗಳು ಅಲ್ಲಿನ ದಲಿತರ, ಜಮೀನ್ದಾರರ, ರೆಡ್ಡಿಗಳ ಒಡನಾಟದಿಂದ ಪ್ರೇರೇಪಿತವಾದ ಕಥೆಗಳೇ ಆಗಿವೆ. ವಂದವಾಗಿಲಿ, ಒಳಗುಂದಿ, ಹಿರೇಹೆಗ್ಡಾಳು ಮುಂತಾದ ಹಳ್ಳಿಗಳ ದಟ್ಟವಾದ ಪ್ರಭಾವವನ್ನು ಅವರು ಜೀವಂತ ಅನುಭವಗಳ ಮುಖಾಂತರ ದಟ್ಟವಾಗಿಯೇ ಚಿತ್ರಿಸುತ್ತಾ ಬಂದಿದ್ದಾರೆ. ಹುಟ್ಟೂರಾದ ಕೊಟ್ಟೂರು, ಅಲ್ಲಿನ ಪ್ರಾದೇಶಿಕ ಹಿನ್ನೆಲೆ ಹಾಗೂ ಆಂಧ್ರದ ಗಡಿಭಾಗದ ಜೀವನ ಹೋರಾಟ ಕಥೆಯಾಗಿ ಮೂಡಿ ಬಂದಿದೆ. ಕುಂ.ವೀ. ಅವರೇ ಹೇಳುವಂತೆ "ವಂದವಾಗಿಲಿಗೆ ತಲುಪಲು ರಸ್ತೆಗಳಿರಲಿಲ್ಲ, ವಿದ್ಯುತ್ ಎಂಬುದು ಮೊದಲೇ ಇರಲಿಲ್ಲ. ಶೂದ್ರ, ದಲಿತರಿಗೆ ಶಿಕ್ಷಣ ನಿಲುಕಬಾರದೆಂದೇ ಶಾಲೆ ವೀರಭದ್ರ ದೇವರ ಗುಡಿಯಲ್ಲಿತ್ತು. ಅಲ್ಪಸಂಖ್ಯಾತ ಜಮೀನ್ದಾರರು, ಬಹುಸಂಖ್ಯಾತ ಶೂದ್ರರನ್ನು ಕೈಗೊಂಬೆಗಳನ್ನಾಗಿ ಮಾಡಿಕೊಂಡಿದ್ದರು. ಗೌಡರ ಮನೆಗಳಲ್ಲಿ ಜೀತ ಮಾಡಿಕೊಂಡಿದ್ದ ದಲಿತರ ಬದುಕಂತೂ ಅಸಹನೀಯವಾಗಿತ್ತು. ಯಾರ ಜಮೀನನ್ನು ಯಾರೋ ಅಡವಿಟ್ಟು ಸಾಲ ಪಡೆಯುತ್ತಿದ್ದರು. ವರ್ಷಕ್ಕೊಂದೆರಡು ಖೂನಿಗಳು, ತಿಂಗಳಿಗೊಮ್ಮೊಮ್ಮೆ ಗುಂಪು ಜಗಳಗಳು, ವಾರಕ್ಕೊಂದೊಂದು ಸಲ ಪರಸ್ತ್ರೀ ಅಪಹರಣಗಳು, ನಿರ್ವಿರಾಮವಾಗಿ ನಡೆಯು ತ್ತಿದ್ದವು. ಇದು ನಾನು ಆ ಹಳ್ಳಿಯನ್ನು ಪ್ರವೇಶ ಮಾಡಿದಾಗಿನ ಚಿತ್ರ."

"ಆ ಹಳ್ಳಿಯಲ್ಲಿ ಮೇಸ್ಟ್ರಾಗಿರುವುದು ಒಂದೇ. ಅಂಡಮಾನಿನಲ್ಲಿ ಕಾಲಾಪಾನಿ ಶಿಕ್ಷೆ ಅನುಭವಿಸುವುದು ಒಂದೇ ಎಂಬ ಅಭಿಪ್ರಾಯವಿತ್ತು. ಅಲ್ಲಿ ಜಾತಿವ್ಯವಸ್ಥೆ ಎಷ್ಟು ಅಮಾನವೀಯ ವಾಗಿತ್ತೆಂದರೆ ಅಲ್ಲಿ ನನ್ನನ್ನು ಕುಂಬಾರಯ್ಯವಾರು ಎಂದೇ ಗುರುತಿಸುತ್ತಿದ್ದರು. ಒಂದೆರಡು ವರ್ಷಗಳ ನಂತರವೇ ಕೆಲವರು ಮಾತ್ರ ನನ್ನನ್ನು ವೀರಭದ್ರಪ್ಪಯ್ಯವಾರು ಎಂದು ಕರೆಯತೊಡಗಿದ್ದು. ಓಣೋಣಿಗೊಬ್ಬರಂತೆ ಕೊಲೆಗಡುಕರಿದ್ದರು. ಊಟೋಪಚಾರ ಮತ್ತು ಮಲವಿಸರ್ಜನೆ ನಡುವಿನ ವ್ಯತ್ಯಾಸವೇ ತಿಳಿದಿರದಿದ್ದ ಆ ಹಳ್ಳಿಯಲ್ಲಿ ವಾಸಿಸುವುದೂ ಒಂದೇ, ಒರಳಿನಲ್ಲಿ ತಲೆ ಇಟ್ಟು ಬದುಕುವುದೂ ಒಂದೇ ಎಂದು ಅನೇಕ ನೌಕರರು ಭಾವಿಸಿದ್ದರು. ವೆರಿಯರ್ ಎಲ್ವಿನ್ ಮತ್ತು ಕನುಸನ್ಯಾಲ್‌ರೀರ್ವರನ್ನು ತಲೆಯೊಳಗೆ ಪೋಷಿಸಿಟ್ಟುಕೊಂಡಿದ್ದ ನಾನು, ಅಲ್ಲೇ ವಾಸಿಸಲು ನಿರ್ಧರಿಸಿದೆನಾದರೂ ಯಾರೊಬ್ಬರೂ ಮನೆ ಕೊಡಲಿಲ್ಲ. ನನ್ನಲ್ಲಿ ಅದೇನು ವಿಶೇಷ ಕಂಡನೋ ಗುರುಬಸಪ್ಪ ತನ್ನೆರಡಂಕಣದ ಮನೆ ವಾಸಕ್ಕಾಗಿ ನೀಡಿದ..."

"ಶೂದ್ರರ ಮಕ್ಕಳನ್ನು ಶಾಲೆಗೆ ಸೇರಿಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದೆ. ದಲಿತರ ಮಕ್ಕಳನ್ನು ಸೇರಿಸಿಕೊಳ್ಳುವುದು ಮಾತ್ರ ಸುಲಭವಾಗಿರಲಿಲ್ಲ. ನಮ್ಮ ಶಾಲೆ ದೇವಾಲಯದಲ್ಲಿದ್ದದ್ದೇ ಅದಕ್ಕೆ ಕಾರಣ. ತುರ್ತುಪರಿಸ್ಥಿತಿ ನೀಡಿದ ಕಾನೂನುಗಳ ಸಹಾಯದಿಂದ ಶಾಲೆಯನ್ನು ಸವರ್ಣೀಯರ ಓಣಿಯ ಗುಡಿಯಿಂದ ಹೊಲಗೇರಿಯ ಓಣಿಯ ಕಂದಾರೆಮ್ಮ ಗುಡಿಗೆ ಐತಿಹಾಸಿಕವಾಗಿ ವರ್ಗಾಯಿಸಿದೆ. ಹೆಸರು ಖೂನ ಗುರುತು ಇರದಿದ್ದ ದಲಿತರ ಮಕ್ಕಳಿಗೆ ಸುರೇಶ, ರಮೇಶ, ಸತೀಶ ಎಂದು ನಾಮಕರಣ ಮಾಡಿ ಶಾಲೆಗೆ ಸೇರಿಸಿಕೊಂಡೆ. ಸವರ್ಣೀಯರು ನನ್ನ ಮೇಲೆ ಅಘೋಷಿತ ಬಹಿಷ್ಕಾರ ಹೇರಿದರು. ಅವರು ಮಾಡಿದ ಕೊಲೆಗಿಂತ ಭಯಾನಕವಾದ ಹೇಯವಾದ ಹಲ್ಲೆ ಎಂದರೆ ಕುಂಬಾರ-ಕುಂಬಾರ ಎಂದು ಅವಹೇಳನ ಫಲವಾಗಿ ಇಂದು ಸವರ್ಣೀಯರೊಂದೇ ಅಲ್ಲದೇ ದಲಿತರು ಸುಶಿಕ್ಷಿತರಾಗಿ ಅನೇಕ ನೌಕರಿಗಳಲ್ಲಿದ್ದಾರೆ. ತಮ್ಮ ಗ್ರಾಮವನ್ನು ಜಮೀನ್ದಾರಿಕೆಯ ಕಪಿಮುಷ್ಟಿಯಿಂದ ಪಾರು ಮಾಡಿದ್ದಾರೆ. ಜಾತಿವ್ಯವಸ್ಥೆಯನ್ನು ಸಡಿಲಗೊಳಿಸಿದ್ದಾರೆ. ನನ್ನ ಈ ಕೃತ್ಯವು ಎಲ್ಲಾ ಸಾಹಿತ್ಯಕ ಪ್ರಕಾರಗಳಿಗಿಂತ ದೊಡ್ಡದೆಂದು ಭಾವಿಸಿದ್ದೇನೆ. ಕಾಲಾನುಕ್ರಮಕ್ಕೆ ನನ್ನ ಅನುಭವಗಳಿಗೆ ಕಥೆಯ ರೂಪ ಕೊಟ್ಟು ಸಾರಸ್ವತ ಲೋಕದೊಂದಿಗೆ ಸಂವಾದ ಇಟ್ಟುಕೊಂಡಿದ್ದೇನೆ. ಬರೆದು ಬರೆದೂ ಹಗುರಾಗಿದ್ದೇನೆ. 'ದೇವರ ಹೆಣ', 'ಕಿವುಡ ನಾಯಿಯಾದ ಪ್ರಸಂಗ', 'ಕತ್ತಲನು ತ್ರಿಶೂಲ ಹಿಡಿದ ಕಥೆ' ಹೀಗೆ ನನ್ನ ಬಹುಪಾಲು ಕಥೆಗಳ 'ಕಪ್ಪು', 'ಯಾಪಿಲ್ಲು' ಕಾದಂಬರಿಗಳ ಬೇರುಗಳಿರುವುದು ಈ ನನ್ನ ಅನುಭವದ ನೆಲದಲ್ಲೇ. ನನ್ನ ಕಥೆಗಳೊಳಗಿನ ಬಹುಪಾತ್ರಗಳು ವ್ಯಾಕರಣ ಭಾಷೆ ತಂತ್ರ ಎಲ್ಲಾ ಇಲ್ಲಿಯದೆ. ಹೀಗಾಗಿ ನನ್ನ ಕಥೆಗಳು ಬರಿ ಕಥೆ ಎಂದು ಕರೆದು ನಾನ್ಯಾವ ನರಕಕ್ಕೆ ಹೋಗಲಿ! ಅದಕ್ಕೆ ನನ್ನ ಕಥಾಸಂಕಲನಕ್ಕೆ **'ಬರಿ ಕಥೆಯಲ್ಲೋ ಅಣ್ಣಾ'** ಎಂಬ ಶೀರ್ಷಿಕೆ ಕೊಟ್ಟಿರುವುದು."

"ವಂದವಾಗಿಲಿಯಿಂದ ಇನ್ನೊಂದು ವಿಲಕ್ಷಣ ಗ್ರಾಮವಾದ ಗೂಳ್ಯಂಗೆ ವರ್ಗವಾದೆ. ಅಲ್ಲಿ ನಾನಿದ್ದದ್ದು ಬರೋಬ್ಬರಿ ಹದಿನಾಲ್ಕು ವರ್ಷ. ಅಲ್ಲಿನ ಒಂದೊಂದು ಅನುಭವವೂ ಒಂದೊಂದು ಕಥೆಯೇ. ಕಗ್ಗೊಲೆಗಳು ಒಂದರ ಹಿಂದೊಂದರಂತೆ ನಡೆಯಲಾರಂಭಿಸಿದ್ದರಿಂದ ಆ ನನ್ನ ಪ್ರೀತಿಯ ಊರನ್ನು ಬಿಡಬೇಕಾಗಿ ಬಂತು. ಅಲ್ಲಿದ್ದ ಅವಧಿಯಲ್ಲಿ 'ಕರಿಮಲ', 'ಸೂತಕ', 'ಮೊಲಂ ಸಿಂಹಂ ಕೊಂದ ಕಥೆ' – ಹೀಗೆ ಜಮೀನ್ದಾರಿಕೆ ಗತ್ತು ಗೈರತ್ತುಗಳಿಗೆ ಸಂಬಂಧಿಸಿದಂತೆ ಕಥೆಗಳನ್ನು ಬರೆದೆ ಬರೆದೆ ಬರೆದೆ... ನನ್ನ ಕುತೂಹಲ ತಣಿಸಿಕೊಳ್ಳಲು ಎಲ್ಲಾ ಅಪಾಯಕಾರಿ ಜಾಗ ಗವಿಗಹ್ವರಗಳನ್ನು ಹೊಕ್ಕು ಬಂದೆ ಹಲಗೇರಿ ವೀರರೆಡ್ಡಿ, ಗಂಗಲು ಪ್ರತಾಪರೆಡ್ಡಿ, ಬುಡ್ಡವೆಂಗಳ ರೆಡ್ಡಿ ಮೊದಲಾದ ಜಮೀನ್ದಾರರನ್ನು ಅವರವರ ಊರೊಳಗೆ ಬೆಟ್ಟ ಮಾಡಿರುವ ಕಪಟ್ರಾಳ್ ವೆಂಕಪ್ಪನಾಯ್ಡು ಮಾತ್ರ ನನ್ನನ್ನು ತನ್ನ ಊರೊಳಗೆ ಬಿಟ್ಟುಕೊಳ್ಳಲಿಲ್ಲ.

ಒಂದೊಂದು ಕಥೆಯಿಂದಲೂ ಹಲ್ಲೆಗೊಳಗಾಗಿದ್ದೇನೆ. 'ಇನ್ನಾದರೂ ಸಾಯಬೇಕು' ಕಥೆ ಬರೆದು ಕೋರ್ಟಿನ ಕಟ್ಟೆ ಹತ್ತಿದ್ದೇನೆ. ಬರೆಯದಿದ್ದರೆಲ್ಲಿ ಈ ಕಥೆ ಸೆಟಗೊಂಡು ದೂರ ಹೋಗಿ ಬಿಡುವುದೋ, ನಾನು ಎಲ್ಲಿ ಅನಾಥವಾಗಿ ಬಿಡುವೆನೋ ಎಂದು ಪರಿತಪಿಸಿದ್ದೇನೆ. ಮುನಿಸಿ ಮೂಲೇಲಿ ಕೂತಿರುತ್ತಿದ್ದ ಕಥೆಗಳನ್ನು ಸಂತೈಸಿ ಶೃಂಗಾರ ಮಾಡಿದ್ದೇನೆ. ಅಲ್ಲಿ ನನಗೆ ನನ್ನ ಕಷ್ಟ ಸುಖ ತೋಡಿಕೊಳ್ಳಲು, ಒಡನಾಡಲು, ಕೂಲಂಕಷವಾಗಿ ಚರ್ಚಿಸಲು, ಬೌದ್ಧಿಕ ಲೋಕದೊಳಗೆ ವಿಹರಿಸಲು, ನಗಲು, ಅಳಲು ಯಾರಾದರೂ ಗೆಳೆಯರಿದ್ದರೆ ತಾನೇ? ಕಥಾಪ್ರಕಾರವೇ ನನಗೆ ಬಂಧು ಬಳಗ ಗೆಳೆಯನೆಲ್ಲವೂ. ಮುಖ್ಯವಾಗಿ ನಾನು ಬರೆಯತೊಡಗಿದ್ದು ನನ್ನಿಂದ ನಾನು ಬಿಡುಗಡೆ ಪಡುಕೊಳ್ಳುವ ಸಲುವಾಗಿ. ಸ್ವಾತಂತ್ರ್ಯ ಲಭಿಸಿ ಇಷ್ಟು ವರ್ಷಗಳಾದರೂ ಇಂಥದ್ದೊಂದು ಸಮಾಜ ಅಸ್ತಿತ್ವದಲ್ಲಿರುವುದೆಂದು ತುರ್ತು ಮೇಸೇಜ್ ನೀಡುವ ಸಲುವಾಗಿ." ಆದ್ದರಿಂದ ಕುಂ.ವೀ. ಅವರ ಸಾಹಿತ್ಯದಲ್ಲಿ ಬದುಕಿನ ನೈಜಘಟನೆಗಳ, ಕನ್ನಡ ಸಂಸ್ಕೃತಿಗೆ ಹೊರತಾದ, ಸ್ವಲ್ಪಮಟ್ಟಿಗೆ ಕ್ರೂರವೂ ವಿಕೃತವೂ ಅನ್ನಬಹುದಾದ ಹೊರನಾಡಿನ ಗಡಿಪ್ರದೇಶದ ವಿಭಿನ್ನ ಸಂಸ್ಕೃತಿಯ ದಟ್ಟ ಚಿತ್ರಣವನ್ನು ನಾವು ಕಾಣಬಹುದಾಗಿದೆ. ಈ ವಿಭಿನ್ನವಾದ ಸಂಸ್ಕೃತಿಯ ಕುಂ.ವೀ. ಅವರ ಸ್ವಾನುಭವಗಳೇ ಅವರ ಸಾಹಿತ್ಯಕ್ಕೆ ಮುಖ್ಯ ಪ್ರೇರಣೆಗಳಾಗಿವೆ. ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಅವರ ಈ ಬಗೆಯ ವಿಭಿನ್ನವಾದ ವಿವರಗಳು ಅವರನ್ನು ಒಬ್ಬ ವಿಶಿಷ್ಟ ಲೇಖಕರನ್ನಾಗಿ ರೂಪಿಸಿವೆ.

**ಕೊನೆಟಿಪ್ಪಣಿ**

೧. ಕುಂ.ವೀರಭದ್ರಪ್ಪ, ನಿಜಲಿಂಗ ಕಥಾಸಂಕಲನ, ಮುನ್ನುಡಿ, ೧೯೯೪ಳ, ಯುವಕ ಸಂಘ, ರಾಮನಗರ.

೨. ಪ್ರಹ್ಲಾದ ಅಗಸನಕಟ್ಟೆ, ದಲಿತ ಬಂಡಾಯ ಕಾವ್ಯ ಮತ್ತು ವಿಚಾರವಾದಗಳು, ೨೦೦೪, ಹರ್ಷ ಪ್ರಕಾಶನ, ಹುಬ್ಬಳ್ಳಿ, ಪು. ೨೪.

೩. ಕಾಳೇಗೌಡ ನಾಗವಾರ, ಪ್ರೀತಿ ಮತ್ತು ನಿರ್ಭೀತಿ, ೧೯೮೮, ರಶ್ಮಿ ಅಧ್ಯಯನ ಕೇಂದ್ರ, ಮೈಸೂರು, ಪು. ೫೮.

೪. ಬಿ.ವಿ. ಶಾಸ್ತ್ರೀ, ಸಾಹಿತ್ಯದಲ್ಲಿ ತತ್ವವಾದಗಳು, ೧೯೭೬, ಸಮಾಜ ಪುಸ್ತಕಾಲಯ, ಧಾರವಾಡ, ಪು. ೧೦೪.

೫. ಕುಂ.ವೀರಭದ್ರಪ್ಪ, ಇದು ಬರಿ ಕಥೆಯಲ್ಲೋ ಅಣ್ಣ, ೧೯೯೭, ಸಮಗ್ರ ಕಥೆಗಳ ಸಂಗ್ರಹ, ಮುನ್ನುಡಿ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ಪು. ೧೦.

ಅಧ್ಯಾಯ ನಾಲ್ಕು

## ಕುಂ. ವೀರಭದ್ರಪ್ಪ: ಲೇಖಕ

**೪.೧. ಕುಂ.ವೀ. ಅವರ ಸೃಜನಶೀಲ ಸಾಹಿತ್ಯ**

೪.೧.೧. ಕೆಳಸಮುದಾಯಗಳ ಹಸಿವಿನ ಹೋರಾಟದ ಕಥೆಗಳು

೪.೧.೨. ಆಂಧ್ರಪ್ರದೇಶದ ಜಮೀನ್ದಾರಿ ವ್ಯವಸ್ಥೆಯ ಕ್ರೌರ್ಯವನ್ನು ಕುರಿತ ಕಥೆಗಳು

೪.೧.೩. ಶೋಷಣೆ ಹಾಗೂ ಅಮಾನವೀಯತೆಯ ಕಥೆಗಳು

೪.೧.೪. ಭಾಷಾವಿಮುಖತೆಯ ಕಥೆಗಳು

೪.೧.೫. ಸ್ತ್ರೀಸಂವೇದನೆ ಇರುವ ಕಥೆಗಳು

೪.೧.೬. ಕುಂ.ವೀ. ಅವರ ಕಾದಂಬರಿ ಸಾಹಿತ್ಯ

**೪.೨. ಕುಂ.ವೀ. ಅವರ ಸಾಹಿತ್ಯ ಸ್ವರೂಪ**

೪.೨.೧. ಕವನಸಂಕಲನಗಳು

೪.೨.೨. ಕಥಾಸಂಕಲನಗಳು

೪.೨.೩. ಕಾದಂಬರಿಗಳು

೪.೨.೪. ವಿಮರ್ಶೆ ಹಾಗೂ ವೈಚಾರಿಕ ಲೇಖನಗಳು

೪.೨.೫. ಜೀವನಚರಿತ್ರೆಗಳು

೪.೨.೬. ಆತ್ಮಕಥನ

**೪.೩. ಕುಂ.ವೀ. ಅವರ ಸಾಹಿತ್ಯ ರಚನಾಸ್ವರೂಪ**

೪.೩.೧. ಭಾಷೆ, ಶೈಲಿ, ತಂತ್ರ

೪.೩.೨. ಕಥೆ ಮತ್ತು ಕಥಾವಸ್ತು

೪.೩.೩. ದೇಸಿ ಸಂವೇದನೆಯ ಸಮಗ್ರ ಗ್ರಹಿಕೆ

ಅಧ್ಯಾಯ ನಾಲ್ಕು

# ಕುಂ.ವೀರಭದ್ರಪ್ಪ: ಲೇಖಕ

ಜ್ಞಾನಸಂಪಾದನೆಗೆ, ಜ್ಞಾನಪ್ರಸರಣಕ್ಕೆ ಅತ್ಯಂತ ಪ್ರಭಾವಶಾಲಿ ಮತ್ತು ಪರಿಣಾಮಕಾರಿ ಮಾಧ್ಯಮವೆಂದರೆ ಅಕ್ಷರಮಾಧ್ಯಮ. ಈ ಮಾಧ್ಯಮದಲ್ಲಿ ಜೀವನಸೌಂದರ್ಯವನ್ನು ಸಂಸ್ಕೃತಿಯನ್ನು ಬುದ್ಧಿ ಮತ್ತು ಮನಸ್ಸುಗಳನ್ನು ವರ್ಧಿಸುವ ಸಾಧನವೆಂದರೆ ಸಾಹಿತ್ಯ. ನಿತ್ಯ ಪರಿವರ್ತನಶೀಲವಾದ ಜಗತ್ತಿನ ಜ್ಞಾನ ಮತ್ತು ವಿಜ್ಞಾನ, ಸಂಸ್ಕೃತಿ ಹಾಗೂ ಮಾನವ ಜೀವನವನ್ನು ಪ್ರತಿಬಿಂಬಿಸುತ್ತಾ ಪುಷ್ಟಿಗೊಳಿಸುತ್ತಾ ವಿಕಸನದ ಕಡೆಗೆ ಕರೆದೊಯ್ಯುವುದೇ ಸಾಹಿತ್ಯ. ಇಂಥ ಜೀವನಕ್ರಮವನ್ನು, ಉತ್ತಮ ಜ್ಞಾನಸಂಪತ್ತನ್ನು, ವಿಶಿಷ್ಟ ಹಾಗೂ ಅರ್ಥಪೂರ್ಣ ಗ್ರಂಥಗಳ ಮೂಲಕ ಕನ್ನಡ ಓದುಗರಿಗೆ ಕುಂ.ವೀ. ಅವರು ಮೂವತ್ತು ವರ್ಷಗಳಿಂದಲೂ ನೀಡುತ್ತಾ ಬಂದಿದ್ದಾರೆ. ಕುಂ.ವೀ. ಅವರೇ ಹೇಳುವಂತೆ, "ನಾನು, ನನ್ನಂಥ ಗ್ರಾಮೀಣ ಹಿನ್ನೆಲೆಯ ಲೇಖಕರು ಯಾವುದೇ ವಿಶ್ವವಿದ್ಯಾಲಯದಿಂದ ಬರಹ ರೂಢಿಸಿಕೊಂಡವರಲ್ಲ. ನಾವು ಓದಿದ್ದು ಅಕ್ಷರ ಕಲಿತುಕೊಂಡದ್ದು ಎಷ್ಟು ಆಕಸ್ಮಿಕವೋ ಬರೆಯತೊಡಗಿದ್ದು ಅಷ್ಟೇ ಆಕಸ್ಮಿಕ. ಪುಂಖಾನುಪುಂಖವಾಗಿ ಕಥೆ ಹೇಳುತ್ತಿದ್ದ ಪದಗಳನ್ನು ಕಟ್ಟಿ ಹಾಡುತ್ತಿದ್ದ ಬೊಚ್ಚು ಬಾಯಿಯ ಅನಕ್ಷರಸ್ಥ ಹಿರಿಯರ ನಡುವೆ ಬಾಲ್ಯ ಕಳೆಯದಿದ್ದಲ್ಲಿ ನನಗೆ ಬರಹದ ಆಸಕ್ತಿ ಮೂಡುತ್ತಿರಲಿಲ್ಲ. ಕಲ್ಲುಗೋಡೆಗಳಿಗೆ ಡಿಕ್ಕಿ ಹೊಡೆದು ತಾಕತ್ತನ್ನು ಪರೀಕ್ಷಿಸುವ ಗೋಜಿಗೂ ಹೋಗುತ್ತಿರಲಿಲ್ಲ."[೧] ಕನ್ನಡ ಸಾಹಿತ್ಯಕ್ಕೆ ಕುಂ.ವೀ. ಅವರ ಗದ್ಯಸಾಹಿತ್ಯದ ಕಾಣಿಕೆ ಅಪೂರ್ವವಾದುದು.

## ೪.೧. ಕುಂ.ವೀ. ಅವರ ಸೃಜನಶೀಲ ಸಾಹಿತ್ಯ

ಮಾರ್ಕ್ಸ್ ಹೇಳುವಂತೆ ಕೆಳಸ್ತರದಲ್ಲಿ ಆಗುವ ಪರಿಣಾಮಗಳು ಮೇಲುಸ್ತರದಲ್ಲಿ ಕಂಪನವನ್ನು ಉಂಟುಮಾಡುತ್ತವೆ. ಮಾನವನ ಬದುಕಿಗೆ ಒಂದು ದೊಡ್ಡ ಇತಿಹಾಸವೇ ಇದೆ. ಅವನ ಬೆಳವಣಿಗೆಗೆ ಮತ್ತು ಆ ಬೆಳವಣಿಗೆಯ ಹಂತಕ್ಕೆ ಮುಖ್ಯವಾಗಿ ಕಾರಣವಾದದ್ದು ಆತನ

ಭೌತಿಕ ಚಟುವಟಿಕೆ. ಇದನ್ನು ಮಾನವನ ನಾಗರಿಕತೆಯ ಬೆಳವಣಿಗೆಯ ಹಂತದಿಂದ ಗುರ್ತಿಸಬಹುದು. ಈ ಭೌತಿಕ ಚಟುವಟಿಕೆ ಮಾನವನ ಲೋಪದೋಷಗಳನ್ನು ಹೆಕ್ಕಿ ಅವನ ಅರಿವಿನ ದಿಗಂತವನ್ನು ಹಿಗ್ಗಿಸಲೆತ್ನಿಸಿತು. ಹಾಗೆಯೇ ಅವನ ಬದುಕಿನ ಅನನ್ಯತೆಗೆ ಕಾರಣ ವಾಯಿತು. ಈ ಭೌತಿಕ ಚಟುವಟಿಕೆಯು ತನ್ನ ಬೆಳವಣಿಗೆಯ ಕಾಲಮಾನಗಳಲ್ಲಿ ವಿವಿಧ ಆಯಾಮಗಳನ್ನು, ವಿವಿಧ ಮಜಲುಗಳನ್ನು ಪಡೆದು ಹೊಸ ರೂಪವನ್ನು ಪಡೆಯಿತು. ಭಾರತದ ಸಂದರ್ಭದಲ್ಲಿ ಬ್ರಿಟಿಷರ ಆಗಮನದಿಂದ ದೇಶೀಯ ಅರಿವು ಹಲವು ದಿಕ್ಕುಗಳಲ್ಲಿ ರೂಪಗೊಂಡಿತು. ಈ ಸಂದರ್ಭದಲ್ಲಿ ಬ್ರಿಟಿಷರು ನಮ್ಮ ಸಮಾಜದ ಮೇಲೆ ಸಾಧಿಸಿದ ನಿಯಂತ್ರಣ ಮತ್ತು ಪ್ರಚಂಡ ರಾಜಕೀಯ ಶಕ್ತಿಯಿಂದ ದೇಶವನ್ನೇ ವಸಾಹತುವನ್ನಾಗಿಸಿಕೊಂಡು ಆಳ್ವಿಕೆ ನಡೆಸಿರುವುದು ಗಮನಾರ್ಹವಾಗಿದೆ.

ಸ್ವಾತಂತ್ರ್ಯಪೂರ್ವದಲ್ಲಿ ದೇಶದ ನಾನಾ ಭಾಗಗಳಲ್ಲಿ ಹಲವು ರಾಜಮನೆತನಗಳು, ಪಾಳೇಗಾರರು, ಜಮೀನ್ದಾರರು ಮುಂತಾದವರು ಯಜಮಾನಿಕೆಯನ್ನು ನಡೆಸಿದ್ದನ್ನು ನೋಡುತ್ತೇವೆ. ಹಾಗೆಯೇ ಪ್ರಜೆ ಮತ್ತು ಪ್ರಭು, ಶೋಷಕ ಮತ್ತು ಶೋಷಿತರ ನಡುವಿನ ಅಂತರ ಕಾಪಾಡಿಕೊಂಡು ಬಂದಿದ್ದನ್ನು ಸಹ ನೋಡುತ್ತೇವೆ. ಇದಕ್ಕೆ ಆಳುವ ವರ್ಗಗಳು ರೂಪಿಸಿಕೊಂಡ ಸಾಮಾಜಿಕ, ರಾಜಕೀಯ ನೀತಿ ನಿಯಮಗಳು ಕಾರಣವಾಗುತ್ತವೆ. ಈ ಸಂದರ್ಭದಲ್ಲಿ ಕೆಳಸಮುದಾಯಗಳು ಪರರ ಹಿತಕ್ಕಾಗಿ ತಮಗೆ ಅರಿವಿಲ್ಲದಂತೆಯೇ ದುಡಿದವು. ಇವರು ಜಮೀನ್ದಾರರಿಂದ, ಮೇಲು ಜಾತಿಯವರಿಂದ ಹಾಗೂ ವಸಾಹತುಶಾಹಿಯ ಹಿಡಿತಕ್ಕೂ ಸಿಲುಕಿದರು. ಈ ಕೆಳಸಮುದಾಯಗಳು ಈ ಸಂದರ್ಭದಲ್ಲಿ ಪ್ರಜಾಪ್ರಭುತ್ವ ಹಾಗೂ ಆಧುನಿಕ ನಾಗರಿಕತೆಯ ಬದುಕಿಗೆ ಯೋಚಿಸದ ಸ್ಥಿತಿಯನ್ನು ತಲುಪಿದವು. ಈ ಕೆಳಸಮುದಾಯಗಳು ಪ್ರಜಾಪ್ರಭುತ್ವದ ಸಂದರ್ಭದಲ್ಲಿ ಆಳುವ ವರ್ಗದವರಿಂದ ಮುಕ್ತಿ ಪಡೆಯಲು ನಡೆಸಿದ ಹೋರಾಟದ ಸ್ಥಿತಿ, ಅವರ ಮನೋಭಾವ ನೋವು ನಲಿವುಗಳು, ಅವರ ಆಶೋತ್ತರಗಳು ಇವೆಲ್ಲವುಗಳನ್ನು ಕುಂ.ವೀ. ಅವರು ಅತ್ಯಂತ ಸಹಜವಾಗಿ ವಾಸ್ತವದ ನೆಲೆಗಟ್ಟಿನ ಮೇಲೆ ತಮ್ಮ ಕಥೆಗಳ ಉದ್ದಕ್ಕೂ ಚಿತ್ರಿಸುತ್ತಾ ಬಂದಿದ್ದಾರೆ. ಕೆಳಸಮುದಾಯಗಳ ದಮನಿತ ಸ್ಥಿತಿಯನ್ನು ತಮ್ಮ ಕಥೆಗಳಲ್ಲಿ ಕಾದಂಬರಿಗಳಲ್ಲಿ ಹಿಡಿದಿಟ್ಟಿದ್ದಾರೆ. ಕುಂ.ವೀ. ಅವರು ೧೯೮೦ರ ದಶಕದಲ್ಲಿ ತಮ್ಮ ಬರವಣಿಗೆಯನ್ನು ಪ್ರಾರಂಭಿಸಿದರು. ಮೂಲತಃ ವೃತ್ತಿಯಿಂದ ಶಿಕ್ಷಕರಾದರೂ ಪ್ರವೃತ್ತಿಯಿಂದ ಒಬ್ಬ ಸೃಜನಶೀಲ ಲೇಖಕರು. ಶ್ರೀಯುತರು ತಮ್ಮ ವೃತ್ತಿಬದುಕಿನಲ್ಲಿ ಕರ್ನಾಟಕ ಮತ್ತು ಆಂಧ್ರದ ಗಡಿಭಾಗಗಳಲ್ಲಿ ಕರ್ತವ್ಯ ನಿರ್ವಹಿಸಿರುವುದರಿಂದ ಆ ಗಡಿ ಪ್ರದೇಶದ ಜೀವನದಲ್ಲಿನ ಕ್ರೌರ್ಯ, ಶೋಷಣೆ ಹಾಗೂ ಬಡತನವನ್ನು ರಕ್ತ ಹೆಪ್ಪುಗಟ್ಟುವಂತೆ ಚಿತ್ರಿಸಿದ್ದಾರೆ. ಆದ್ದರಿಂದ ಅವರ

ಕಥಾಸಾಹಿತ್ಯಕ್ಕೆ ವಿಶಿಷ್ಟ ಪ್ರಾದೇಶಿಕತೆ ಮತ್ತು ಸಾಂಸ್ಕೃತಿಕ ಹಿನ್ನೆಲೆಗಳು ಒದಗುತ್ತವೆ. ಅವರಿಗಾದ ಸಾಂಸ್ಕೃತಿಕ ಪರಿಸರದ ಪ್ರಭಾವಗಳು ಅವರ ಸಾಹಿತ್ಯದಲ್ಲಿ ಸ್ನಿಗ್ಧವಾಗಿ ಕಾಣಿಸಿಕೊಂಡಿವೆ.

ಈ ಅಧ್ಯಯನದ ಅನುಕೂಲತೆಗಾಗಿ ಕುಂ.ವೀ. ಅವರ ಕಥೆ, ಕಾದಂಬರಿಗಳನ್ನು ಈ ಕೆಳಗೆ ಸೂಚಿಸಿರುವ ಆಯಾಮಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿದ್ದೇನೆ.

೧. ಕೆಳಸಮುದಾಯಗಳ ಹಸಿವಿನ ಹೋರಾಟದ ಕಥೆಗಳು.

೨. ಆಂಧ್ರ ಪ್ರದೇಶದ ಜಮೀನ್ದಾರಿ ವ್ಯವಸ್ಥೆಯ ಕ್ರೌರ್ಯವನ್ನು ಕುರಿತ ಕಥೆಗಳು.

೩. ಶೋಷಣೆ ಹಾಗೂ ಅಮಾನವೀಯತೆಯ ಕಥೆಗಳು.

೪. ಭಾಷಾವಿಮುಖತೆಯ ಕಥೆಗಳು.

೫. ಸ್ತ್ರೀ ಸಂವೇದನೆ ಉಳ್ಳಂತಹ ಕಥೆಗಳು.

೬. ಶಾಮಣ್ಣ–ಪರಂಪರೆ ಮತ್ತು ಆಧುನಿಕತೆಯ ಮುಖಾಮುಖಿ.

೭. ಯಾಪಿಲ್ಲು–ಇಂಗ್ಲಿಷ್ ಶಿಕ್ಷಣಕ್ರಮದಿಂದಾಗುವ ಸಾಂಸ್ಕೃತಿಕ ಅನಾಹುತಗಳ ಕಾಮಿಕ್ ಕಥಾನಕವಾಗಿ.

೮. ಅರಮನೆ–ರಾಜಸತ್ತೆ, ಬ್ರಿಟಿಷ್ ಪ್ರಭುತ್ವ ಮತ್ತು ಜನಸತ್ತೆಯ ಮುಖಾಮುಖಿ.

೯. ಹೇಮರೆಡ್ಡಿ ಮಲ್ಲಮ್ಮನ ಕಥೆಯು–ದುಃಸ್ವಪ್ನಗಳ ಪರಿಶೆ.

೧೦. ನಿಜಲಿಂಗ–ಚೋರಕಲೆಯ ನೀತಿ ಕೋಶವಾಗಿ.

**೪.೧.೧. ಕೆಳಸಮುದಾಯಗಳ ಹಸಿವಿನ ಹೋರಾಟದ ಕಥೆಗಳು**

ಮಾನವನ ಮೂಲಭೂತ ಅವಶ್ಯಕತೆಗಳಲ್ಲಿ ಅನ್ನ ಎನ್ನುವುದು ತುಂಬಾ ಪ್ರಧಾನವಾದದ್ದು. ವಚನಕಾರರು ಹೇಳುವಂತೆ, "ಬಡತನಕ್ಕೆ ಉಂಬ ಚಿಂತೆ" ಎನ್ನುವಂತೆ ಕುಂ.ವೀ. ಅವರು ತಮ್ಮ ಅನೇಕ ಕಥೆಗಳಲ್ಲಿ 'ಹಸಿವಿನ' ನಾನಾ ಮುಖಗಳ ದರ್ಶನವನ್ನು ಮಾಡಿಸುತ್ತಾರೆ. ಮನುಷ್ಯರಿಗೆ ಹಸಿವು ಉಂಟಾದಾಗ ಅವರು ಮೇಲುಜಾತಿಯ ಕಟ್ಟುಪಾಡುಗಳನ್ನು ಮುರಿದು ಅವುಗಳನ್ನು ಚೂರು ಲೆಕ್ಕಕ್ಕೆ ತಾರದೆ ತಮ್ಮ ಉಳಿವಿಗಾಗಿ ಹೋರಾಟ ಮಾಡುವ ಅನಿವಾರ್ಯತೆ ಯನ್ನು ಕುಂ.ವೀ. ಅವರು ಸಹಜವಾಗಿ ಚಿತ್ರಿಸುತ್ತಾರೆ.

**ಕತ್ತಲನು ತ್ರಿಶೂಲ ಹಿಡಿದ ಕಥೆ**

ಈ ಕಥೆಯಲ್ಲಿ ಹಸಿವಿನ ವಿದ್ರಾವಕ ಚಿತ್ರಣ ಬರುತ್ತದೆ. ಕತ್ತಲನು ತನ್ನ ಹಸಿವನ್ನು ತೀರಿಸಿಕೊಳ್ಳುವ ಸಲುವಾಗಿ ಒಮ್ಮೆ ಗೌಡರ ಗದ್ದೆಯಲ್ಲಿನ ಜೋಳದ ತೆನೆಗೆ ಕೈಹಾಕಿ, ಗೌಡನ ಹಸಿದಂಟಿನ ಹೊಡೆತಗಳಿಗೆ ಬಲಿಯಾಗಿದ್ದನು. ಆಗ ಅವನು ಪ್ರತಿಭಟಿಸದವನಾಗಿದ್ದ. ಆದರೆ

ಕತ್ತಲನು ಮದುವೆಯಾದ ಹೊಸತರಲ್ಲಿ ಗೌಡ ತನ್ನ ಹೆಂಡತಿ ಸುಂಕಲಿಯನ್ನು ಉಂಡಿರುವನೆಂದು ಗೊತ್ತಾದಾಗ "ಹುಟ್ಟಿಸೋನು ಅವನು, ಸಾಕೋರು ನಾವು" ಎಂದು ಕತ್ತಲನು ಸಿಟ್ಟಿನಿಂದ ತನ್ನ ಹೆಂಡತಿಗೆ ಹುಟ್ಟಿದ ಮಕ್ಕಳ ಕತ್ತು ಹಿಸುಕುವುದರ ಮೂಲಕ ಪ್ರತಿಭಟಿಸಿದ್ದ. ನಂತರ ಅವನು ಯುಗಾದಿ ಹಬ್ಬದ ದಿನ ಹಸಿವು ತಾಳಲಾರದೆ ಎಲ್ಲಿಯೂ ಅನ್ನ ಸಿಗದೆ ಮೇಲುವರ್ಗದವರು ಶಿವನ ಗುಡಿಗೆ ಎಡೆ ಕೊಡುವುದನ್ನು ನೋಡಿ ಅಲ್ಲಿರುವ ಅನ್ನದ ರಾಶಿಯನ್ನು ನೋಡಿ ಅವನ ಹಸಿವು ನೂರ್ಮಡಿ ಹೆಚ್ಚಿ ದೇವಸ್ಥಾನದ ಒಳಗೆ ನುಗ್ಗಿ ಅನ್ನವನ್ನು ತಿಂದು ತನ್ನ ಪಂಚೆಯಲ್ಲಿ ಕಟ್ಟಿಕೊಳ್ಳುತ್ತಿರುವಾಗ ಪೂಜಾರಿಯು ಜನರನ್ನು ಕರೆದುಕೊಂಡು ಬಂದು ತನ್ನನ್ನು ಮುಗಿಸಲು ನುಗ್ಗುತ್ತಿರುವುದನ್ನು ನೋಡಿ ಕತ್ತಲನು ಒಂದು ತೀರ್ಮಾನಕ್ಕೆ ಬರುತ್ತಾನೆ:

'ಇತ್ತ ಒಳಗೆ ನುಗ್ಗಿದ ಕತ್ತಲ ಅವಸರವಾಗಿ ಸಿಕ್ಕ ಸಿಕ್ಕಿದ್ದು ಬಾಯಿಗೆ ತುರುಕಿಕೊಂಡು ಗಂಟಲಿಗೆ ಬಿದ್ದಾಗ ತೀರ್ಥದ ತಂಬಿಗೆ ಎತ್ತಿದ. ತಿಂದಾದ ಮೇಲೆ ದೋತರದ ಒಂದು ಮಗ್ಗುಲಿಗೆ ಹುಗ್ಗಿ ಹೋಳಿಗೆ ಗಂಟುಕಟ್ಟಿಕೊಂಡ. ಹೊರಗೆ ದಡ್, ದಡ್ ಶಬ್ದ ಬೇರೆ. ಮಂದಿ ಗುಡಿಕಡೆ ಓಡುತ್ತಾ ಬರುತ್ತಿರುವುದನ್ನು ಕಿಟಕಿ ಮೂಲಕ ಕಂಡವನೆ ಲಿಂಗದ ಪಕ್ಕ ನಿಲ್ಲಿಸಿದ್ದ ತ್ರಿಶೂಲ ಎತ್ತಿಕೊಂಡು ಬಾಗಿಲ ಬಳಿಗೆ ಬಂದ. ಎದುರಿಗೆ ಗೋಡೆಯಂತೆ, ನಿಂತಿದ್ದ ದಿಗ್ಭ್ರಾಂತ ಜನ. ಆತ ಯಾವೋನಾದ್ರೂ ಬಂದ್ರೆ ಈ ತ್ರಿಶೂಲದಿಂದ ಇರ್ದುಬುಡ್ತೀನಿ.[೨]

ಇಲ್ಲಿ ಕತ್ತಲನು ಹಸಿವು ಮತ್ತು ಅಸ್ಪೃಶ್ಯತೆಯನ್ನು ಏಕಕಾಲಕ್ಕೆ ಮೆಟ್ಟಿ ನಿಂತು ಪ್ರತಿಭಟಿಸುವುದನ್ನು ಕಾಣುತ್ತೇವೆ. ಇಲ್ಲಿ ಕತ್ತಲನು ತ್ರಿಶೂಲ ಹಿಡಿದ ರೀತಿ ಒಂದು ಬಗೆಯಲ್ಲಿ ನಾಟಕೀಯವೆನಿಸಿದರೂ ಅದರ ಹಿಂದಿನ ಹಸಿವು ನಮ್ಮನ್ನು ಕಾಡುತ್ತದೆ.

**ದೇವರ ಹೆಣ**

'ದೇವರ ಹೆಣ' ಕಥೆಯು ಹಸಿವನ್ನೇ ಕೇಂದ್ರವಾದ ಆಶಯವನ್ನು ಹೊಂದಿದೆ. ಶೊಣ್ಣೆ ಮತ್ತು ಆತನ ಕುಟುಂಬ ಮೂರು ದಿನಗಳಿಂದ ಹಸಿವಿನಿಂದ ನರಳುತ್ತಿರುವ ಚಿತ್ರಣ ಹಾಗೂ ಒಲೆಯಲ್ಲಿ ಮೂರು ದಿನದಿಂದ ಅಡಿಗೆ ಮಾಡದೆ, ಅಲ್ಲಿ ಬೆಕ್ಕು ಮಲಗಿರುವ ಚಿತ್ರಣ ತುಂಬಾ ನೈಜವಾಗಿ ಮೂಡಿಬಂದಿದೆ. ಇದಕ್ಕೂ ಮೊದಲು ಒಂದಿನ ಶೊಣ್ಣೆ 'ಅನ್ನ' ಎಂಬ ಶಬ್ದ ಕಿವಿಗೆ ಬೀಳುತ್ತಲೆ 'ಹಹ... ಹ್ಹ...' ಅಂತ ನಕ್ಕು ಬಿಟ್ಟಿದ್ದನು. ಹಿರೇಮಗ ಕೊಕ್ಕ ತನ್ನ ಟೆರಿಕಾಟು ಅಂಗಿಯೆ ಹತ್ತಾರು ಸಂದಿಗಳಲ್ಲಿ ನಿಗೂಢವಾಗಿ ಅಡಗಿರುವ ನುಸಿ ಕ್ರಿಮಿಗಳನ್ನಾಯುವುದರಲ್ಲಿ ಮಗ್ನನಾಗಿರುವುದು ಕಂಡಿತು. 'ತಿಂದ ಕೂಳು ಮೈಗೆ ಅತ್ತದಂತೆ ಒಂದೇ ಸಮ್ನೆ ಕಡೀತವೆ. ಆಳಾದೋವು' ಎಂದು ಅವನು ಪಂಚಮವೇದ ನುಡಿಯುತ್ತಿರುವುದು ಬೇರೆ ಕೇಳಿಸಿತು. ಮತ್ತಲ್ಲಿಯೇ ಅಪಾರೀ, ತಿಮ್ಮಿ, ಕುಲ್ಡಿ, ಊಟ ಮಾಡುವ ಆಟ ಆಡುತ್ತಿದ್ದುದು ಕಣ್ಣಿಗೆ ಬಿತ್ತು.

ಆ ಆಟದಲ್ಲಿ ತಿಮ್ಮಿ ನವಣಕ್ಕಿ ಬಾನದ ಪಾಲ್ಟು ಮಾಡಿದ್ದಳು. ಕುಲ್ದಿ ಘಮಾಡಿಸುವ ಸಾರಿನ ಪಾಲ್ಟು ಮಾಡಿದಳು. ಅವೆರಡನ್ನು ಹಿತವಾಗಿ ಕಲೆಸಿ ಉಂಡಂತೆ ಡೇಗಿದಂತೆ ನಟಿಸಿದ ಅಪಾರಿಯ ತಲೆ ಸವರಿ ಅಡುಗೆ ಮನೆಗೆ ಪ್ರವೇಶಿಸಿದ.[೩]

ಶೊಣ್ಣೆಯ ಇಡೀ ಕುಟುಂಬ ಬಡತನದ ಬೇಗೆಯಲ್ಲಿ ಬೇಯುತ್ತಿರುವಾಗ ಶೊಣ್ಣೆ ಆ ಮಕ್ಕಳ ಹಸಿವನ್ನು ತೀರಿಸಲಾರದ ಸ್ಥಿತಿಯಲ್ಲಿ ಇದ್ದಾಗ ಗೌಡರ ಮನೆಯಲ್ಲಿ ತಾನು ಪ್ರೀತಿಯಿಂದ ಉಳುಮೆ ಮಾಡಿದ ಎತ್ತು ಸತ್ತಿರುವ ವಿಚಾರವನ್ನು ಖಾತ್ರಿ ಮಾಡಿಕೊಳ್ಳಲು ಬರುವಾಗ ಮನಸ್ಸಿನಲ್ಲಿ ಬರುವ ಆಲೋಚನೆಗಳು, ಲೆಕ್ಕಾಚಾರಗಳು ಅವನು ಮತ್ತು ಗೌಡರ ಮನೆಯ ಭಾವನಾತ್ಮಕ ಸಂಬಂಧವನ್ನು ಪ್ರಕಟಿಸುತ್ತದೆ. ಗೌಡರ ಮನೆಯ ಮಾದಿಗನೆಂದ ಮೇಲೆ ಮುಗಿಯಿತು. ತಾನು ಅವರಿಗೆ ಜೇಷ್ಠ ಪುತ್ರನಿದ್ದಂತೆಯೇ ಲೆಕ್ಕ. ಅದೂ ಅಲ್ಲದೆ ಸತ್ತ ಎತ್ತು ಹೊತ್ತೊಯ್ದು ಕೊಯ್ಯುವುದು, ತೊಗಲು ಮಾರಿ ತನ್ನ ಸ್ಥಿತಿಗತಿ ಸುಧಾರಿಸಿಕೊಳ್ಳುವುದು ತನ್ನ ಹಕ್ಕು ಎಂದು ಬಗೆದನು.

'ಪುಣ್ಯಕ್ಕೆ ಎತ್ತು ಎಂದು ತಿಳಿದು ರೋಮಾಂಚನಗೊಂಡ ಶೊಣ್ಣೆ ಅದರೊಡನೆ ತಾನು ಕೆಲಸ ಮಾಡಿದ ಸಂದರ್ಭ, ಅದು ಜೀತದ ಸಂದರ್ಭದಲ್ಲಿ ಒಂದೇಟು ತಿನ್ನದೆ ಕೆಲಸ ನಿರ್ವಹಿಸಿದ ರೀತಿಯನ್ನು ನೆನಪು ಮಾಡಿಕೊಂಡು ಅನಂತರ ಎತ್ತಿನ ಮಾಂಸ, ತೊಗಲು ತನಗೇ ಸಿಕ್ಕೇಬಿಟ್ಟೀತೆಂಬ ನಿರೀಕ್ಷೆಯಿಂದ ಕೇಳಿದಾಗ, 'ನಿಂಗೆ ಕೊಡೋಕೆ ಸತ್ತಿರೋದು ಅಗಸರ ಕತ್ತಿ ಅಲ್ಲಲ್ಲೋ ಮನೆಯ ಎತ್ತು. ಅದ್ನ ನಿನ್ನ ಕೈಗೊಪ್ಪಿ ನಾನ್ಯಾವ ಕರ್ಮಕ್ಕೆ ಹೋಗ್ಲಿ' ಎಂಬ ಗೌಡರ ಮಾತನ್ನು ಕೇಳಿದಾಗ ಆಕಾಶವೇ ತೆಲಿಯಮ್ಯಾಲೆ ಬಿದ್ದಂತೆ ಒದ್ದಾಡುವ ಶೊಣ್ಣೆ, ಕೇರಿಯ ಜನರೆಲ್ಲರನ್ನು ಸಹಾಯಕ್ಕೆ ಕರೆಯುವ, ಸಾಮೂಹಿಕ ಹೋರಾಟಕ್ಕೆ ನೀಡುವ ಆಹ್ವಾನವಾಗಿದೆ. ಪರಂಪರಾಗತವಾಗಿ ನಡೆದುಕೊಂಡು ಬಂದ ಸಂಪ್ರದಾಯದಂತೆ ಮನೆಯಲ್ಲಿ ಬಹುಕಾಲ ದುಡಿದು ಸತ್ತ ಎತ್ತನ್ನು ಸಮಾಧಿ ಮಾಡುವ ಸಂಪ್ರದಾಯದಂತೆ ಗೌಡ ನಡೆದುಕೊಂಡಾಗ ಇಲ್ಲಿ ಶೊಣ್ಣೆಗೆ ತನ್ನ ಹಸಿವಿಗಿಂತ ಸಂಪ್ರದಾಯ ದೊಡ್ಡದಲ್ಲವೆಂದು ಭಾವಿಸಿ, ಸತ್ತ ದನ ತಿನ್ನುವುದು ತನ್ನ ಹಕ್ಕು ಎಂಬಂತೆ ರಾತ್ರೋರಾತ್ರಿ ಗೌಡನ ಹೊಲಕ್ಕೆ ಹೋಗಿ ದೇವರ ಹೆಣವನ್ನು ತೆಗೆದುಕೊಂಡು ಬಂದು ತಿನ್ನುತ್ತಾನೆ. ಒಪ್ಪಿತ ಮೌಲ್ಯಗಳನ್ನು ಶೊಣ್ಣೆ ಧಿಕ್ಕರಿಸುತ್ತಾನೆ. ತನ್ನ ಪವಿತ್ರ ಭಾವನೆಗೆ ಶೊಣ್ಣೆ ಅಪಚಾರವೆಸಗಿದ ಎಂದು ತಿಳಿದ ಗೌಡ ಆತನ ಮೇಲೆ ಪೊಲೀಸ್ ಬಲವನ್ನು ಪ್ರಯೋಗಿಸುತ್ತಾನೆ. ಶಿಕ್ಷಿಸಲು ಬಂದ ಪೊಲೀಸರನ್ನು ತನ್ನನ್ನು ಜೈಲಿಗೆ ಹಾಕಿ ಎಂದು ಆತನೇ ಒತ್ತಾಯಿಸುತ್ತಾನೆ.

'ನಿಮ್ಗೆ ಪುಣ್ಯ ಬರುತ್ತೈತೆ ದ್ಯಾವ್ರೆ ಆರ್ತಿಂಗಳ್ಯಾಕೆ, ವರ್ಷಹಾಕಿ' ಎಂದಾಗ ಪೊಲೀಸ್ ಇನ್ಸ್‌ಪೆಕ್ಟರ್ ಪೀಕಲಾಟಕ್ಕೆ ಸಿಲುಕುತ್ತಾನೆ. ಹಸಿವಿನಿಂದ ಕಂಗೆಟ್ಟ ಠೊಣ್ಣೆ ಕುಟುಂಬವೂ ಪೊಲೀಸಿನವರಿಗೆ ತಮ್ಮನ್ನು ಜೈಲಿಗೆ ಹಾಕಿ ಎಂದು ಒತ್ತಾಯಿಸುತ್ತದೆ. ಪೊಲೀಸರಿಗೆ ಪರಿಸ್ಥಿತಿಯನ್ನು ನಿಭಾಯಿಸಲು ಕೊನೆಗೆ ಸಾಧ್ಯವಾಗದೇ ಹೋಗುತ್ತದೆ. ಕತ್ತಲನು ಹಸಿವಿನ ವಿರುದ್ಧ ತ್ರಿಶೂಲ ಹಿಡಿದಿರುವ ತಂತ್ರಕ್ಕಿಂತ ಈ ಕಥೆಯ ಠೊಣ್ಣೆ ಪೊಲೀಸರಿಗೆ 'ನನ್ನ ಜೈಲಿಗೆ ಹಾಕಿ' ಎಂದು ಅವರ ಜೀಪಿನ ಹಿಂದೆ ಓಡುವ ಚಿತ್ರಣ ಓದುಗರಲ್ಲಿ ಹೆಚ್ಚು ಪ್ರಭಾವವನ್ನು ಬೀರುತ್ತದೆ. ಪೊಲೀಸ್ ವ್ಯವಸ್ಥೆಯನ್ನೇ ಗೊಂದಲದಲ್ಲಿ ಸಿಲುಕಿಸುವ ಈ ತಂತ್ರಗಾರಿಕೆ ಕಥೆಗೆ ಒಂದು ರೀತಿಯ ಗಟ್ಟಿತನವನ್ನು ತಂದುಕೊಟ್ಟಿದೆ.

**ರತ್ನ ಎಂಬ ಹುಡುಗಿಯೂ ಉಗಾದಿಯೆಂಬ ಆಟವೂ**

ಈ ಕಥೆ ಸನಾತನ ಸಂಪ್ರದಾಯವು ಕೂಡ ಹೇಗೆ ಬಡತನವನ್ನು ಶೋಷಿಸುತ್ತದೆ ಎಂದು ತಿಳಿಸುತ್ತದೆ. ಯುಗಾದಿ ಹಬ್ಬದ ದಿನ ಅತ್ಯಂತ ಬಡತನದಲ್ಲಿರುವ ತಿಪ್ಪವ್ವ ಹಿಂದಿನಿಂದಲೂ ನಡೆದುಕೊಂಡು ಬಂದಿರುವ ಸಂಪ್ರದಾಯವನ್ನು ಬಿಡಬಾರದು ಎಂದು ಹೇಗೋ ದಿನಸಿಯನ್ನು ಹೊಂದಿಸಿ ತನ್ನ ಮಕ್ಕಳು ಹಸಿವಿನಿಂದ ನರಳುತ್ತಿದ್ದರೂ ಸಂಪ್ರದಾಯದಂತೆ ಸ್ವಾಮಿಗಳನ್ನು ಮನೆಗೆ ಊಟಕ್ಕೆ ಆಹ್ವಾನಿಸಿ ಅವರಿಗೆ ಹೋಳಿಗೆಯನ್ನು ಮಾಡಿ ಬಡಿಸುತ್ತಾಳೆ. ಬಂದಂತಹ ಜಂಗಮ ಸ್ವಾಮಿ ಆಕೆ ಮಾಡಿದ ಎಲ್ಲಾ ಹೋಳಿಗೆಯನ್ನು ತಿಂದು ಹೋಗುತ್ತಾನೆ. ಹಸಿವಿನಿಂದ ಹಾಗೂ ರುಚಿಯಾದ ಹೋಳಿಗೆಯ ಕನಸು ಕಾಣುತ್ತಾ ಕುಳಿತಿರುವ ಮಕ್ಕಳಿಗೆ ಅವ್ವ ಮಾಡಿದ ಹೋಳಿಗೆ ಸಿಗುವುದಿಲ್ಲ. ಮಕ್ಕಳಿಗಿಂತ ಮೇಲುಜಾತಿಯ ಸ್ವಾಮಿಗೆ ಊಟ ಹಾಕುವ ಸಂಪ್ರದಾಯವೇ ದೊಡ್ಡದೆಂಬ ತಿಪ್ಪವ್ವನ ಅವೈಚಾರಿಕ ವಿಚಾರ ಮಕ್ಕಳ ಮನಸ್ಸಿನ ಮೇಲೆ ಗಾಢವಾದ ಪರಿಣಾಮ ಬೀರುತ್ತದೆ. ಅವು ಆ ದಿನದ ಘಟನೆಯನ್ನು ಉಗಾದಿ ಹಬ್ಬದ ಆಟವಾಡುವ ಮೂಲಕ ಪ್ರತಿಭಟಿಸುವುದು ಅದ್ಭುತವಾಗಿ ಮೂಡಿಬಂದಿದೆ. ರತ್ನಾ ಸ್ವಾಮಿ ಪಾಲ್ಟು ಮಾಡಿದ ತನ್ನ ತಮ್ಮನಿಗೆ ಹೊಡೆಯುತ್ತಾ 'ಸ್ವಾಮೇರು ಪುಗುಸಟ್ಟೆ ತಿನ್ನಕ್ಕೆ ನಾಚಿಕೆಯಾಗಲ್ವೆ' ಎಂದು ಹೇಳುತ್ತಾ ತನ್ನೆಲ್ಲಾ ಸಿಟ್ಟು ಆಕ್ರೋಶಗಳನ್ನು ತೀರಿಸಿಕೊಳ್ಳುವ ಮಕ್ಕಳ ಪ್ರತಿಭಟನೆ ಈ ಕಥೆಯಲ್ಲಿ ವ್ಯಂಗ್ಯವಾಗಿ ಮೂಡಿಬಂದಿದೆ.

**ಕಿವುಡ ನಾಯಿಯಾದ ಪ್ರಸಂಗ**

ಈ ಕಥೆಯಲ್ಲಿ ಕಿವುಡ ಅಸ್ಪೃಶ್ಯ, ಮೇಲಾಗಿ ಅವಿದ್ಯಾವಂತ. ಅವನ ಇಡೀ ಕುಟುಂಬ ಇವನ ಹೆಣ ಹೂಳುವ ವೃತ್ತಿಯನ್ನು ಅವಲಂಬಿಸಿದೆ. ಎರಡು ದಿನಗಳಿಂದ ಅನ್ನವಿಲ್ಲದೆ ಅವನ ಕುಟುಂಬ ಹಸಿವಿನಿಂದ ನರಳುತ್ತಿರುವಾಗ, "ಅಂಗಡಿ ಅಜ್ಜಪ್ಪನ ಹನ್ನೆಲ್ಡು ವರ್ಷದ ಈರಮ್ಮ ಎಂಬ ಹೆಸರಿನ ಹುಡುಗಿ ಸತ್ತಿರೋ ಸುದ್ದಿ ಕೇಳಿ ಮಾದಿಗರ ಕಿವುಡನಿಗೆ ಎಷ್ಟು

ಸಂತೋಷವಾಯಿತೆಂದರೆ ತನ್ನ ಐವತ್ತು ವರ್ಷದ ಆಯಾಮದಲ್ಲಿ ಅಷ್ಟೊಂದು ಸಂತೋಷದಿಂದ ಆತ ಎಂದೂ ಕಂಪಿಸಿರಲಿಲ್ಲ. ಶಿವಯ್ಯನ ಚಾದಂಗಡಿಯಲ್ಲಿ... ದಿನಕ್ಕೆರಡು ಬಾರಿ ಕಾಫಿ ಕುಡಿದು ಅವರಿವರು ಕೊಟ್ಟ ಚೂರುಪಾರು ಬೀಡಿ ಸೇದಿ ಎಲ್ಲು ದಿನದಿಂದ ಒಂದಗುಳು ಅನ್ನವಿಲ್ಲದೆ ಹಾಗೇ ಇದ್ದ. ಅವನ ಹಟ್ಟಿಯಲ್ಲಿಯೂ ಅಷ್ಟೆ. ಅವನು ಊಟಕ್ಕೆ ಏನೂ ತಂದು ಹಾಕಿರಲಿಲ್ಲ. ಅವನ ಹೆಂಡತಿ ಕುಚ್ಚಿ ಹಾಕಿರಲಿಲ್ಲ. ನಾಕು ಹುಡುಗರು ಅತ್ಲೂ ಅತ್ಲೂ ಸುಸ್ತಾಗಿ ಗುಡಿಸಲಲ್ಲಿ ಅಲ್ಲೊಂದು ಇಲ್ಲೊಂದು ಬಿದ್ದುಕೊಂಡಿದ್ದವು."[೪]

ಸಾವಿಗಿಂತಲೂ ಇಲ್ಲಿ ಹಸಿವು ಹೆಚ್ಚು ಭಯಾನಕವಾದ ಸ್ವರೂಪವನ್ನು ಪಡೆದುಕೊಳ್ಳುತ್ತದೆ. ಕಿವುಡ ಅಂಗಡಿ ಅಜ್ಜಪ್ಪನ ಮಗಳ ಶವಸಂಸ್ಕಾರ ಮಾಡಿ ದುಡ್ಡು ತೆಗೆದುಕೊಂಡು ಬರುತ್ತಾ ಮನೆಯಲ್ಲಿ ಮಕ್ಕಳಿಗೆ ಇವತ್ತು ಊಟ ಹಾಕಬಹುದು ಎಂಬ ಲೆಕ್ಕಾಚಾರದಲ್ಲಿ ಬರುತ್ತಿರುವಾಗ ಬರುವ ದಾರಿಯಲ್ಲಿ ಅವನನ್ನು ಅಡ್ಡಗಟ್ಟಿ ಹುಸೇನಸಾಬಿ ಹಳೇ ಸಾಲದ ಬಾಕಿ ವಸೂಲಿಗೆ ಅವನ ಕೈಯಲ್ಲಿರುವ ಹಣವನ್ನೆಲ್ಲಾ ಕಿತ್ತುಕೊಳ್ಳುತ್ತಾನೆ. ಆಗ ಕಿವುಡನಿಗೆ ಕಣ್ಣು ಕತ್ತಲಿಟ್ಟಂತೆ ಭಾಸವಾಗುತ್ತದೆ. ಮಕ್ಕಳ ಹಸಿದ ಮುಖ ಅವನ ಕಣ್ಣು ಮುಂದೆ ಸುಳಿದು ಅವನು ಬರೀಕೈಯಲ್ಲಿ ಮನೆಗೆ ಹೋಗಲಾರದೆ ಮರಳಿ ಸ್ಮಶಾನಕ್ಕೆ ಹೋಗಿ ನಾಯಿಯಂತೆ ತಾನೇ ಆ ಸಮಾಧಿಯನ್ನು ಕಿತ್ತು ಅಲ್ಲಿ ಹೆಣದ ಕಾಲಬುಡದಲ್ಲಿರುವ ಎರಡು ಟೆಂಗಿನ ಕಾಯಿಗಳನ್ನು ತೆಗೆದುಕೊಂಡು ಬರುವುದು ಹಸಿವಿನ ಘೋರ ಚಿತ್ರಣವನ್ನು ಇಲ್ಲಿ ಕುಂ.ವೀ. ಅವರು ವರ್ತಮಾನದ ನಿಷ್ಠುರ ಸತ್ಯದಂತೆ ಚಿತ್ರಿಸಿದ್ದಾರೆ.

೧೯೭೩-೭೪ರಲ್ಲಿ ಬೀಕರ ಬರಗಾಲವನ್ನು ಎದುರಿಸಿದ ಕರ್ನಾಟಕದ ಕೆಲವು ಹಳ್ಳಿಗಳ ಬದುಕು, ಅದರಲ್ಲಿಯೂ ದಲಿತರ ಕೆಳವರ್ಗದ ಜನರ ಜೀವನ, ತುತ್ತು ಅನ್ನಕ್ಕಾಗಿ ಅವರು ಕಷ್ಟಪಡುವ ಪಾಡು, ಇಡೀ ವ್ಯವಸ್ಥೆಯನ್ನು ಹಾಗೂ ಮಾನವ ಸಮಾಜವನ್ನು ಅಣಕಿಸುವಂತೆ, ತಲೆ ತಗ್ಗಿಸುವಂತೆ ಕುಂ.ವೀ. ಅವರ ಹಸಿವಿನ ಒಂದೊಂದು ಕಥೆಗಳು ಮನ ಕಲುಕುವಂತೆ ಚಿತ್ರಣಗೊಂಡಿವೆ. ಈ ಎಲ್ಲಾ ಕಥೆಗಳು ಬರಗಾಲದ ಜೀವನದ ಚಿತ್ರಣವನ್ನು ಕಟ್ಟಿಕೊಡುವುದರ ಜೊತೆಗೆ ೭೦ರ ದಶಕದಲ್ಲಿ ಕೆಳವರ್ಗದ ಜನರ ಬದುಕು ಎಷ್ಟು ಬರ್ಬರವಾಗಿತ್ತು, 'ಅನ್ನ' ಎಂಬ ಶಬ್ದ ಅವರಲ್ಲಿ ಹೇಗೆ ಚೇತನವನ್ನು ಉಂಟುಮಾಡುತ್ತಿತ್ತು, ಹಸಿವು ಮನುಷ್ಯನನ್ನು ಹೇಗೆ ಪ್ರತಿಭಟನೆಗೆ, ಬಂಡಾಯಕ್ಕೆ ಎಳೆದು ತಂದಿತು, ಎನ್ನುವುದು ಕುಂ.ವೀ. ಅವರ ಪ್ರಾರಂಭದ ಅನೇಕ ಕಥೆಗಳಲ್ಲಿ ಕಾಣಬಹುದಾಗಿದೆ.

**೪.೧.೨. ಆಂಧ್ರಪ್ರದೇಶದ ಜಮೀನ್ದಾರಿ ವ್ಯವಸ್ಥೆಯ ಕ್ರೌರ್ಯವನ್ನು ಕುರಿತ ಕಥೆಗಳು**

ಮೊಘಲರ ಪತನದ ನಂತರ ಅಸಫ್‌ಜಾಹಿ ವಂಶದವರು ಹೈದರಾಬಾದಿಗೆ ಬಂದು ಸ್ವತಂತ್ರ ರಾಜ್ಯ ಸ್ಥಾಪಿಸಿದರು. ಇವರಲ್ಲಿ ನಿಜಾಮ್ ಜಸ್ಮಾನೆ ಅಲಿ ಶ್ರೀಮಂತನಾಗಿದ್ದಂತೆ.

ಹೃದಯಹೀನನೂ ಆಗಿದ್ದ. ನಿಜಾಮರ ಅಧೀನದಲ್ಲಿದ್ದ ಸ್ಥಳಗಳಲ್ಲಿ ಪ್ರಾಥಮಿಕ ಶಾಲೆ ತೆರೆಯುವುದಕ್ಕೂ ನಿಜಾಮರ ಪರವಾನಿಗಿಯ ಅಗತ್ಯವಿತ್ತು. ಪ್ರಜೆಗಳ ಮೇಲೆ ಉರ್ದುಭಾಷೆಯನ್ನು ಬಲವಂತವಾಗಿ ಹೇರಲಾಗಿತ್ತು. ಅವನ ನಿರಂಕುಶ ಆಳ್ವಿಕೆಯನ್ನು ಪ್ರಶ್ನಿಸಿದವರನ್ನು ಕ್ರೂರವಾಗಿ ಶಿಕ್ಷಿಸಲಾಗುತಿತ್ತು. ಇವರ ಆಡಳಿತದ ಅವಧಿಯಲ್ಲಿ ಸಾಕಷ್ಟು ಭೂಮಿಯ ಒಡೆತನವನ್ನು ಗಿಟ್ಟಿಸಿಕೊಂಡು ಬೆಳೆದವರೆಂದರೆ ಬಂಜಾರುದಾರರು, ಮುಕ್ತೆದಾರರು ಮತ್ತು ದೇಶಮುಖರು. ಇವರು ಯಾವುದೇ ನಿರಂಕುಶ ದೊರೆಗಳಿಗಿಂತ ಕಡಿಮೆ ಇರಲಿಲ್ಲ. ಇವರ ಅಧೀನದಲ್ಲಿದ್ದ ಹಳ್ಳಿಗಳಲ್ಲಿ ದುಡಿಯುವ ರೈತರಿಗೆ ಗೇಣಿಯ ಹಕ್ಕುಗಳಿರಲಿಲ್ಲ. ಸಣ್ಣ ಹಿಡುವಳಿದಾರರ ಭೂಮಿಯನ್ನು ದೌರ್ಜನ್ಯದಿಂದ ವಶಪಡಿಸಿಕೊಳ್ಳುತ್ತಿದ್ದರು. ತಮ್ಮ ವಿರುದ್ಧ ರೈತರು ಧ್ವನಿ ಎತ್ತದಂತೆ ಮಾಡಲು ಈ ಜಮೀನ್ದಾರರು ಜನರನ್ನು ಎಲ್ಲಾ ಸಾಮಾನ್ಯ ಸವಲತ್ತುಗಳಿಂದ ದೂರ ಇಟ್ಟಿರುತ್ತಿದ್ದರು. ಹಳ್ಳಿಯ ಕಸುಬುದಾರರಿಂದ ಬಲವಂತವಾಗಿ ತಮ್ಮ ಚಾಕರಿಯನ್ನು ಮಾಡಿಸಿಕೊಳ್ಳುತ್ತಿದ್ದರು. ಹೀಗೆ ತೆಲಂಗಾಣ ದೇಶದ ಜನಸಾಮಾನ್ಯರ ಬದುಕು ಶೋಚನೀಯ ಸ್ಥಿತಿಯಲ್ಲಿತ್ತು.

'ನಕ್ಸಲ್ಬರಿ' ಪಶ್ಚಿಮ ಬಂಗಾಳದ ಡಾರ್ಜಲಿಂಗ್ ಜಿಲ್ಲೆಯ ಸಿಲಿಗುರಿ ಉಪವಿಭಾಗಕ್ಕೆ ಸೇರಿದ ಒಂದು ಭಾಗ. ಹಿಮಾಲಯ ಪರ್ವತಗಳ ತಪ್ಪಲಿನಲ್ಲಿ ಇದು ನೆಲೆಗೊಂಡಿದೆ. ಈ ಪ್ರದೇಶದ ಬೆಟ್ಟಗುಡ್ಡಗಳು ದಟ್ಟ ಅರಣ್ಯಗಳಿಂದ ಆವೃತವಾಗಿದೆ. ಇಲ್ಲಿನ ಜನತೆ ಮುಖ್ಯವಾಗಿ ಸಂತಾಲರು, ಉರಾವ್ ಮತ್ತು ರಾಜವಂಶಿ ಬುಡಕಟ್ಟಿಗೆ ಸೇರಿದವರಾಗಿದ್ದಾರೆ. 'ಜೋಡಿದಾರರ' 'ಅಧಿಹಾರ್' ವ್ಯವಸ್ಥೆಯಲ್ಲಿ ಅಂದರೆ ಬಹುತೇಕ ಗುತ್ತಿಗೆ ಆಧಾರದ ಮೇಲೆ ಭೂಮಿಯನ್ನು ಉಳುತ್ತಾ ತೀವ್ರ ರೀತಿ ಶೋಷಣೆಗೆ ಒಳಗಾಗಿದ್ದರೂ ಅಲ್ಲಿನ ಭೂಮಾಲೀಕರ ಹಾಗೂ ಟೀ ತೋಟಗಳ ಮಾಲೀಕರ ವಿರುದ್ಧ ಸಶಸ್ತ್ರದಂಗೆಯನ್ನು ಪ್ರಾರಂಭಿಸಿದರು. ಒಂದು ಪ್ರಾಂತ್ಯದಿಂದ ಆರಂಭವಾದ ಈ ಹೋರಾಟ ಕ್ರಮೇಣ ರಾಷ್ಟ್ರವ್ಯಾಪಿಯಾಗಿ ಹರಡಿತು.

ಆಂಧ್ರದ ಶ್ರೀಕಾಕುಳಂ ಕೂಡ ಬುಡಕಟ್ಟಿನ ಪ್ರದೇಶ. ಸವಾರ ಮತ್ತು ಜಟಾಪು ಬುಡಕಟ್ಟಿನವರು ಇಲ್ಲಿ ವಾಸಿಸುತ್ತಾರೆ. ಗುಡ್ಡಗಾಡುಗಳ ಈ ಪ್ರದೇಶದಲ್ಲಿ ಪ್ರತಿ ಮೂರು ವರ್ಷಕ್ಕೊಮ್ಮೆ ಭೂಮಿ ಬದಲಾಯಿಸುತ್ತಾ ಹೋಗುವ ಪೋಡು ಸಾಗುವಳಿ ವಿಧಾನ ಹಾಗೂ ಅರಣ್ಯ ಉತ್ಪನ್ನಗಳ ಸಂಗ್ರಹಣೆಯ ಮೇಲೆ ಇವರ ಜೀವನಕ್ರಮ ಅವಲಂಬಿತವಾಗಿದೆ. ಬಹುತೇಕ ಬುಡಕಟ್ಟಿನವರು ಲೇವಾದೇವಿಗಾರರಿಗೆ ಸಾಲಗಾರರಾಗಿದ್ದು ತಮ್ಮ ತುಂಡುಭೂಮಿಯನ್ನು ಅನಿವಾರ್ಯವಾಗಿ ಬಿಟ್ಟುಕೊಡಬೇಕಾದ ಒತ್ತಡಕ್ಕೆ ಒಳಗಾದರು. ಜೊತೆಗೆ ಮಾನಸಿಕ ಹಾಗೂ ದೈಹಿಕ ಹಿಂಸೆಗೂ ಗುರಿಯಾಗಿದ್ದರು.

ಲಖಿಂಪುರ ಖೇರಿಯ ರೈತರು ಸಹ ಬುಡಕಟ್ಟಿನವರು. ಬೆಟ್ಟದಡಿಯ ತೆರಾಯಿ ಪ್ರದೇಶ ದಲ್ಲಿರುವ ಇದು ಸಿಲಿಗುರಿಯ ಕಾಡಿಗಿಂತ ಹೆಚ್ಚು ನಿಬಿಡವಾದ ಕಾಡನ್ನು ಹೊಂದಿದೆ. ರೈತರು ಬಹುತೇಕ ವಲಸೆ ಬಂದವರಾಗಿದ್ದು ಥಾರುಸ್, ರಾಸಿಖ್ ಮತ್ತಿತರ ರೈತರು ಕಾಡಿನ ಚಿಕ್ಕ ಪ್ರದೇಶವನ್ನು ಸವರಿ ತುಂಡುಭೂಮಿಯನ್ನು ಮಾಡಿಕೊಂಡು ಸರ್ಕಾರದ ವಿವಿಧ ಯೋಜನೆಗಳ ಅಡಿಯಲ್ಲಿ ನೆಲೆಗೊಂಡವರಾಗಿದ್ದಾರೆ. ಆದರೆ ೧೯೬೭ರ ಹೊತ್ತಿಗೆ ರಾಜಕೀಯ ಸಂಪರ್ಕವುಳ್ಳ ಭೂಮಾಲೀಕರಿಂದ ಹಲವರು ಮಂದಿ ಕಾನೂನುಬಾಹಿರವಾಗಿ ಆಸ್ತಿಯನ್ನು ಕಳೆದುಕೊಂಡರು. ವಿವರಗಳು ತೆಲುಗು ಸಾಹಿತಿಯಾದ 'ಬದ್ನಂ' ಅವರ ಕಥೆ ಮತ್ತು ಕಾದಂಬರಿಗಳಲ್ಲಿ ಕಾಣಬಹುದು.

೧೯೬೮ರ ಹೊತ್ತಿಗೆ ಉತ್ತರ ಬಿಹಾರದಲ್ಲಿನ ಮುಜಾಫರ್‌ಪುರ ಜಿಲ್ಲೆಯ ಮುಶಾಹರಿಗೂ ನಕ್ಸಲೀಯರಿಂದ 'ಹವಾ' ಪಸರಿಸಿತು. ಆರ್ಥಿಕ ಸಮಸ್ಯೆಗಳ ಮೇಲಿನ ಚಳುವಳಿಯು ತತ್‌ಕ್ಷಣವೇ ಸಶಸ್ತ್ರಬಂಡಾಯವಾಗಿ ಮಾರ್ಪಟ್ಟಿತು. ಕ್ರೂರಿಯಾದ ಭೂಮಾಲೀಕ ಬೆಬ್ಲಿಸಿಂಗ್‌ನ ಗೂಂಡಾಗಳು ಗಂಗಾಪುರ ಎಂಬಲ್ಲಿ ಗೂಂಡಾಗಿರಿ ನಡೆಸಿದರು. ಗಂಗಾಪುರದ ಘಟನೆ ಕಿಸಾನ್ ಸಂಗ್ರಾಮ ಸಮಿತಿಯನ್ನು ಮುನ್ನಡೆಸುತ್ತಿದ್ದ ಕ್ರಾಂತಿಕಾರಿಗಳಿಗೆ ಸ್ಫೂರ್ತಿ ನೀಡಿತು. ರೈತರನ್ನು ಸಂಘಟಿಸಲು ಮತ್ತು ಚಳುವಳಿಯ ಉಗ್ರತೆಯನ್ನು ಹೆಚ್ಚಿಸಲು ಅವರು ಭೂಗತರಾದರು. ೧೯೬೮ರ ಆಗಸ್ಟ್ ೧೫ ರಂದು ಕ್ರಾಂತಿಕಾರಿಗಳ ಸಂಯೋಜನಾ ಸಮಿತಿಯ ಕರೆಯು ರೈತರ ಸಮೂಹವನ್ನು ಪ್ರೋತ್ಸಾಹಿಸಿತು. ಫಸಲನ್ನು ವಶಪಡಿಸಿಕೊಳ್ಳುತ್ತಿದ್ದಂತೆಯೇ ಅವರು ತಮ್ಮ ಪಾರಂಪರಿಕ ಸಿದ್ಧತೆ ಮಾಡಿಕೊಂಡರು. ಘರ್ಷಣೆಗಳು ಆರಂಭವಾದವು. ಆಗಸ್ಟ್ ೨೫ರಂದು ಹರಕೇಶ್ ಎಂಬ ಹಳ್ಳಿಯಲ್ಲಿ ಸಾವಿರಾರು ರೈತರು ಪೊಲೀಸರೊಂದಿಗೆ ಭೀಕರ ಕಾಳಗ ನಡೆಸಿದರು ಹಾಗೂ ತಮ್ಮ ಕೆಲವು ಬಂಧಿತ ಸಂಗಾತಿಗಳನ್ನು ಬಿಡುಗಡೆ ಮಾಡಿಕೊಳ್ಳುವಲ್ಲಿ ಯಶಸ್ವಿಯಾದರು. ಹೀಗೆ ೧೯೬೮ರ ಅಂತ್ಯದ ವೇಳೆಗೆ ನಕ್ಸಲ್ಬರಿಯ ಕಿಡಿಗಳು ನಾಲ್ಕು ದಿಕ್ಕಿಗೂ ಹರಡಿದವು. ಉನ್ನತ ಹಂತಕ್ಕೆ ತಲುಪಿದ ಶ್ರೀಕಾಕುಳಂ ಮುಶಾಹರಿ ಮತ್ತು ಲಖಿಂಪುರ, ಖೇರಿಗಳಲ್ಲಿ ದೇಶದ ಹಲವಾರು ಭಾಗಗಳಲ್ಲಿ ಹಲವು ಗುಂಪುಗಳು ರೈತರ ಬಂಡಾಯಗಳನ್ನು ಸಂಘಟಿಸುವ ಪ್ರಯತ್ನ ನಡೆಸಿದವು. ಹೀಗೆ ಹಲವಾರು ವರ್ಷಗಳ ಸಾಮಾಜಿಕ, ಆರ್ಥಿಕ ಶೋಷಣೆಯ ವಿರುದ್ಧ ಬಂಡೇಳಲು ನಕ್ಸಲ್ಬರಿ ಅವರಿಗೆ ಬಂಡಾಯದ ಸೂಚಕವಾಯಿತು. ಪೊಲೀಸರ ಮತ್ತು ಭೂಮಾಲೀಕ ಗೂಂಡಾಗಳ ಸಶಸ್ತ್ರಸಜ್ಜಿತ ದಾಳಿಯನ್ನು ದಿಟ್ಟವಾಗಿ ಎದುರಿಸಲು ಮತ್ತು ಅವರಿಗೆ ಸವಾಲೆಸೆಯಲು ಮಾರ್ಗ ಮಾಡಿಕೊಟ್ಟಿತು. ಹೀಗೆ ದೇಶದ ಇತರೆಡೆಗಳಲ್ಲಿ ನಡೆದ ರೈತರ ಹೋರಾಟಗಳು ಆಂಧ್ರಪ್ರದೇಶದಲ್ಲಿ ಸಂಚಲನ ಉಂಟುಮಾಡಿತು. ಮುಂದಿನ ಅಧ್ಯಾಯಗಳಲ್ಲಿ ರೈತರು ಭೂಮಿಗಾಗಿ ನಡೆಸುವ ಹೋರಾಟದ ಚಿತ್ರಣವನ್ನು ಸಂಬಂಧಪಟ್ಟ ಕಥೆಗಳಲ್ಲಿ ಈ ಹೋರಾಟಗಳನ್ನು ಚರ್ಚಿಸಲಾಗಿದೆ.

ಆಂಧ್ರದ ತೆಲಂಗಾಣ ಪ್ರದೇಶದಲ್ಲಿ ಜಮೀನ್ದಾರಿ ದುರಾಡಳಿತವು ತೀವ್ರಸ್ವರೂಪದಲ್ಲಿತ್ತು. ಶೋಷಣೆಗೆ ಪ್ರತಿಯಾಗಿ ಜನತೆ ಪ್ರತಿಭಟನೆ ವ್ಯಕ್ತಪಡಿಸತೊಡಗಿದರು. ಸ್ವಾತಂತ್ರ್ಯಪೂರ್ವದಲ್ಲಿಯೇ ಆಂಧ್ರಮಹಾಸಭಾದ ಮೂಲಕ ಲೇಖಕರು. ಬುದ್ಧಿಜೀವಿಗಳು ಮುಂತಾದವರು ಸೇರಿ 'ಸಂಘ', ಸಂಸ್ಥೆಯನ್ನು ರಚಿಸಿಕೊಂಡು ಪ್ರಚಲಿತ ಅನಿಷ್ಟಗಳಿಗೆ ಸೂಕ್ತ ಪ್ರತಿಕ್ರಿಯೆ ತೋರಿಸಿದರು. ಆರ್ಥಿಕ ಸಾಮಾಜಿಕ ಸಮಸ್ಯೆಗಳತ್ತ ದಿಟ್ಟ ಹೆಜ್ಜ ಇರಿಸಿ, ಬಂಧನ ಸಪ್ತಾಹ, ಬಿಟ್ಟಿಚಾಕರಿ ಸಪ್ತಾಹ ಮತ್ತು ಹತ್ತಾರು ಪ್ರತಿಭಟನಾ ಸಪ್ತಾಹಗಳನ್ನು ಹಮ್ಮಿಕೊಂಡರು. ಜನರ ಬದುಕು ಸುಧಾರಿಸಿದ ನಂತರವೇ ಸಾಹಿತ್ಯದ ಬಗ್ಗೆ ಯೋಚಿಸುವುದೆಂದು ಸಭೆ ನಿರ್ಧರಿಸಿತು. ಈ ಸಂಘಟನೆಯಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದ ಬದ್ದಂ ಎಲ್ಲಾರೆಡ್ಡಿ, ಕೋಂದಡರಾಮಿರೆಡ್ಡಿ ಮುಂತಾದ ಅನೇಕರು, ಮುಂದೆ ಕಮ್ಯುನಿಸ್ಟ್ ಸಿದ್ಧಾಂತದಿಂದ ಸಾಕಷ್ಟು ಪ್ರಭಾವಿತರಾದರೂ ಜುಲೈ ೪. ೧೯೪೭ರಂದು ತೆಲಂಗಾಣ ಹೋರಾಟಕ್ಕೆ ಚಾಲನೆ ಸಿಕ್ಕಿತು. ಅದು ಕೇವಲ ಹೋರಾಟಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಜೊತೆಯಲ್ಲಿ ಸಾಹಿತ್ಯಕ್ಕೂ ಅನ್ವಯಿಸುವಂತೆ ಐದು ವರ್ಷಗಳ ಕಾಲ ಸಾಹಿತ್ಯಸೃಷ್ಟಿಯಾಗಿ ಜನತೆಯಲ್ಲಿ ಪ್ರತಿಕ್ರಿಯಾತ್ಮಕ ಮನೋಭಾವವನ್ನು ಬೆಳೆಸಿತು. ಯಾದಗಿರಿ, ತಿರುನಗರಿ, ರಾಮಾಂಜನೇಯ, ನಾಜಕ್ ಇವರೇ ಮುಂತಾದ ನೂರಾರು ಮಂದಿ ಪ್ರಜಾಕವಿಗಳು ತೆಲಂಗಾಣ ಪ್ರಾಂತ್ಯದ ರೈತರ ಹೋರಾಟವನ್ನು ಸದೃಢ ಗೊಳಿಸಲೆಂದೇ ಸಾಹಿತ್ಯಸೃಷ್ಟಿಗೆ ತೊಡಗಿದರು.

ಈ ಜಮೀನ್ದಾರಿ ವ್ಯವಸ್ಥೆ ಎಷ್ಟು ಕರಾಳವಾಗಿತ್ತೆಂಬುದಕ್ಕೆ ಇಲ್ಲಿನ 'ವೆಟ್ಟಿಚಾಕರಿ'ಯನ್ನು ಅವಲೋಕಿಸಬೇಕು. ವೆಟ್ಟಿ ಎಂದರೆ 'ಬಿಟ್ಟಿ' ಎಂದರ್ಥ. ಹೀಗೆ ಬಿಟ್ಟಿಚಾಕರಿಗೆ ಬಂದವರನ್ನು ಆ ಜಮೀನ್ದಾರ, ಅಮಲ್ದಾರ, ತಹಶೀಲ್ದಾರ, ಶ್ಯಾನಭೋಗ ಹೀಗೆ ಯಾರಲ್ಲಿಗೆ ಬೇಕಾದರೂ ಚಾಕರಿ ಮಾಡಲು ಕಳುಹಿಸುತ್ತಿದ್ದರು. ಪ್ರತಿ ಗ್ರಾಮದ ಕಸುಬುದಾರರು ಅಂದರೆ ಬಡಿಗ, ಕುಂಬಾರ, ಚಮ್ಮಾರ ಮುಂತಾದವರು ಜಮೀನ್ದಾರರಿಗೆ ಅಗತ್ಯವಾದ ವಸ್ತುಗಳನ್ನು ಪ್ರತಿಫಲಾಪೇಕ್ಷೆ ಇಲ್ಲದೆ ಪೂರೈಸಬೇಕು. ಬೆಸ್ತರು ಪಲ್ಲಕ್ಕಿ ಹೊರಬೇಕು, ಕ್ಷೌರಿಕರು ದಿನಂಪ್ರತಿ ಜಮೀನ್ದಾರರ ಮುಖಕ್ಷೌರ ಮಾಡುತ್ತಿರಬೇಕು. ಅಗಸರು ಜಮೀನ್ದಾರರ ಮನೆಯ ಕುಟುಂಬದವರೆಲ್ಲರ ಬಟ್ಟೆ ತೊಳೆದುಕೊಡಬೇಕು. ಈಡಿಗರು ಜಮೀನ್ದಾರರಿಗೆ ಕುಡಿಯಲು ಹೆಂಡವನ್ನು ಉಚಿತವಾಗಿ ಸಾಗಿಸಬೇಕು. ಅಷ್ಟೇ ಅಲ್ಲ, ಜಮೀನ್ದಾರರ ಹೊಲಗಳಲ್ಲಿ ರೈತರು ಪುಕ್ಕಟೆ ಉಳುಮೆ ಮಾಡಬೇಕು. ಹಳ್ಳಿಯ ಹದಿಹರೆಯದ ಹೆಣ್ಣುಗಳನ್ನು ಜಮೀನ್ದಾರರು ತನ್ನ ಬೀಗರು ಬಿಜ್ಜರಿಗೆ, ಅಧಿಕಾರಿಗಳಿಗೆ ಉಡುಗೊರೆಯಾಗಿ ನೀಡುತ್ತಿದ್ದುದನ್ನು ಯಾರೂ ಪ್ರಶ್ನಿಸುವಂತಿರಲಿಲ್ಲ. ನಲ್ಗೊಂಡದ ರಾಮಚಂದ್ರ ರೆಡ್ಡಿ ಪಲ್ಲಕ್ಕಿಯಲ್ಲಿ ತನ್ನ ಸುಪರ್ದಿನ ನಲವತ್ತು ಹಳ್ಳಿಗಳನ್ನು ಸುತ್ತುತ್ತಿದ್ದ. ತನಗೆ ಪ್ರಿಯವೆನಿಸಿದ

ವಸ್ತುಗಳನ್ನು, ಸ್ಥಿರಾಸ್ತಿಗಳನ್ನು, ಜೀವಿಗಳನ್ನು ನಿರ್ಭಯವಾಗಿ ಕಿತ್ತುಕೊಳ್ಳುತ್ತಿದ್ದನೆಂಬುದು ಭಯಾನಕ ಸಂಗತಿ. ಈ ಎಲ್ಲಾ ಘಟನೆಗಳು ಆಂಧ್ರದ ತೆಲುಗು ವಿಪ್ಲವ ಕವಿಗಳ ಮೇಲೆ ಹಾಗೂ ಆಂಧ್ರದ ಗಡಿ ಭಾಗದ ಶಾಲೆಗಳಲ್ಲಿ ವೃತ್ತಿಯನ್ನು ಕೈಗೊಂಡ ಕುಂ.ವೀ. ಅವರ ಸಾಹಿತ್ಯದ ಮೇಲೆ ಗಾಢ ಪ್ರಭಾವವನ್ನು ಬೀರಿದವು.

### ಹತ್ಯೆ

'ಹತ್ಯೆ' ಕಥೆಯಲ್ಲಿ ಜಮೀನ್ದಾರಿ ವ್ಯವಸ್ಥೆ ಎಷ್ಟು ಕ್ರೂರಮುಖವನ್ನು ಹೊಂದಿತ್ತು ಎಂಬುದನ್ನು ಬಣ್ಣಿಸುತ್ತದೆ. ಒಳ್ಳೆಯ ಜಮೀನ್ದಾರರು ಬದುಕಲು ಅರ್ಹರಲ್ಲ ಎಂದು ಅವರ ಹತ್ಯೆಗೆ ಸಂಗಾಲದ ವೆಂಕಪ್ಪನಾಯ್ಡು ಸಂಚು ರೂಪಿಸಿ ಬಲರಾಮ ಅನ್ನುವ ವ್ಯಕ್ತಿಯನ್ನು ಕೊಲೆ ಮಾಡಲು ಕಳಿಸುತ್ತಾನೆ. ಎಲ್ಲಾ ಮಗ್ಗುಲುಗಳಿಂದ ನೋಡಿದರೂ ಅವಧೂತನೋರ್ವ ಆ ಯುವಕನ ವೇಷದಲ್ಲಿರುವಂತೆ ಕಾಣುತ್ತಾನೆ. ಸಭ್ಯಸ್ಥನಂತೆ ಗೋಚರಿಸುವ ಅವನಿಗೆ ಖಚಿತ ನೆಲೆ ಎಂಬುದಿಲ್ಲ. ಅವನು ಎಲ್ಲಿರುತ್ತಾನೋ ಅದೇ ಅವನ ಊರು. ಅವನ ಹೆಸರು ಸರಕಾರಿ ದಫ್ತರುಗಳಲ್ಲಾಗಲೀ, ಜನಗಣತಿ, ಮತದಾರರ ಪಟ್ಟಿಯಲ್ಲಾಗಲಿ ಇಲ್ಲ ಅಂದ ಮಾತ್ರಕ್ಕೆ ಅವನು ಅನಾಮಧೇಯನಲ್ಲ. ಅವನಿಗೆ ಬಾಲ್ಯದ ನೆನಪುಗಳಿಲ್ಲ. ಎಲ್ಲೋ ಹುಟ್ಟಿ ಎಲ್ಲೋ ಬೆಳೆದ ದಿಕ್ಕುದೆಸೆ ಇಲ್ಲದೆ ತಿರುಗುತ್ತಿದ್ದ ಅವನನ್ನು ತಮ್ಮ ಭಾರಿ ಮನೆಗೆ ಕರೆತಂದು ಕೂಳು, ನೀರು ಹಾಕಿ ಬಟ್ಟೆಬರೆ ಕೊಡಿಸಿ 'ಬಲರಾಮ' ಎಂದು ನಾಮಕರಣ ಮಾಡಿದ ವ್ಯಕ್ತಿ ಸಂಗಾಲ ವೆಂಕಪ್ಪನಾಯ್ಡು ಪ್ರೀತಿ ಮಮಕಾರಗಳಿಂದ ದೂರವಿರಿಸಿ ಅವನನ್ನು ಆಯುಧವನ್ನಾಗಿ ಪರಿವರ್ತಿಸಿ ಮನುಷ್ಯ ಸಂಬಂಧಗಳಿಂದ ದೂರವಿಟ್ಟು ಅವನ ಪಂಚೇಂದ್ರಿಯಗಳ ಮೇಲೆ ಹಕ್ಕು ಸ್ಥಾಪಿಸಿದ್ದ. ಹತ್ಯೆಯ ಹಲವು ವಿಧಾನಗಳನ್ನು ಅವನಿಗೆ ನುರಿತ ಶಿಕ್ಷಕನಂತೆ ಬೋಧಿಸಿದ. ಅವನ ಮೂಲಕ ತನಗಾಗದವರನ್ನು ಕೊಲೆ ಮಾಡಿಸಿದ. ಅದಕ್ಕೆ ಪ್ರತಿಯಾಗಿ ಸಾವಿರಗಟ್ಟಲೆ ಸಂಭಾವನೆ ನೀಡಿದ. ಇದರಿಂದ ಬಲರಾಮ ತನ್ನ ತಲೆಯಲ್ಲಿಟ್ಟು ಕೊಂಡಿರುವುದು ನಾಯ್ಡು ಎಂಬ ವ್ಯಕ್ತಿಯನ್ನು ಮಾತ್ರ. ಅಲ್ಲಿ ಉಳಿದ ಯಾವ ಸಂಬಂಧಗಳಿಲ್ಲ. ಅವನು ಎಲ್ಲೇ ಮಲಗಿದರೂ ಎಚ್ಚರವಾಗುವುದು ಸಂಗಾಲದಲ್ಲಿ ಮಾತ್ರ.

'ಹತ್ಯೆ' ಕಥೆಯನ್ನು ಸಾರಾಂಶರೂಪದಲ್ಲಿ ಹೇಳಿದರೆ ಅದು ನವೋದಯ ಕಾಲದ ಅತಿ ಸಾಮಾನ್ಯವಾದ ದುಷ್ಟನೊಬ್ಬನ ಮನಃಪರಿವರ್ತನೆಯ ಕಥೆ ಅನ್ನಿಸಿಬಿಡಬಹುದು. ಆದರೆ ಅದೊಂದು ಅಸಾಮಾನ್ಯ ಕಥೆಯಾಗಿ ಇಲ್ಲಿ ರೂಪ ತಳೆದಿದೆ. ಈ ಅಸಾಮಾನ್ಯತೆಗೆ ಕಾರಣವೇನು? ಬಹಳ ಸುಲಭವಾಗಿ ಭಾವುಕವಾಗಿ ಬಿಡಬಹುದಾದ ವಸ್ತುವನ್ನು ಭಾಷೆಯ ಸೂಕ್ಷ್ಮವು, ಹರಿತವೂ ಆದ ಬಳಕೆಯಿಂದ ಕ್ರೌರ್ಯ ಮತ್ತು ಮಾನವೀಯತೆಯ ಇನ್ನೊಂದು ಹೆಸರಾದ

ಪ್ರೀತಿ ಭಾವಗಳ ವಿವಿಧ ಮಗ್ಗುಲುಗಳ ಶೋಧವಾಗುವಂತೆ ಕಟ್ಟಿರುವುದು ಕಥೆಯ ಇನ್ನೊಂದು ಅತ್ಯುತ್ತಮ ಅಂಶವಾಗಿದೆ. ಈ ಕಥೆಯಲ್ಲಿ ಕವಿತೆಯಲ್ಲಿ ಕಾಣುವ ಭಾಷೆಯ ರೂಪಕಗುಣ ಮತ್ತು ಅದರಿಂದ ಅನಾವರಣಗೊಳ್ಳುವ ಪರಸ್ಪರ ವಿರುದ್ಧಾರ್ಥಗಳ ಮಂಡನೆ ಕಂಡುಬರುತ್ತದೆ. ಕಥೆಯಲ್ಲಿ ಹೆಸರಾದ 'ಹತ್ಯೆ' ಎಂಬುದು ಬಲರಾಮನ ಕಸುಬು ಮತ್ತು ಬಲರಾಮನೊಳಗಿರುವ ಕ್ರೌರ್ಯದ ಹತ್ಯೆ ಎರಡನ್ನೂ ಸೂಚಿಸುತ್ತದೆ. ಕೆಂಪುರಟ್ಟಿನ ಪುಸ್ತಕ ಓದುತ್ತಾ ಕುಳಿತಿರಬಹುದಾದ ದುಡಿಯುವುದರ, ಶೋಷಿತರ ಆಶೋತ್ತರವಾಗಿರುವ ಭಾಷೆಗೆ ಆಯುಧದ ಸ್ವರೂಪ ಕೊಡುತ್ತಿರಬಹುದಾದ ಚಂದ್ರಣ್ಣನ ಮನೆಯ ಹೆಣ್ಣುಗಳು ಜಮೀನ್ದಾರ ನಾಯ್ಡು ತಾನು ಮಾಡಬೇಕಾದ ಹತ್ಯೆಗಳ ಆಯುಧವನ್ನಾಗಿ ರೂಪಿಸಿರುವ ಬಲರಾಮನ ವ್ಯಕ್ತಿತ್ವವೇ ಆಗಿಬಿಟ್ಟಿರುವ ಕ್ರೌರ್ಯವನ್ನು ಹತ್ಯೆಮಾಡಿ ಮಾನವೀಯತೆಯ ಹುಟ್ಟಿಗೆ ಕಾರಣವಾದದ್ದನ್ನು ಸೂಚಿಸುತ್ತದೆ. ಹತ್ಯೆಯ ಆಯುಧವೇ ಆಗಿರುವ ಬಲರಾಮನು ಕೂಸಿನ ಹೊಕ್ಕುಳು ಬಳ್ಳಿ ಕತ್ತರಿಸುವ ಮಾನವೀಯತೆಯ ಹುಟ್ಟಿನ ಕಾರಣಗಳಾಗುವ ಅಚ್ಚರಿಯನ್ನು ಸೂಚಿಸುತ್ತದಲ್ಲವೇ ಅನ್ನಿಸುತ್ತದೆ. ಕಥೆಯ ಮಧ್ಯೆ ಬರುವ 'ಹಣತೆಯೊಂದು ಇಡೀ ಸೂರ್ಯನನ್ನು ನುಂಗುತ್ತಿರುವಂತೆ ಭಾಸವಾಯಿತು' ಎಂಬ ವಾಕ್ಯ ಇಡೀ ಕಥೆಯಲ್ಲಿ ಕತ್ತಲೆ ಮತ್ತು ಬೆಳಕಿನ ಕ್ರೌರ್ಯ ಮತ್ತು ಪ್ರೀತಿಗಳ ರೂಪಕ ಮಾಲೆಯತ್ತ ನಮ್ಮ ಗಮನ ಸೆಳೆಯುತ್ತದೆ.

ಕಥೆಯ ಕೊನೆಗೆ ಕಾಣಿಸಿಕೊಳ್ಳುವ ಹತ್ಯೆಯಾಗಬೇಕಿದ್ದ ಮನುಷ್ಯ ಚಂದ್ರಣ್ಣ. ಅವನ ಮನೆತನದ ಹೆಸರು ಕಂದೀಲು. ಅವನ ಮನೆ ಕಪ್ಪು ಕಥೆಯ ಮುಖ್ಯಭಾಗ ನಡೆಯುವುದು ಕತ್ತಲಲ್ಲಿ. ವಿಪರೀತದ ಬೆಳಕು ಅನ್ನುವ ಪಾಲು ನೆನಪಾಗುತ್ತದೆ. ಕ್ರೌರ್ಯ, ಹಿಂಸೆ, ಕೊಲೆ, ಹತ್ಯೆ ಇತ್ಯಾದಿಗಳದ್ದೆಲ್ಲ ಅಪರಿಮಿತ ಕತ್ತಲ ಲೋಕದ ವಾಸ್ತವ. ಈ ಗಂಡುಲೋಕದ ಪರಿವೆಯೇ ಇಲ್ಲದಂತೆ ಹುಚ್ಚು ಹಿಡಿದಂತಿರುವ ತಮ್ಮನಿಗಾಗಿ ಹಂಬಲಿಸುವ ತಾಯ್ತನದ ಬೆಳಕನ್ನು ಜೋಪಾನವಾಗಿಟ್ಟುಕೊಂಡಿರುವ ಗೌರಮ್ಮ ಪುರುಷ ವಾಸ್ತವದಲ್ಲಿ ನಗಣ್ಯವಾಗಿರುವ ಪ್ರೀತಿಯ ಬೆಳಕನ್ನು ಬಲರಾಮನ ಮನಸ್ಸಿನಲ್ಲಿ ಮೂಡಿಸುವವಳು. ಕಸ ಎಲ್ಲಿರುತ್ತದೆಯೋ ಅಲ್ಲಿ ಪೊರಕೆಯೂ ಇರುತ್ತದೆ. ಇಡೀ ಕಥೆಯಲ್ಲಿ ಬರುವ ಎಲ್ಲಾ ಹೆಣ್ಣುಗಳು ಹೆಳವಳಾದ ಸೂಲಗಿತ್ತಿಯೂ ಸೇರಿ ಬಲರಾಮನ ಮನಸ್ಸಿನಲ್ಲಿ ಅವಿತಿರುವ ತಾಯಿಯ ಕಲ್ಪನೆಯೂ ಸೇರಿ ಹತ್ಯೆಯನ್ನು ಗುಡಿಸಿಹಾಕುವ ಬೆಳಕನ್ನು ತರುವ ಪ್ರಬಲರಾಗಿ ಕಾಣುತ್ತಾರೆ. ವಾಸ್ತವದಲ್ಲಿ ಜಮೀನ್ದಾರರೂ, ಬಲರಾಮನ ಮನಸ್ಸಿನ ಒಡೆಯನೂ, ಅವನನ್ನು ಆಯುಧದಂತೆ ಬಳಸಿಕೊಳ್ಳುವ ನಾಯ್ಡುವೂ, ಅವನ ಅಧಿಕಾರವೂ ತೊರೆದು ಹೋಗಬೇಕಾದ ಕನಸುಗಳು, ಕಳೆದು ಹೋಗಬೇಕಾದ ಕತ್ತಲು. ಇದನ್ನು ಹೀಗೆ ಕಥೆಗಾರರು ಬಾಯಿ ಬಿಟ್ಟು ಹೇಳುವುದಿಲ್ಲ. ಕಥೆ ಓದುತ್ತಾ ಹೋದಂತೆ ಅದು ನಮಗೆ ಅನ್ನಿಸುವ ಹಾಗೆ ಮಾಡುತ್ತಾರೆ. ಹತ್ಯೆಯ ಆಯುಧಕ್ಕೂ ಬಲರಾಮನಿಗೂ ಇರುವ

ತಾದ್ಯಾತ್ಮ ಸಂಬಂಧವನ್ನು ಶಿವನ ಮತ್ತು ಶಿವನ ಪಿನಾಕಕ್ಕೆ ಲಗತ್ತಿಸುತ್ತಾ ಬಲರಾಮನೂ ಶಿವಣ್ಣನಾಗುವುದರ ವಿಚಿತ್ರವನ್ನು ಗಮನಿಸಿ ಅವಧೂತನಂತೆ, ಕಲಾವಿದನಂತೆ, ವೇದಾಂತಿಯಂತೆ ಇರುವ ಬಲರಾಮ ನಿಜವೊ? ತಮ್ಮನಾಗುವ, ಅಕ್ಕನ ಅಕ್ಕರೆಯ ಮೂಲಕ ತಾಯಿಯ ಪ್ರೀತಿಯನ್ನು ತನ್ನೊಳಗೆ ಮೊಳೆಯಿಸಿಕೊಂಡು ಹುಟ್ಟಲಿರುವ ಮಗುವಿನ ಜನನಕ್ಕೆ ಸಹಾಯಕನಾಗುವ ಶಿವಣ್ಣ ನಿಜವೊ? ಕಥೆಯ ಕೊನೆ ಏನು ಹೇಳುತ್ತದೆ ಎಂಬುದು ಸಂದಿಗ್ಧ. ಊರಿನ ಹೆಸರು ಗುಣಸಾಗರ, ಬೆಳಕು ಕೊಡುವ ಕಂದೀಲು, ಚಂದ್ರಣ್ಣ ಕೊಲೆಯ ಮತ್ತು ತಣ್ಣನೆಯ ಬಲದ ಬಲರಾಮ ಶಿವ, ಪಿನಾಕ, ಶಿವಣ್ಣ ಚೂರಿಯ ಮೇಲೆ ಇರುವ ಹೂವಿನ ಹಣ್ಣಿನ ಪೊಟ್ಟಣಗಳು. ಇಂತಹ ವಿವರಗಳಿಂದ ಈ ಕಥೆಯನ್ನು ಒಳಿತು ಕೆಡಕುಗಳ, ಕತ್ತಲೆ ಬೆಳಕಿನ ಕ್ರೌರ್ಯ ಮತ್ತು ಪ್ರೀತಿಯ ಅನ್ಯೋಕ್ತಿಯಾಗಿರುವ ಇದೊಂದು ಅದ್ಭುತ ಕಥನವಾಗಿದೆ.[೫]

**ಬೇಟೆ**

ಕುಂ.ವೀ. ಅವರ ಜನಪ್ರಿಯ ಕತೆಗಳಲ್ಲಿ 'ಬೇಟೆ'ಯು ಒಂದು. ಇದು ಚಲನಚಿತ್ರವಾಗಿಯೂ ಯಶಸ್ವಿಯನ್ನು ಕಂಡ ಕಥೆಯಾಗಿದೆ. ಜಮೀನ್ದಾರರ ದಬ್ಬಾಳಿಕೆಗೆ ಎರಡು ಮುಗ್ಧ ಜೀವಗಳು ಬಲಿಯಾಗುವ ಕಥೆ ಮನಮಿಡಿಯುತ್ತದೆ. ಸ್ವತಃ ತನ್ನ ಸಂಬಂಧಿಯಾದ ಹಾಗೂ ಮನೆಯಲ್ಲಿ ಆಳಾಗಿರುವ ಚಂದ್ರನಿಗೆ ಚಪ್ಪರ ಚೆನ್ನಪ್ಪನ ಗುಂಡು ಎತ್ತಿದರೆ ತನ್ನ ಮಗಳನ್ನು ಕೊಡುವುದಾಗಿ ಸವಾಲು ಹಾಕಿದ. ಗೌಡ ನಂತರ ಊರನ್ನು ಚಿರತೆ ದಾಳಿಯಿಂದ ಕಾಪಾಡಿದರೆ ಕೊಡುವುದಾಗಿ ಹೇಳುತ್ತಾನೆ. ಅದೇ ರೀತಿ ಚಂದ್ರ ಕಾಡಿನಲ್ಲಿ ಬೇಟೆಯಾಡಿ ಚಿರತೆಯನ್ನು ಕೊಂದು ತರುವಷ್ಟರಲ್ಲಿ ಗೌರಿ ಆತ್ಮಹತ್ಯೆ ಮಾಡಿಕೊಂಡಿರುತ್ತಾಳೆ.

ಚಿರತೆಯಿಂದ ಸಾಕಷ್ಟು ಮಾರಣಾಂತಿಕ ದಾಳಿಗೊಳಗಾದ ಚಂದ್ರನು ಅದರ ಶವವನ್ನು ಹೆಗಲ ಮೇಲೆ ಹಾಕಿಕೊಂಡು ನಡೆಯುತ್ತಾ ಕುಸಿದುಬಿದ್ದು ಸಾವನಪ್ಪುತ್ತಾನೆ. ಗೌಡನ ದರ್ಪಕ್ಕೆ ದಬ್ಬಾಳಿಕೆಗೆ ಎರಡು ಜೀವಿಗಳು ಬಲಿಯಾಗುತ್ತವೆ. ಈ ಕಥೆಯು ಚಲನಚಿತ್ರಕ್ಕಾಗಿಯೇ ಬರೆದಂತಹ ಕಥೆಯಾಗಿದೆ. ವಸ್ತು ಜನಪ್ರಿಯತೆಗೆ ಹತ್ತಿರವಾಗಿದೆ.

**ಕರಿವೇಮಲ**

'ಕರಿವೇಮಲ' ಎಂಬ ಕಥೆಯು ಜಮೀನ್ದಾರ ವೆಂಗಳರೆಡ್ಡಿ ದೊರೆಗೆ ಸಂಬಂಧಪಟ್ಟದು. ಈ ವೆಂಗಳರೆಡ್ಡಿ ತತ್ವಶಾಸ್ತ್ರದಲ್ಲಿ ಎಂ.ಎ. ಮಾಡಿದ್ದರು. ಅವರ ಪ್ರಕಾರ ಜಮೀನ್ದಾರಿ ವ್ಯವಸ್ಥೆ ಎಂದರೆ ಶಿಕ್ಷಣ ಇಲಾಖೆಯ ಸಮಸ್ಯೆಗಳ ಬಗ್ಗೆ ವಿವರಿಸಿದ ಅವರು, ಶಿಕ್ಷಣವನ್ನು ಸಾರ್ವತ್ರಿಕವಾಗಿ ಗ್ರಾಮೀಣ ಪ್ರದೇಶದಲ್ಲಿ ಜಾರಿ ಬರುವಲ್ಲಿ ಈ ಜಮೀನ್ದಾರಿ ವ್ಯವಸ್ಥೆ ಹೇಗೆ ಅಡ್ಡಿಯುಂಟು ಮಾಡುತ್ತದೆ ಎಂಬುದನ್ನು ನಿರ್ವಿಕಾರ ಚಿತ್ತದಿಂದ ವಿವರಿಸುತ್ತಾರೆ. ಅದರ ಜೊತೆಗೆ ಶಿಕ್ಷಣ

ಯಾಕೆ ಕೆಳವರ್ಗವನ್ನು ಮುಟ್ಟಬಾರದು? ದುಡಿಯುವ ವರ್ಗ ಸುಶಿಕ್ಷಿತವಾದರೆ ಎದುರಾಗುವ ಸಾಧಕ ಬಾಧಕಗಳೇನು ಎಂಬುದರ ಬಗೆಗೂ ವಿಚಿತ್ರವಾಗಿ ಮಾತಾಡುತ್ತಾರೆ. ನಂತರ ಅವರು ನಿರೂಪಕನನ್ನು ಕೇಳುತ್ತಾರೆ. ಇತ್ತೀಚೆಗೆ ಏನು ಬರೆಯುತ್ತಿದ್ದೀರಿ ಎಂದು. ನಿರೂಪಕ ಜಮೀನ್ದಾರಿ ವ್ಯವಸ್ಥೆ ಬಗ್ಗೆ ಬರೆಯಬೇಕೆಂದಿರುವೆ ಎಂದು ಹೇಳುತ್ತಾರೆ. ಆಗ ವೆಂಗಳರೆಡ್ಡಿ ಜಮೀನ್ದಾರಿ ವ್ಯವಸ್ಥೆ ಒಳಗೆ ಇದ್ದುಕೊಂಡು ಅರ್ಥ ಮಾಡಿಕೊಂಡು ಬರೆದರೆ ಚಂದ ಎಂದು ಹೇಳುತ್ತಾರೆ. ನಿರೂಪಕ ಹಾಗಾದರೆ ಕೆಲದಿನಗಳ ಮಟ್ಟಿಗೆ ನಿಮ್ಮಲ್ಲಿಗೆ ಬಂದಿರಲೇನು ಎಂದು ಕೇಳಿದ ಪ್ರಶ್ನೆಗೆ ಕೆಲವು ದಿನ ಏಕೆ ಕೆಲವು ತಿಂಗಳು ಬಂದು ಇರಿ ಎಂದು ಹೇಳುತ್ತಾರೆ. ಆ ಮನೆಯ ಕೆಲಸದ ಆಳು ಹಿರಿತಲೆ ಅವರಿಗೆ ವ್ಯವಸ್ಥೆ ಮಾಡುತ್ತದೆ. ನಿರೂಪಕ ಆ ಮನೆಯ ವಯಸ್ಸಾದ ಆಳಿಗೆ 'ಯಜಮಾನ್ರೇ ಈ ಮನೆಯೊಳಗೆ ಗಲ್ಲಿಗೇರಿಸುವ ವ್ಯವಸ್ಥೆ ಇದೆ ಅಂತಾರಲ್ಲ ಅದ್ನ ತೋರಿಸ್ತೀರಾ ದಯವಿಟ್ಟು' ಎಂದು ಸಂಕೋಚದಿಂದಲೇ ಕೇಳುತ್ತಾರೆ.

'ಈ ಚಿಕ್ಕ ವಯಸ್ಸಿನಲ್ಲಿ ಅದನ್ಯಾಕೆ ನೋಡಲು ಇಷ್ಟಪಡುತ್ತೀರಿ. ಇನ್ನೂ ಮದುವೆ ಬೇರೆ ಆದಂತಿಲ್ಲ' ಅಂದ. 'ನೋಡದ್ರಲ್ಲಿ ತಪ್ಪೇನು' ಅಂದೆ. 'ತಪ್ಪೇನು ಇಲ್ಲ' ತೋರಿಸ್ತೀನಿ ಬಾ ಎಂದು ಕರೆದುಕೊಂಡು ಹೋದ. 'ದೇವರ ಮನೆಯ ಹಿಂದಿನ ಕೋಣೆಯಲ್ಲಿ ಚಾಪೆ ಹಾಸಿದ ಕಡೆ ನೆಲದ ಮಾಳಿಗೆಗೆ ಹೋಗಲು ಪಾವಟಿಗೆಗಳು ಇದ್ದವು. ಅಲ್ಲಿ ನಡೆಯಲು ಕಂದೀಲೇನೂ ಬೇಕಾಗಿರಲಿಲ್ಲ ಸೂರ್ಯನ ಬೆಳಕನ್ನು ಪ್ರತಿಫಲನದಿಂದ ಪಡೆಯುವ ವ್ಯವಸ್ಥೆ ಅಲ್ಲಿತ್ತು. ನಾವು ಇಳಿಯುತ್ತಿದ್ದ ಮೆಟ್ಟಿಲುಗಳು ತುಂಬಾ ನುಣುಪಾಗಿದ್ದವು. ತುಂಬಾ ಹುಷಾರಾಗಿ ನಡೆದು ಬಂದು ಹಜಾರ ತಲುಪಿದೆವು'.

ಅಲ್ಲಿ ಉತ್ತರಾಭಿಮುಖವಾಗಿ ಎರಡು ಕಂಬಗಳಿಗೆ ಅಡ್ಡಲಾಗಿ ಒಂದು ತೊಲೆಯಿತ್ತು. ಒಂದಿಬ್ಬರು ಅದರ ರಿಪೇರಿ ಮಾಡುತ್ತಿದ್ದರು. ಕೀಲು ಕೊಂಡಿಗಳಿಗೆ ಗ್ರೀಸ್ ಹಚ್ಚುವುದು, ಹಗ್ಗಕ್ಕೆ ಮೇಣ ಲೇಪಿಸುವುದು ಇತ್ಯಾದಿ. ಒಬ್ಬ ಇನ್ನೊಬ್ಬನ ಕೊರಳಿಗೆ ಕುಣಿಕೆ ಹಾಕಿ ಅದು ಸರಿಯಾಗಿ ಬೀಳುವುದೋ, ಇಲ್ಲವೋ ಎಂದು ಖಚಿತಪಡಿಸಿಕೊಳ್ಳುತ್ತಿದ್ದುದು ಭಯಾನಕವಾಗಿತ್ತು ಎನ್ನುತ್ತಾರೆ ನಿರೂಪಕ.

'ವರ್ಷಕ್ಕೆ ಒಬ್ಬರನ್ನಾದರೂ ಗಲ್ಲಿಗೇರಿಸದಿದ್ದರೆ ಮನೆಗೆ ಒಳ್ಳೆಯದಾಗುವುದಿಲ್ಲ'ವೆಂದು ಆತ ಹೇಳಿದಾಗ ನಿರೂಪಕನಿಗೆ ಹಣೆ ಮೇಲೆ ಬೆವರು ಕಾಣಿಸಿಕೊಳ್ಳುತ್ತದೆ.

'ಪೆದ್ದ ವೆಂಗಳರೆಡ್ಡಿ ಗಲ್ಲಿಗೇರಿಸಲು ಯಾರನ್ನಾದರೂ ದುಡ್ಡುಕೊಟ್ಟು ಕೊಂಡು ತರುತ್ತಿದ್ದ' ರೆಂದು ಆತ ಹೇಳಿದಾಗ ಎದೆ ಮೇಲೆ ಬೆವರು ಕಾಣಿಸಿಕೊಂಡಿತು.

'ಈಗಿನ ಚಿನ್ನವೆಂಗಳರೆಡ್ಡಿ ದೊರೆ ಅಪರಾಧಿಗಳಿಗೆ ಮರಣದಂಡನೆ ವಿಧಿಸಲು ಮೂರು ವರ್ಷ ತೆಗೆದುಕೊಂಡ'ರೆಂದು ಹೇಳಿದಾಗ ಸೊಂಟದ ಸುತ್ತ ಸೆಳಕು ಕಾಣಿಸಿಕೊಂಡಿತು.

'ನಾವು ಎಲ್ಲರೂ ಒತ್ತಾಯ ಮಾಡಿ ಪೋತರಾಜನ ವಿರುದ್ಧ ಮರಣದಂಡನೆ ಸಾರುವಂತೆ ಮಾಡಿದೆವು' ಎಂದು ಹೇಳಿದಾಗ ಕಾಲ ಮೀನಖಂಡಗಳು ಕಂಪಿಸಲು ಆರಂಭಿಸಿದವು.

'ಪೋತರಾಜ ಮಾಡಿದ ಅಪರಾಧ ಯಾವುದು' ಎಂದು ಕೇಳಿದೆ. ಕೃಷಿ ಕಾರ್ಮಿಕರ ಸಂಘ ಮಾಡಿಕೊಂಡು ದೊರೆಗಳ ವಿರುದ್ಧ ಮುಗ್ಧ ಪ್ರಜೆಗಳನ್ನು ಎತ್ತಿಕಟ್ಟುತ್ತಿದ್ದಾನೆಂಬುದೇ ಅಪರಾಧ.

ಗ್ರಾಮದ ಹೊರಗಿನ ಉಗ್ರಾಣದ ಮನೆಯಲ್ಲಿ ಆತನನ್ನು ಬಂದಿಸಿಡಲಾಗಿತ್ತಂತೆ. ತೀರ್ಪು ಓದಿದ ಮರುದಿನ ರಾತ್ರಿ ಅತ ಅಲ್ಲಿಂದ ತಪ್ಪಿಸಿಕೊಂಡು ಬಿಟ್ಟಿರುವನಂತೆ. ಆತ ಪೆದ್ದ ವೆಂಗಳ ರೆಡ್ಡಿಯ ಇಪ್ಪತ್ತೊಂದನೇ ಪ್ರೇಯಸಿ ಬಸಮ್ಮನ ಏಕಮಾತ್ರ ಪುತ್ರನಂತೆ. ಇದನ್ನು ನಿರ್ವಿಕಾರ ಚಿತ್ತದಿಂದ ಮುದುಕ ಹೇಳುತ್ತಿದ್ದಂತೆ ನನ್ನ ತಲೆ ಸುತ್ತಲಾರಂಭಿಸಿತು.

ಇನ್ನೇನು ಬಿದ್ದುಬಿಡುತ್ತೇನೆ ಎನ್ನುವಾಗ ತಿರುಪತಯ್ಯ ಅದ್ಕೆ ಹೇಳಿದ್ದು ಇಂಥ ಸಂಗತಿಗಳ ಕಡೆಗೆ ನಿಮ್ಮಂಥೊರು ಗಮನ ಕೊಡಬಾರದಂತ, ಇಂಥಾದ್ನೆಲ್ಲ ನೀವು ಕಾದಂಬರೀಲಿ ಬರೆದ್ರೆ ಜನ ಅದ್ನ ನಂಬೋದಿಲ್ಲ. ಸುಳ್ಳೇ ಸುಳ್ಳೇ ಬರೆದಿದ್ದಾನೆಂದು ನಕ್ಕು ಬಿಡ್ತಾರಷ್ಟೆ' ಎಂದು ಸತ್ಯ ಹೇಳುತ್ತ ಕೈ ಹಿಡಿದು ಮೆಲ್ಲಗೆ ಹೊರಗಡೆ ಕರೆದೊಯ್ದ.

ಪೆದ್ದ ವೆಂಗಳರೆಡ್ಡಿಯ ಜೊತೆ ಪುಲುಕುರ್ತಿಗೆ ಹೋದಾಗ ಅಲ್ಲಿ ದೇವಿಯ ಜಾತ್ರೆ ನಡೆದಿತ್ತು. ಆ ದೇವಿಯ ಜಾತ್ರೆಗೆ ವೆಂಗಳರೆಡ್ಡಿ ಕಾರಿನಲ್ಲಿ ಹೋಗದೆ ಡೋಲಿಯಲ್ಲಿ ಹೊರಟರು. ಅದನ್ನು ನೋಡಿದ ನಿರೂಪಕರು ಏಕೆ ಎಂದು ತಿರುಪತಯ್ನೋರನ್ನು ಕೇಳಿದ. ಅದಕ್ಕೆ ಡೋಲಿ ಹೊರುವ ಬೋಯಿ ಜನಾಂಗದವರಿಗೆ ಕೆಲಸವಿಲ್ಲದಂತಾಗುತ್ತದೆ. ಅಷ್ಟಕ್ಕೂ ಡೋಲಿಯಲ್ಲಿ ಹೋದರೆ ಜನರ ಮರ್ಯಾದೆ ಹೆಚ್ಚು ಸಿಗುತ್ತದೆ ಎಂದು ಹೇಳಿದ. ನಂತರ ಸುಬ್ಬಾರೆಡ್ಡಿ ಹದಿಮೂರು ವರ್ಷದ ಹುಡುಗಿಯ ಮೀಸಲನ್ನು ಮುರಿಯುತ್ತಾನೆ ಎಂದು ಕೇಳಿದಾಗ ಮನಸ್ಸು ಕುಸಿದು ಹೋಯಿತು. ಈ ಜಮೀನ್ದಾರಿ ವ್ಯವಸ್ಥೆಗೆ ಬೆಂಕಿ ಬೀಳಾ ಎಂದು ಎಂಥವರ ನಡುವೆ ಸಿಕ್ಕಿಕೊಂಡೆನಲ್ಲಾ ಎಂದು ನಿರೂಪಕನಿಗೆ ಅನ್ನಿಸಿತು. ನಿರೂಪಕ ಜಮೀನ್ದಾರಿ ವ್ಯವಸ್ಥೆಯ ಕರಾಳಮುಖಗಳನ್ನು ಚಿತ್ರಿಸುತ್ತಾ ಜೊತೆಗೆ ಆ ಜಮೀನ್ದಾರರ ಕಲಾರಸಿಕತೆ, ಸಾಹಿತ್ಯಾಸಕ್ತಿ, ಸಂಗೀತಾಸಕ್ತಿ ಮುಂತಾದವುಗಳ ಬಗ್ಗೆಯೂ ಪರಿಚಯಿಸಿ ಕೊಡುತ್ತಾರೆ.

**ಬೆಟ್ಟದಾಚೆ**

'ಬೆಟ್ಟದಾಚೆ' ಬಹುಶಃ ಭೂಪಟದಲ್ಲಿ ಇಂಥದೊಂದು ಊರು ಇರಬಹುದು ಎಂದು ಅಚ್ಚರಿಯಾಗುವಂತೆ ತಂಗಡೂರ ಪರಿಚಯವನ್ನು, ಅಲ್ಲಿಯ ಕ್ರೌರ್ಯ ಪೊಲೀಸ್ ದಬ್ಬಾಳಿಕೆಯನ್ನು ಅಸಹಾಯಕ ಜನರ ಬದುಕನ್ನು ಮಾರ್ಮಿಕವಾಗಿ ಪರಿಚಯಿಸುತ್ತಾರೆ.

"ಗುರುಪ್ಪನವ್ರೆ... ಆ ಊರ್‍ನ ನಾನ್ ನೋಡಬೇಕಲ್ಲ" ಆತನ ಮನೆಯಲ್ಲಿ ಬಾಡುತಿನ್ನುತ್ತಿದ್ದಾಗ ಎಲುಬು ಕಡಿಯುತ್ತಾ ಪ್ರಸ್ತಾಪಿಸಿದೆ. "ಆ ಊರಿಗೋಗೋ ಬುದ್ದಿಯಾಕೆ ಬಂತು ನಿಮ್ಗೆ ಅಂತೀನಿ? ಶಿವನಾಮ ಸ್ಮರಣೆಯಿಂದ ಊಟ ಮಾಡುತ್ತಾ ಅಂದ. "ಅಲ್ಲಿನ ಜೀವನ ವಿಧಾನವನ್ನು ಸ್ಟಡಿ ಮಾಡಬೇಕಂತಿದೀನಿ." ಗುರಪ್ಪ ಅರ್ಥವಾಗದೆ ಮಿಕಿ ಮಿಕಿ ನೋಡಿದ.

"ನೋಡಿರೀ, ಶಾರೂ... ಅಲ್ಲಿಗೆ ಹೋತಿರಂತಿಟ್ಕಂಡ್ರೆ... ನೀವಬ್ರು ವಾಪಾಸು ಬರ್ತೀರ ನ್ನೋದೇನು ಗ್ಯಾರಂಟಿ!" "ಅಂದ್ರೆ ಕೊಲೆ ಮಾಡ್ತರೇನು!"

"ಮಾಡದೆ ಇರಬಹ್ದು... ಮಾಡಲೂ ಬಹ್ದು... ಸಿಐಡಿ ಅಂತ ಗುಡ್ಡದ ಗವಿಯೊಳಗೆ ಬಚ್ಚಿಟ್ಟು ಬಿಡಬಹುದು."

"ಆತನ ಮಾತು ಕೇಳಿ ನಡುಕ ಹುಟ್ಟತು. ಹಾಗೆ ಸಾವರಿಸಿಕೊಂಡೆ. ಮನಸ್ಸನ್ನು ದೃಢಮಾಡಿ ಕೊಂಡೆ. ಅಲ್ಲಿನ ವಿಚಿತ್ರ ಜೀವನಶೈಲಿ ನನ್ನ ಕಡೆ ಕೈ ಬೀಸಿ ಕರೆಯುತ್ತಿತ್ತು. ಅಂತ್ರೋಪಾಲಾಜಿಕಲ್, ಸೋಷಿಯಲಾಜಿಕಲ್ ಹಿನ್ನೆಲೆಯಿಂದ ಅಲ್ಲಿನ ವಿಶಿಷ್ಟ ಬದುಕನ್ನ ಅರ್ಥ ಮಾಡಿಕೊಂಡು ಬರೆದಾಗಲೇ ಬರಹಕ್ಕೆ ಪ್ರಾಮುಖ್ಯತೆ ಬರುವುದು, ಮಾನ್ಯತೆ ಸಿಗುವುದು ಬೇರೆ ಲೇಖಕರಿಗಿಂತ ನಾನು ಭಿನ್ನ ಲೇಖಕನಾಗುವುದು ಆಗಲೆ". ಇದು ಕಥೆಗಾರರ ನಿಲುವು. ವಿವಿಧ ಜ್ಞಾನಶಿಸ್ತುಗಳಿಂದ ನೋಡಬೇಕೆಂಬ ಬಯಕೆ ಲೇಖಕರದು.

ಅಲ್ಲಿರಬಹುದಾದ ಕಳೇಬರ ಪ್ರಾಣಿಯದೋ ಮನುಷ್ಯನದೋ! ಬೆಟ್ಟದ ಕಣಿವೆ ಮೂಲಕವೇ ಆ ಗ್ರಾಮ ಪ್ರವೇಶಿಸಬೇಕಿತ್ತು. ಅಲ್ಲಿರುವ ಕಳೇಬರ ನೋಡುವುದು ಅನಿವಾರ್ಯವಾಗಿತ್ತು. ದಾಟುತ್ತ... ದಾಟುತ್ತ ಕಣಿವೆ ಕ್ರಮಿಸುವಾಗ ದುರ್ವಾಸನೆ ಮೂಗಿಗೆ ತಾಕಿತು ಇಣುಕಿದೆ. ದಷ್ಟಪುಷ್ಟ ಮನುಷ್ಯನೊಬ್ಬನ ಕಳೇಬರ ಬೋರಲು ಬಿದ್ದಿತು. ಎರಡು ಹದ್ದುಗಳು ಗುದ ಪ್ರವೇಶದಿಂದ ರಂಧ್ರ ಕೊರೆಯುತ್ತಿದ್ದವು. ಕೆಲವು ತಾಸುಗಳ ಹಿಂದೆಯೇ ಜಜ್ಜಿ ಸಾಯಿಸಿದ್ದಕ್ಕೆ ಸಾಕ್ಷಿಯಾಗಿ ಕೆಲವು ಕಲ್ಲುಗುಂಡುಗಳು ರಕ್ತದ ಕಲೆಯಿಂದ ಲೇಪಿಸಲ್ಪಟ್ಟು ಅದರ ಬಳಿಯೇ ಬಿದ್ದಿದ್ದವು. ತಲೆಗೆ ಸ್ವಲ್ಪ ದೂರದಲ್ಲಿ ಎರಡು ರಮ್ ಬಾಟಲಿಗಳು ಬೀಡಿ ಚೂರುಗಳು!! ವಾಪಾಸು ಹೋಗಿಬಿಡುವಷ್ಟು ಭಯ ಕೆರಳಿತು ಆದರೂ ದಾಟಿ ಮುನ್ನಡೆದೆ. ದುಗ್ಗಿಪಾಟನ ನೋಡಬೇಕು ಗುರುವಪ್ಪ ಕಳಿಸಿದ್ದಾನೆ ಎಂದು ಹೇಳುತ್ತಾ ಊರಿನ ಒಳಗೆ ಹೋದೆ. ಕೆಲವು

ಜನರು ಬಂದು ನನ್ನನ್ನು ತಡಕಾಡಿದರು. ಚೀಲದಲ್ಲಿ ಇರುವ ಕ್ಯಾಮರಾ ನೋಡಿ ಅವರೆಲ್ಲಾ ಓಡಿಹೋದರು. ನಂತರ ನನ್ನನ್ನು ಇಬ್ಬರು ಹೆಣ್ಣುಮಕ್ಕಳು ದುರುಗುಟ್ಟಿ ನೋಡುತ್ತಾ ತಮ್ಮ ಗೂಳ್ಳು(ಜೋಪಡಿ) ಒಳಗೆ ಕರೆದುಕೊಂಡು ಹೋದರು. ಅವರಿಬ್ಬರು ೩೨ ವರ್ಷದ ತಾಯಿ ಮತ್ತು ೨೨ ವರ್ಷದ ಮಗಳು. ಅವಳ ತಂದೆಯೇ ದುಗ್ಗಿಪಾಟಿ.

ಬರೀ ಹೆಂಗಸರಿರುವ ಈ ಝೋಪಡಿಯಲ್ಲಿ ಇಡೀ ರಾತ್ರಿ ಹೇಗಪ್ಪಾ ಸಹಿಸಿಕೊಳ್ಳುವುದು. ನಾನು ಬಂದಿರುವುದು ಹೆಂಗಸ ಬಳಿ ರೋಮ್ಯಾನ್ಸ್ ಮಾಡುತ್ತಾ ಕಾಲ ಕಳಿಯುವುದಕ್ಕಲ್ಲ. ಗ್ರಾಮದ ಮೂಲೆ ಮೂಲೆಯನ್ನು ತಡಕಾಡುವುದಕ್ಕೆ, ಬದುಕಿನ ಸಹಜ ಸೌಂದರ್ಯವನ್ನು ಬದುಕುವುದಕ್ಕೆ ಮತ್ತು ಅರ್ಥ ಮಾಡಿಕೊಳ್ಳಲಿಕ್ಕೆ. ಯಾರೋ ತಳ್ಳಿದ ರಭಸಕ್ಕೆ ಬಾಗಲ ತೆರೆದುಕೊಂಡಿತು. ಅಷ್ಟರಲ್ಲಿ ತಾಯಿ ಮಗಳು ಆ ಗುಡಿಸಲಿನಲ್ಲಿ ಅವಿತುಕೊಂಡರು. ಆ ಇಬ್ಬರಲ್ಲಿ ಒಬ್ಬ ಪೊಲೀಸ್ ಇನ್ನೊಬ್ಬ ಇನ್‌ಫಾರ್ಮರ್ ಎಂದು ಗುರುತಿಸಿದೆ. ಒಳಗೆ ನನ್ನನ್ನ ನೋಡಿ ಅವರಿಗೆ ಅಚ್ಚರಿಯಾಯಿತು.

ಎವಡ್ರಾನುವ್ವು ಎಂದ ಒಬ್ಬ...

ವಾಳ್ಕೆಕ್ಕಡ ಅಂದ ಇನ್ನೊಬ್ಬ...

ಎಂಪಕಿ ವಚ್ಚಾವು ಅಂದ ಒಬ್ಬ...

ಲಂಜಾವು ವೆತುಕ್ಕೋನಿ ವಚ್ಚವೇಮರ ಅಂದ ಇನ್ನೊಬ್ಬ

ಎಕ್ಕಡ್ರಾವಾಳ್ಳು ಚೂಸಿನ್ರಾ.... ಅಂದ ಒಬ್ಬ

ಪಟಪಟ ಪ್ರಶ್ನೆಗಳನ್ನು ಸ್ಫೋಟಿಸುತ್ತಿರುವ ಅವರಿಗೆ ಏನೆಂದು ಸಮಾಧಾನ ಕೊಡುವುದು. ಜೀವನಶೈಲಿ ಅಭ್ಯಸಿಸಲು ಬಂದಿದ್ದೇನೆ ಎಂದು ಹೇಳಿದರೆ ಅವರು ನಗುತ್ತಾರೆ.

"ಅಯ್ಯವಾರು ನುವ್ವು ಪಲ್ಲಟೋಳ್ಳೊಕಿ ವಚ್ಚಿಂದಿ ಸದವು ಸೆಪ್ಪಾಡಾನಿಕಿ ಮಾತ್ರ. ವಾಳ್ಳು ಗುರಿಂಚಿ ಆಲೋಚಿಂಚಡಾನಿಕಿ ಕಾದು... ಏಮೈನಾವೆಥವ ಪನಿ ಚೇಸ್ತೆ ನಕ್ಸಲೈಟನಿ ಕಾಲ್ಚಿಪಾರೇಸ್ತಾಮು ಹುಷಾರ್." ಇನ್ಸ್‌ಪೆಕ್ಟರ್ ವೈಕುಂಠಂ ಯಾವುದೋ ಕೇಸಿಗೆ ಸಂಬಂಧಿಸಿದಂತೆ ಎಚ್ಚರಿಕೆ ನೀಡಿದ್ದ... ಏನು ನಡೆದರೂ ನೋಡಿ ನೋಡದಂತೆ ಹೋಗುತ್ತಿರಬೇಕೆಂದು ಎಚ್ಚರಿಕೆ ನೀಡಿದ.[೬]

### ೪.೧.೩. ಶೋಷಣೆ ಹಾಗೂ ಅಮಾನವೀಯತೆಯ ಕಥೆಗಳು

ಕುಂ.ವೀ. ಅವರ ಬಹುಪಾಲು ಕಥೆಗಳು ಶೋಷಣೆ ಮತ್ತು ಅಮಾನವೀಯತೆಯ ದೌರ್ಜನ್ಯವನ್ನು ಪ್ರತಿಬಿಂಬಿಸುವಂತವುಗಳಾಗಿವೆ. ಹಳ್ಳಿಯ ಅನಕ್ಷರಸ್ಥ ಮುಗ್ಧ ಜನರು ಹೇಗೆಲ್ಲಾ ಮೋಸ ಹೋಗುತ್ತಾರೆ ಎನ್ನುವುದನ್ನು ಕುಂ.ವೀ. ಅವರ ಕಥೆಗಳು ಚಿತ್ರಿಸುತ್ತವೆ.

**ಕಪ್ಪು ನೆಲದಲ್ಲೊಂದು ಕೆಂಪು ಕಥೆ**

ಈ ಕಥೆ ಬಡವರ ದಾರುಣ ಬದುಕಿನ ಚಿತ್ರಣವಾಗಿದೆ. "ಆವೊತ್ತು ಬೇಸ್ತವಾರ ಕೊಟ್ಟೂರು ಸಂತೆ ಮಾದಗೇರಿಯ ಪರತ ದಡ್ಡುಬಿದ್ದರೋ ಹೆಗಲ ಮೇಲೆ ಹಂಡೆ ಚೀಲ ಹಾಕಿಕೊಂಡು ಬಂಡಿ ಜಾಡಿನಲ್ಲಿ ಕೊಟ್ಟೂರು ಕಡೆ ಪುಟುಪುಟು ನಡೆಯುತ್ತಿರುವನು. ನಡೆಯುತ್ತಿರುವ ಅವನ ತಲೆಯಲ್ಲಿ ಕುಲಕರ್ಣಿ ಹೇಳಿದ ಮಾತುಗಳೆ ಮತ್ತೆ ಮತ್ತೆ ಸುಳಿಯುತ್ತಿದ್ದವು. ಹೋದ ಶನಿವಾರ ಮಟಮಟ ಮದ್ಯಾಣ ಗೌಡ್ರ ಮನಿಯಾಗೆ ಇಪ್ಪತ್ತೆತ್ತು ಸೆಗಣೆ ಬಳಿದು ಮುಖ ಸಪ್ಪಗೆ ಮಾಡಿಕೊಂಡು ಬರುತ್ತಿದ್ದ ಪರತಗೆ ಸೈಕಲ್ಲು ಮ್ಯಾಲೆ ಎದುರು ಬಂದ ಕುಲಕರ್ಣಿ "ಎಲ್ಲೇ... ಪರತ, ನಾಳೆ ಇಪ್ಪತ್ತು ಕೊಡು, ಸರಕಾರದೋರು ನಿಂಗೆ ಎಲ್ಡೆಕೆರೆ ಹೊಲ ಕೊಡು ಹಂಗ ಮಾಡುತ್ತೀನಿ... ನಾಳೆ ನೀನು ಇಪ್ಪತ್ತು ಕೊಟ್ರೆ ಮುಂದಿನ್ವಾರನೆ ಪಟ್ಟ ಬರತೈತೆ" ಅಂದಿದ್ದ. "ಇದನ್ನು ಕೇಳಿ ಪರತಗೆ ಊರಿಗೆಲ್ಲ ಹಂಚೋವಷ್ಟು ಸಂತೋಷವಾಯ್ತು ಹ್ವಾ... ನಂಗೆ ಎಲ್ಡೆಕ್ರೆ ಒಲಾ ದ್ಯಾವ್ರು ನಿಮ್ಮೆಡ್ತಿ ಮಕ್ಳು ಮರೀನ ಸಂದಾಕಿಟ್ಟಿರ್ಲಿ. ಎಷ್ಟು... ಒಲ ಯಾವ್ಕಡೆ ಕೊಟ್ಟಾರೆ... ಮುಂದಿನ್ವರ್ಸ ಬಿತ್ತುಬವ್ದು... ಹ್ಹ.. ಹ್ಹ.." ಅಂತ ಒಂದೇ ಉಸುರಿಗೆ ಕೇಳಿದ್ದ ಕುಲಕರ್ಣಿ ಸೈಕಲ್ಲು ಮುಂದಕ್ಕೆ ತಳ್ಳುತ್ತಾ ಸಿದ್ದನಗೌಡ್ರು ಊರಹತ್ರ... ಹಳ್ಳದ ಪಕ್ಕ ಐತಲ್ಲಾ ಆ ಹೊಲ್ದಾಗ ಕೊಟ್ಟಾರ.. ನಾಳೆ ಚಾವ್ಡಿ ಹತ್ರ ಇಪ್ಪತ್ರುಪಾಯಿ ತಗಂಬಾರ್ಲೆ ಮತ್ತ ಅಂತ ಹೇಳುತ್ತ ಹೋಗಿದ್ದ. ತಾನೊಬ್ಬ ದೊಡ್ಡ ಜಮೀನ್ದಾರ ಆಗ್ತಾ ಅದೀನಿ ಅನ್ನಿಸ್ತು ಪರತಗೆ. ನೋಡಿದೋರು ಮೂಗಿನ ದೋರ ಮೂಗಿನ ಮ್ಯಾಲೆ ಬೆರಳಿಟ್ಟುಕೊಳ್ಳುವಂತೆ ನಕ್ಕ. ನೋಡಿದೋರು ಉಚ್ಚು ಇಡಿದಂಗೈತಿ ಪರತಗೆ ಅಂತ ಮಾತಾಡಿಕೊಂಡರೂ ಮಾತಾಡಿಕೊಂಡಿದ್ದರಬಹುದು.

"ತನ್ನ ಹಿರೇಮಗನ್ನ ದುಡಿಯಾಕೆ ಹಚ್ಚುತ್ತೀನಿ ಅಂತ ಹೇಳಿ ಕ್ವಾಂಟ್ರು ಎಂಕಣ್ಣ ಹತ್ತಿರ ಇನ್ನೂರರ ನೋಟಿಗೆ ಹೆಬ್ಬೆಟ್ಟು ಒತ್ತಿ ಇಪ್ಪತ್ತೈದು ಮುಂಗಡ ಇಸಿದುಕೊಂಡು ಬಂದು ಕುಲಕರ್ಣಿಗೆ ಇಪ್ಪತ್ತು ಕೊಟ್ಟು ಬೇಸ್ತವಾರಕ್ಕೆಲ್ಲಾ ಸಂತೆಗೆ ರೆಡಿಯಾಗಿ ಬಿಟ್ಟೆ, ಅದೂ ಸುಡುಬಿಸಿನಲ್ಲಿ ನಡೆಯುತ್ತಾ ಹೊಂಟ ಪರತನ ತಲೆ ತುಂಬಾ ಗೌಡ್ರ ಎರಡು ಎಕರೆ ಹೊಲಾನೆ ತುಂಬಿಕೊಂಡಿತು. ಮುದುಕಿ, ಮಗ, ಮಗಳು, ತಾನು ಎಲ್ಲರೂ ರಂಟೆ ಹೊಡೆದಂತೆಯೂ ಗೊಬ್ಬರ ಹಾಕಿದಂತೆಯೂ ಜೋಳ ಬಿತ್ತಿದಂತೆಯೂ ಅದು ದಿನಕ್ಕೊಂದು ಚಂದವಾಗಿ ಬೆಳೆದಂತೆಯೂ ಎಂಥಾ ಜ್ವಾಳ ಎಂದು ಮಂದಿ ಆಡಿಕೊಳ್ಳುವುದನ್ನು ಕೇಳಿ ತಾನು ಉಬ್ಬಿದಂತೆಯೂ ಸುಗ್ಗಿ ಮಾಡಿ ಹದಿನೈದು ಇಪ್ಪತ್ತು ಚೀಲ ತಂದು ಮನೆಯಲ್ಲಿ ಹೊಟ್ಟಿಕೊಂಡತೆಯೂ ಅದರಲ್ಲಿ ಏಳು ಚೀಲ ಮಾರಿ ಮಗಳ ಮಗನ ಮದುವೆ ಮಾಡಿ ಸುಕವಾಗಿ ಉಂಡು ಕಟ್ಟೆ ಮ್ಯಾಲೆ ಪೇಟ ಸುತ್ತಿಕೊಂಡು ದೊಡ್ಡ ಜಮೀನ್ದಾರನಂತೆ ಕೂತುಕೊಂಡಂತೆಯೂ ಕನಸು ಕಾಣುತ್ತ ನಡೆದಾ."

ಲೇ ಪರತ ಒಲಬೇಕಂತ ಕುಲಕರ್ಣಿತಾವ ದಸುಗತ್ತು ಮಾಡಿಯಂತೆಲ್ಲಾಯಾ ಪಾಟಿ ಎದಿಯಲೇ ನಿಮದು... ಏನೋ ಒಗ್ಲಾ ಮಾದಿಗ ಮುಂಡೇದು ಅಂತ ಕೂಳು ಹಾಕಿ ಇಟ್ಕಂಡ್ರೆ ನಂಗೆ ದ್ರೋಹ ಬಗೆತೀಯಾ ಆಹ ಅದೆಂಗ ನೀನು ಒಲ್ಬಾಗ ಕಾಲಿಡ್ತೀಯೋ ನೋಡಿಬಿಡುತ್ತೀವಿ... 'ನಾನೇನು ಕೇಳಿಲ್ಲಯಪ್ಪೊ ಸರಕಾರದೋರೆ ಕೊಟ್ಟದು. 'ನಂ. ಗೌಡ್ರು ದೇವರಂಥೋರು ಅಂತಯ್ಯೋಳಿ ಒಲ್ಲೆನ್ನಬೇಕಿತ್ತು' 'ಅದ್ಯಾವ ಬಾಯಿಂದ ಒಲ್ಲೆನ್ಲಿ ಗೌಡ... ನನ್ನಂಥ ಪಾಪಿಗೋಳು ನಿಮ್ಮಂಥವರ ದಯೆಯಿಂದ ಉದ್ಧಾರವಾಗುತ್ತೀವಿ." ಎದುರಿಗೆ ಬಂದ ಕುಲಕರ್ಣಿ ಹೇಳಿದ "ಗೌಡ್ರ ಹೊಲ ಮರೆತುಬಿಡು. ಗೌಡ್ರು ಸುಮ್ನೆ ಬಿಡಾಕಿಲ ಅಂದ. ಅದಕ್ಕೆ ನನ್ನ ಇಪ್ಪತ್ತು ರೂಪಾಯಿಕೊಡು ಅಂದ. ಎಂಥೆಂಥವರು ನೂರು ರೂಪಾಯಿ ಕೊಟ್ರೆ ನಾನು ವಾಪಾಸು ಕೊಡೋಲ ನಿನ್ನ ಇಪ್ಪತ್ತು ರೂಪಾಯಿ ಕೇಳ್ತಿಯೇನು ಅಂದ. ಸೆಟ್ಟಿ ಇಪ್ಪತ್ತೈದು ಕೊಟ್ಟು ಐನೂರರ ಪತ್ರಕ್ಕೆ ಎಬ್ಬೆಟ್ಟು ಒತ್ತಿಸಿ ಕೊಂಡಾನ ಎಂಬೋದು ಹಾಸಿಗೆ ಹಿಡಿದ ಎರಡನೇ ತಿಂಗಳ ಆರನೇ ದಿನಕ್ಕೆ ಪರತಗೆ ತಿಳಿಯಿತು. ಮಗನ್ನ ಕೊಂದುಬಿಟ್ಟೆ ಅಂತ ದಿನವೆಲ್ಲಾ ಅತ್ತ. ಊರಿಗೆ ಬಂದ ಮಂತ್ರಿಯನ್ನು ಕಾಣಲು ಹೋಗಿ ಜನಜಂಗಳಿಯಲ್ಲಿ ಸಿಕ್ಕಿ ಕಾಲುತುಳಿತದಲ್ಲಿ ಪರತನ ಪ್ರಾಣ ಹಾರಿಹೋಗಿತ್ತು. ಮಂತ್ರಿಯವರು ಭಾಷಣ ಮಾಡುತ್ತಲೇ ಇದ್ದರು. ಬಡವರಿಗೆ ಹೊಲ ಕೊಟ್ಟೀವಿ, ಮನೆ ಕೊಟ್ಟೀವಿ ಅಂತ ಜನ ಚಪ್ಪಾಳೆ ತಟ್ಟುತಾ ಇದ್ರು... ಅಲ್ಲೆ ಸತ್ತು ಬಿದ್ದಿದ್ದ ಪರತನ ನೋಡಿ 'ಹುಚ್ಚ' ಸತ್ತ ಅಂತ ಅಂದ್ರು.

**ಡೋಮ**

'ಡೋಮ' ಕಥೆಯಲ್ಲಿ ಬರುವ ಡೋಮ ಗೌಡರ ತೋಟವನ್ನು ನೋಡಿಕೊಳ್ಳುತ್ತಿದ್ದ ಆಳಾಗಿದ್ದನು. ದಿನಾಲು ಆ ತೋಟದಲ್ಲಿ ಕೆಲಸ ಮಾಡುತ್ತಾ ಅಲ್ಲಿಯ ಹಣ್ಣು ಹೂವು ಹಕ್ಕಿಗಳ ಕಲರವಕ್ಕೆ ಮಾರುಹೋಗಿದ್ದ. ಆ ತೋಟದ ಹಣ್ಣಿನಲ್ಲಿ ಅವನು ನೂರಾರು ಕನಸು ಕಾಣುತ್ತಾ ತಾನು ಯಾಕೆ ಒಂದು ಹಣ್ಣಿನ ಮರ ಬೆಳೆಸಬಾರದು. ತಾನು ಕೂಡ ಪುರಾಣದಲ್ಲಿ ಹೇಳಿದಂತೆ ಜಂಬೂ ಫಲ ಬೆಳೆದು ಅದನ್ನ ತಿಂದು ದೀರ್ಘ ಆಯುಸ್ಸು ಪಡೆಯಬಾರದು ಎಂದು ಯೋಚಿಸಿ ಗೌಡರನ್ನು ತನಗೂ ಒಂದು ಹಣ್ಣಿನ ಗಿಡವನ್ನು ಕೊಡುವಂತೆ ಕೇಳುತ್ತಾನೆ. ಕಾಟಗರನ ಮನೆಯಲ್ಲಿ ಹಣ್ಣಿನ ಗಿಡ ಬೆಳೆಯುವುದನ್ನು ಸಹಿಸದ ಗೌಡ ಅವನಿಗೆ ಸಸಿಯನ್ನು ಕೊಡುವುದಿಲ್ಲ. ಆದರೆ ದಿನಾಲು ತೋಟವನ್ನು ನೋಡಿಕೊಳ್ಳುವ ಡೋಮನ ತಲೆಯಲ್ಲಿ ತಾನು ಯಾಕೆ ಈ ತೋಟದಿಂದ ಒಂದು ಹಣ್ಣಿನ ಸಸಿ ಹೊಯ್ದು ಬೆಳೆಸಬಾರದು ಎಂದು ಯೋಚಿಸಿ ಗೌಡನ ತೋಟದಿಂದ ಒಂದು ಸಸಿ ತಂದು ತನ್ನ ಮನೆಯ ಬಚ್ಚಲು ನೀರು ಹರಿಯುವ ಜಾಗದಲ್ಲಿ ನೆಡುತ್ತಾನೆ. ದಿನ ಕಳೆದಂತೆಲ್ಲಾ ಆ ಗಿಡ ಹುಲುಸಾಗಿ ಬೆಳೆದು ನಿಂತದ್ದು. ಡೋಮನ ಸಂತೋಷಕ್ಕೆ ಪಾರವೇ ಇರಲಿಲ್ಲ. ಆದರೆ ಗೌಡರ ತೋಟದ ಹಣ್ಣಿನ

ಸಸಿಗಳೆಲ್ಲಾ ಒಣಗಲಿಕ್ಕೆ ಹತ್ತಿದವು. ಆದರೆ ಸರಿಯಾಗಿ ಕೂಲಿ ಕೊಡದಿದ್ದರೂ ಡೋಮ ಇಷ್ಟೊಂದು ಸಂತೋಷವಾಗಿ ಇರಲಿಕ್ಕೆ ಕಾರಣವೇನು ಎಂದು ಗೌಡರು ನೋಡಿದಾಗ ಅವನ ಮನೆಯ ಹಿತ್ತಲಲ್ಲಿ ಸೊಗಸಾಗಿ ಬೆಳೆದ ಹಣ್ಣಿನ ಮರ ಕಾಣಿಸಿತು. ಗೌಡನಿಗೆ ಕಾಟಗರವನ ಮನೆಯ ಹಿತ್ತಲಲ್ಲಿ ಹಣ್ಣಿನ ಗಿಡ ಇರುವುದು ಸಹಿಸಿಕೊಳ್ಳಲು ಆಗಲಿಲ್ಲ. ಆಗ ಅವನು ಹೇಗಾದರು ಮಾಡಿ ಆ ಗಿಡ ಕಡಿಯಬೇಕೆಂದು ರಾತ್ರಿ ಅವನ ಮನೆಯ ಹಿತ್ತಲಲ್ಲಿ ಪ್ರಯತ್ನಿಸುತ್ತಾನೆ. ಆದರೆ ಅವನಿಂದ ಅದನ್ನು ಕಡಿಯಲು ಆಗದಿದ್ದಾಗ ಉಪಾಯವಾಗಿ ಅವನ ಪೋಲಿ ಮಗ ರಂಗನ ಕೈಲಿ ಅದನ್ನು ಕಡಿಸುತ್ತಾನೆ. ತನ್ನ ಹಿತ್ತಲಲ್ಲಿ ತನ್ನ ಕನಸಿನ ಹಣ್ಣಿನ ಗಿಡ ಕಡಿದದ್ದನ್ನು ನೋಡಿ ಆದಕ್ಕೆ ಕಾರಣನಾದ ಗೌಡನ ಮೇಲಿನ ಸಿಟ್ಟಿನಿಂದ ಗೌಡನ ತೋಟದಲ್ಲಿರುವ ಎಲ್ಲಾ ಹಣ್ಣಿನ ಗಿಡಗಳನ್ನು ನಾಶಮಾಡುತ್ತಾನೆ.[೭]

**ನಾಯಿಗಳು**

ಈ ಕಥೆಯು ಅಸಹಾಯಕ ಹೆಣ್ಣುಮಕ್ಕಳ ಮೇಲೆ ಅಧಿಕಾರಿಶಾಹಿಗಳು ಎಸಗುವ ದೌರ್ಜನ್ಯ ಹಾಗೂ ಪೊಲೀಸರ ಅಮಾನವೀಯ ನಡತೆ ಪ್ರತಿಬಿಂತವಾಗಿದೆ. ಅರ್ಧ ರಾತ್ರಿಯಲ್ಲಿ ಮನೆಯಲ್ಲಿ ಜಗಳವಾಡಿ ಹೊರಟ ನರಪೇತಲು ಮನುಷ್ಯನಿಗೆ ದಾರಿಯಲ್ಲಿ ದುಷ್ಟರಿಂದ ತಪ್ಪಿಸಿಕೊಳ್ಳುತ್ತಾ ಓಡಿಬಂದ ಹೆಣ್ಣೊಂದು ಜೊತೆಯಾಗುತ್ತಾಳೆ. ಅವರಿಬ್ಬರು ಓಡುತ್ತಾ ಓಡುತ್ತಾ ಈ ಸಮಾಜದ ದೌರ್ಜನ್ಯ ದಬ್ಬಾಳಿಕೆಗೆ ತತ್ತರಿಸಿಹೋಗುತ್ತಾರೆ. ಕೊನೆಗೂ ಆ ದುಷ್ಟರಿಂದ ಅವರ ಕೈಯಲ್ಲಿ ತಪ್ಪಿಸಿಕೊಳ್ಳಲು ಆಗುವುದಿಲ್ಲ. ಆಗ ಪೊಲೀಸರು ಅವರನ್ನು ಸ್ಟೇಷನಿಗೆ ಕರೆದುಕೊಂಡು ಹೋಗುತ್ತಾರೆ. ಅಲ್ಲಿ ಆಕೆಯ ಜೊತೆಯಿರುವ ಮನುಷ್ಯನನ್ನು ಕಂಬಿಯ ಹಿಂದೆ ನೂಕಿ ಬಂಧಿಸುತ್ತಾರೆ ಹಾಗೂ ಆ ಹೆಣ್ಣಿನ ಮಾನ ರಕ್ಷಣೆ ಮಾಡಬೇಕಾದ ಪೊಲೀಸರೇ ಅತ್ಯಾಚಾರ ಎಸಗುತ್ತಾರೆ. ನಾಯಿಯಂತೆ ಅಲ್ಲಿದ್ದವರೆಲ್ಲಾ ಆಕೆಯ ಮೇಲೆ ಬೀಳುತ್ತಾರೆ. ಇದನ್ನು ನೋಡಿ ಸಹಿಸಲಾಗದ ಆ ಅಸಹಾಯಕ ಮನುಷ್ಯ ಕಂಬಿಯ ಹಿಂದೆ ಪರಿತಪಿಸುತ್ತಾ ಎಚ್ಚರ ತಪ್ಪುತ್ತಾನೆ. ರಕ್ಷಕರೆ ಭಕ್ಷಕರಾದರೆ. ಬೇಲಿಯೇ ಎದ್ದು ಹೊಲ ಮೇಯ್ದರೆ ಇನ್ನಾರಿಗೆ ದೂರುವುದಯ್ಯ ಕೂಡಲಸಂಗಮದೇವ ಅನ್ನುವಂತೆ. ಜಮೀನ್ದಾರಿ ವ್ಯವಸ್ಥೆಯಲ್ಲಿ ಹೇಗೆ ಪೊಲೀಸರು ಅಧಿಕಾರದ ದುರ್ಬಳಕೆ ಮಾಡಿ ಅಸಹಾಯಕರನ್ನು ಅಮಾಯಕರನ್ನು, ಮಹಿಳೆಯರನ್ನು ಶೋಷಿಸುತ್ತಾರೆ ಎನ್ನುವುದಕ್ಕೆ ಪ್ರಸ್ತುತ 'ನಾಯಿಗಳು' ಕಥೆ ನಿದರ್ಶನವಾಗಿದೆ.

**೪.೧.೪ ಭಾಷಾವಿಮುಖತೆಯ ಕಥೆಗಳು**

ಕುಂ.ವೀ. ಅವರ ಭಾಷಾವಿಮುಖತೆಯ ಬಗ್ಗೆ ಪ್ರೊ. ವಿ. ಚಂದ್ರಶೇಖರ ನಂಗಲಿ ಅವರು 'ಬರಿ ಕಥೆಯಲ್ಲೋ ಅಣ್ಣ' ಎಂಬ ಕಥಾಸಂಗ್ರಹದ ಮುನ್ನುಡಿಯಲ್ಲಿ ಚೆನ್ನಾಗಿ

ವಿಶ್ಲೇಷಿಸಿದ್ದಾರೆ. ಅವರು ಹೇಳುವಂತೆ ಭಾಷಾವಿಮುಖತೆಯಿಂದ ಸಿದ್ಧಿಸುವ ಪ್ರತೀಯಮಾನ ಅಥವಾ ಶಬ್ದದೊಳಗಣನಿ ಶೃಬ್ದಕ್ಕೆ ಹೃದಯವನ್ನು ತಟ್ಟುವ ಶಕ್ತಿಯೂ ಅನಂತತಾನಂತವಾಗುವ ಶಕ್ತಿಯೂ ಒಟ್ಟೊಟ್ಟಿಗೆ ಇದೆ ಯೆಂಬುದನ್ನು ಭಾರತೀಯ ಕಾವ್ಯಮೀಮಾಂಸೆಯ ಉಪಸರ್ಜನ ತತ್ವವು ನಿರೂಪಿಸಿದೆ. ಇದರ ಜಾಡಿನಲ್ಲೆ ಮುಂದುವರಿಯುವುದಾದರೆ ಭಾಷಾವಿಮುಖತೆಯಿಂದ ಸಿದ್ಧಿಸುವ ಪ್ರತೀಯಮಾನ 'ಅಥವಾ 'ಭಾಷೆಯೊಳಗಣ ಮೂಕ'ವನ್ನು ಗ್ರಹಿಸಬಹುದು. ಕುಂ.ವೀ. ಕತೆಗಳಾದ ನೆರಳು, ಮೃತ್ಯು, ಮುಳ್ಳು, ಕುಬುಸ, ಕ್ರಮ ಮುಂತಾದವು ಭಾಷಾವಿಮುಖತೆಯ ನಿದರ್ಶನಗಳಾಗಿವೆ. 'ವಾಸ್ತವ್ಯ ಸತ್ಯವನ್ನು ಹೃದಯಕ್ಕೆ ತಟ್ಟುವಂತೆ ಹೇಳಿಯೂ ಅನಂತವಾಗಬಲ್ಲ ಶಕ್ತಿಯನ್ನು ಭಾಷಾ ವಿಮುಖತೆಯ ಕತೆಗಳಲ್ಲಿ ಮನಗಾಣಬಹುದು. ಮಾತಿನ ಬೆಲೂನಿಗೆ ನಿಜಸೂಜಿ ಮೊನೆಯನ್ನು ತಾಕಿಸುವಂಥ ಕಲ್ಪಕಶಕ್ತಿ ಭಾಷಾವಿಮುಖತೆಯ ಕತೆಗಳಾಗಿದೆ. ಈ ರೀತಿಯ ಕತೆಗಳನ್ನು ಲಕ್ಷಿಸಿದರೆ ಇಂದ್ರಿಯ ಜ್ಞಾನಕ್ಕೆ ಭಾಷೆಯುಂಟು, ಇಂಗಿತ ಜ್ಞಾನಕ್ಕೆ ಭಾಷೆಯಿಲ್ಲವೆಂದು ಹೇಳಬಹುದು. ಇಂದ್ರಿಯ ಜ್ಞಾನದಲ್ಲೆ ನಮ್ಮನ್ನು ಉಳಿಸಿಬಿಡುವ ಭಾಷೆಯನ್ನು ಕುರಿತೆ ಅಲ್ಲಮಪ್ರಭು. ಭಾಷೆ ಕಿರಿದು ಆಯುಷ್ಯ ಹಿರಿದು, ಭಾಷೆಯೆಂಬುದು ಪ್ರಾಣಘಾತಕ ಎಂದು ಹೇಳಿದ್ದಾನೆ. ಭಾಷೆಯ ಹಂಗಿಲ್ಲದ ಇಂಗಿತ ಜ್ಞಾನವನ್ನು 'ಶಿಶುಕಂಡ ಕನಸು', 'ಮೂಗರ ಮೂಗರ ಪ್ರಸಂಗ' ಎಂಬ ಅಲ್ಲಮನ ರೂಪಕಗಳು(ನಿಃಶಬ್ದವು) ಬಿಂಬಿಸುತ್ತವೆ.

ನಿಸರ್ಗ ಮತ್ತು ಸಂಸ್ಕೃತಿಯ ಸಹಸಂಬಂಧಗಳನ್ನು ಕಲ್ಪಕಶಕ್ತಿಯಿಂದ ಶೋಧಿಸುವ ಕುಂ.ವೀ. ಕತೆಗಳಲ್ಲಿ ನೆರಳು, ಕುಬುಸ, ಕ್ರಮ ಎಂಬುದನ್ನು ವೈವಿಧ್ಯ ಪ್ರತೀಕಗಳೆಂದು ತಿಳಿದು ಪರಿಶೀಲಿಸಬಹುದು. ಮಿತ್ರನ ಕರೆಯ ಮೇರೆಗೆ ಕಾಲೇಜಿಗೆ ಅತಿಥಿಯಾಗಿ ಬರುವ ನಿರೂಪಕ ಯಾವ ವಿಷಯ ಕುರಿತು ಮಾತನಾಡಬೇಕೆಂದು ಗಲಿಬಿಲಿಗೊಳ್ಳುತ್ತಾನೆ. ಕಾರ್ಯಕ್ರಮದ ಪೂರ್ವಸಿದ್ಧತೆಗಳನ್ನು ಗಮನಿಸಿದಾಗ 'ಬಲವಂತವಾಗಿ ಮಾತನಾಡಿಸುವ ಹುನ್ನಾರು' ಎನಿಸುತ್ತದೆ. 'ತೆರೆಮರೆಯಲ್ಲಿ ಮಾತಿನ ಮೂಲಕ ನನ್ನನ್ನು ನಾನು ಅಪಮೌಲ್ಯಗೊಳಿಸುವುದನ್ನು ನೋಡುತ್ತ ಸಂತೋಷ ಪಡಲು ಅವರೆಲ್ಲ ಸಜ್ಜಾಗಿರುವಂತಿತ್ತು. ಒಂದು ಕ್ಷಣ ಯೋಚಿಸಿದೆ ಏನು ಮಾತಾಡುವುದಂತ. ಜಿಲೇಬಿ ಪ್ರಿಯ ರಾಷ್ಟ್ರಪತಿ ತಿರುಪತಿಗೆ ಹೋಗಿ ಹಜಾಮನ ಬ್ಲೇಡಿಗೆ ತಲೆ ಒಪ್ಪಿಸಿದ್ದನ್ನು ಕುರಿತು ಮಾತನಾಡಲೆ ತಾಯಿಯ ಎದೆ ಹಾಲಿನಲ್ಲಿ ಇತ್ತೀಚೆಗೆ ಕಂಡು ಬಂದಿರುವ. ಡಿ.ಡಿ.ಟಿ. ಅಂಶದ ಕುರಿತು ಮಾತನಾಡಲೇ, ಮನುಷ್ಯ ಮನುಷ್ಯರ ನಡುವಿನ ಕಂದಕಗಳ ಬಗ್ಗೆ ಮಾತನಾಡಲೆ, ಪಾತಾಳ ತಲುಪಿರುವ ಮಾನವೀಯ ಮೌಲ್ಯಗಳ ಬಗ್ಗೆ ಮಾತನಾಡಲೆ, ಏನು ಮಾತಾಡುವುದು ಏನನ್ನು ಮಾತನಾಡದಿರುವುದು. ಇದನ್ನೇ ಅವರು ಭಾಷಾವಿಮುಖತೆಯ ಪ್ರತೀಯಮಾನ ಎಂದು ಕರೆದಿರುವರು."

**“ನೆರಳು”**

“ನೆರಳು” ಕತೆಗಾರಿಕೆಯ ವೈಶಿಷ್ಟ್ಯತೆಯನ್ನೆಲ್ಲಾ ಒಳಗೊಂಡಿರುವುದರ ಜೊತೆಗೆ ದಟ್ಟವಾದ ಸಾಂಕೇತಿಕತೆಯನ್ನು ಹೊಂದಿರುವ ಕತೆಯಾಗಿದೆ. ಒಂದು ಹಂತದಲ್ಲಿ ಈ ಕತೆಯು ಕೃಷ್ಣಕುಮಾರ ಕಲ್ಲೂರರ ‘ಗುಬ್ಬಿಗಳ ಸಂಸಾರ’ ಕತೆಯನ್ನು ಜ್ಞಾಪಿಸುತ್ತದೆ. ಈ ಕತೆಯಲ್ಲಿ ನಿರೂಪಕರು ಯಾವುದೋ ಒಂದು ಕಾಲೇಜಿಗೆ ಮುಖ್ಯ ಅತಿಥಿಯಾಗಿ ಹೋದಾಗ ಕಾರ್ಯಕ್ರಮ ಶುರುವಾಗುವುದಕ್ಕಿಂತ ಮೊದಲು ಯಾವ ವಿಷಯವನ್ನು ಕುರಿತು ಮಾತಾಡುವುದು ಎಂಬ ಗೊಂದಲಕ್ಕೆ ಬೀಳುತ್ತಾರೆ. ಜಿಲೇಬಿ ಪ್ರಿಯ ರಾಷ್ಟ್ರಪತಿ ತಿರುಪತಿಗೆ ಹೋಗಿ ಹಜಾಮನ ಬ್ಲೇಡಿಗೆ ತಲೆ ಒಪ್ಪಿಸಿದ್ದನ್ನು ಕುರಿತು ಮಾತಾಡಲೇ? ಒಬ್ಬ ಪ್ರಧಾನಮಂತ್ರಿ ಸ್ವಘೋಷಿತ ದೇವಮಾನವನ ಪಾದಕ್ಕೆರಗಿದ ಸಂಗತಿ ಕುರಿತು ಮಾತನಾಡಲೆ? ತಾಯಿಯ ಎದೆ ಹಾಲಿನಲ್ಲಿ ಇತ್ತೀಚೆಗೆ ಕಂಡುಬಂದಿರುವ ಡಿ.ಡಿ.ಟಿ. ಅಂಶದ ಕುರಿತು ಮಾತನಾಡಲೆ? ಮನುಷ್ಯ ಮನುಷ್ಯರ ನಡುವಿನ ಕಂದಕಗಳ ಬಗ್ಗೆ ಮಾತನಾಡಲೆ? ಪಾತಾಳ ತಲುಪಿರುವ ಮಾನವೀಯ ಮೌಲ್ಯಗಳ ಕುರಿತು ಮಾತನಾಡಲೇ? ಈ ರೀತಿಯ ಗೊಂದಲದಲ್ಲಿ ನಿರೂಪಕರು ಇರುವಾಗ ಒಂದು ಕ್ಷಣ ಕಣ್ಣುಮುಚ್ಚುತ್ತಾರೆ. ಆಗ ಅವರಿಗೆ ಎಂದೋ ಹತ್ತು ವರ್ಷಗಳ ಕೆಳಗೆ ಕಂಡ ಜಲದುರ್ಗದ ಕನಸು ಬೀಳುತ್ತದೆ.

ಈ ಬಗೆಯ ಗುಂಗಿನಲ್ಲಿ ಇದ್ದಾಗ ನಿರೂಪಕನಿಗೆ ಮಂಪರು ಕವಿದು ಜಲದುರ್ಗದ ಕನಸು ಬೀಳುತ್ತದೆ. ಮಹಿಳೆಯೊಬ್ಬಳನ್ನು ಹಿಂಬಾಲಿಸುತ್ತಿರುವ ಗಂಡುನವಿಲು ಸ್ಖಲನ ಮಾಡಿಕೊಳ್ಳುತ್ತಿರುತ್ತದೆ. ಈ ನವಿಲು ತನ್ನ ಸುಂದರ ಕೊಕ್ಕಿನಿಂದ ನಿರೂಪಕನ ಕಣ್ಣು ಕುಕ್ಕಲು ಬರುತ್ತಿದೆಯೆಂದು ತಿಳಿದಾಗ ಆಕೆ ನಗುತ್ತಾಳೆ. ನಿರೂಪಕ ಕಾಲುಜಾರಿ ಕೃಷ್ಣೆಗೆ ಬೀಳುತ್ತಾನೆ. ಆಗ ಎಚ್ಚರವಾಗುತ್ತದೆ. ಮಾತಾಡೋದರ ಮೂಲಕ ಕ್ರಿಯೇಟಿವಿಟೀನ ಪೋಲು ಮಾಡಿ ಖಾಲಿ ಪೀಪಾಯಿಯಾಗಿ ವಾಪಸು ಹೋಗುವುದಕ್ಕಿಂತ ಕಾರ್ಯಕ್ರಮ ಆರಂಭವಾಗುವುದಕ್ಕಿಂತ ಮೊದಲೇ ಬಸ್ ನಿಲ್ದಾಣ ಸೇರಬೇಕೆಂದುಕೊಳ್ಳುವ ನಿರೂಪಕ ಬ್ಯಾಗನ್ನು ಸಿದ್ಧಪಡಿಸಿ ಹೆಗಲಿಗೇರಿಸಿಕೊಂಡಾಗ ಎದುರಿಗಿದ್ದ ನಿಲುಗನ್ನಡಿಯಲ್ಲಿನ ಆತನ ಪ್ರತಿಬಿಂಬ ಅವನನ್ನು ನೋಡಿ ಅಣಕಿಸುತ್ತದೆ. ‘ನಿಂತ್ಕೋ ಬೋಳಿಮಗ್ನೇ ಯಾಕೆ ಹೆದರಿಕೊಂಡು ಓಡಿ ಹೋಗ್ತಿಯ’ ಎಂದು ಪ್ರಶ್ನಿಸಿದಂತೆ ಭಾಸವಾಗುತ್ತದೆ. ನಿರೂಪಕ ಹುಟ್ಟಿದಾರಭ್ಯ ಇಂದಿನವರೆಗೆ ಕಳೆದ ನಾಲ್ಕು ದಶಗಳಲ್ಲಿ ತನ್ನ ಪ್ರತಿಬಿಂಬ ಎಳೆತನ ಕಳೆದುಕೊಂಡು ಪ್ರೌಢತನದಿಂದ ತನ್ನನ್ನು ಗಮನಿಸತೊಡಗಿ ಆದ ವರ್ಷಗಳು ಎಷ್ಟೊಂತ ಲೆಕ್ಕ ಹಾಕುತ್ತಾನೆ. ‘ಹಾಕಿದಷ್ಟು ಕಗ್ಗಂಟಾಗುತ್ತಿರುವ ಲೆಕ್ಕದ/ಅನೇಕ ರೀತಿಯ ಗಾತ್ರಗಳನ್ನು ನಿರಂತರವಾಗಿ ಅರಗಿಸಿಕೊಳ್ಳುತ್ತಿರುವ ಕನ್ನಡಿಯ ನಿಗೂಢ

ಶಕ್ತಿಯ ಬಗ್ಗೆ ವಿಸ್ಮಯ ಒಳಪ್ರವೇಶಿಸಿದವು'... ಇಲ್ಲಿದಾಚೆಗೆ, ಕತೆ ಬೇರೊಂದು ತಿರುವು ತೆಗೆದುಕೊಳ್ಳುತ್ತದೆ. ಗುಬ್ಬಿದಾಂಪತ್ಯ ಮತ್ತು ಮನುಷ್ಯದಾಂಪತ್ಯಗಳ ಉಭಯ ವಿವೇಚನೆ ನಿಸರ್ಗ ಮತ್ತು ಸಂಸ್ಕೃತಿಗಳ ವೈದೃಶ್ಯ ಎಂಬಂತೆ ಕತೆ ಹರಿಯುತ್ತದೆ.

'ಕೊರಳ ಸುತ್ತ ಕಪ್ಪನೆ ಪಟ್ಟಿಯ ಗಂಡುಗುಬ್ಬಿ ತನ್ನ ಪ್ರೀತಿಯ ಹೆಣ್ಣು ಗುಬ್ಬಿಯನ್ನು ರಮಿಸಲು ಬಳಸುವ ಚಿವ್‌ಚಿವ್ ಭಾಷೆಗೆ ಕಾವ್ಯಲೇಪವಿರಲಿಲ್ಲವೆಂದು ಊಹಿಸಲಾದೀತೆ? ತನ್ನ ಪ್ರಿಯತಮನ ಅರ್ಥಗರ್ಭಿತ ಮಾತನ್ನು ಕೇಳಿದ ಹೆಣ್ಣು ಗುಬ್ಬಿ ನನ್ನತ್ತ ಅನುಕಂಪಿತ ದೃಷ್ಟಿ ಬೀರಿತು. ಕಣ್ನೋಟದಿಂದ ನನ್ನಗಲ ಎತ್ತರ ಅಳೆಯಿತು. ಈ ಹುಲುನರರ‍್ಯಾಕೆ ಪ್ರೀತಿ ವಿಷಯದಲ್ಲಿ ನಮ್ಮಷ್ಟು ಗಾಢವಾಗಿ ಸ್ಪಂದಿಸುವುದಿಲ್ಲವೆಂದು ಅವೆರಡೂ ಮಾತಾಡಿಕೊಂಡವು. ನರರ ಸಮಾಜವು ಯಾವಾಗಲೂ ಪುರುಷಪ್ರಧಾನವಾದುದು ಆದ್ದರಿಂದ ಹೆಣ್ಣಿನಸ್ಥಾನ ನಗಣ್ಯವೆಂದು ಗಂಡುಗುಬ್ಬಿಯು ಹೇಳಲು ಹಾಗಾದರೆ ನಾವು ಮುಂದೆ ನರಜನ್ಮವೆತ್ತಬಾರದು ಎಂದು ನಗಾಡಿತು.'[೮]

ಈ ಗುಬ್ಬಿಗಳ ಸಂಭಾಷಣೆಯನ್ನು ಓದುತ್ತಿದ್ದರೆ, ಮರುಜನ್ಮದಲ್ಲಿ 'ಮರಿದುಂಬಿಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದು ನಂದನದೋಳ್ ಬನವಾಸಿದೇಶದೊಳ್' ಎಂಬ ಪಂಪ ಕವಿಯ ತದ್ವಿರುದ್ಧ ಹಾರೈಕೆಯ ನೆನಪಾಗುತ್ತದೆ. ಮಾನವ ನಿರ್ಮಿತ ಕೃತಕ ವ್ಯವಸ್ಥೆ ಮತ್ತು ನಿಸರ್ಗ ಸಹಜ ನೆಲೆಗಳ ಮಹದಂತರವು ನಿರೂಪಕನ ಅಂತರ್ ನಿರೀಕ್ಷಣೆಯಲ್ಲಿ ಸಹಜವಾಗಿ ಅನಾವರಣ ಗೊಳ್ಳುತ್ತದೆ.

'ಇಂಥ ಕೃತಕ ಸಮಾಜದಲ್ಲಿ ಕೃತಕ ಮಾತುಗಳನ್ನಾಡುತ್ತಾ ಕೃತಕ ಮಾತುಗಳನ್ನು ಕೇಳುತ್ತಾ, ಕೃತಕ ಮಾತುಗಳಿಗೆ ಅಕ್ಷರರೂಪ ಕೊಡುತ್ತಾ ಏನಕೇನ ಪ್ರಕಾರೇಣ ಬದುಕುತ್ತಿರುವ ನನಗೆ ಆ ಗುಬ್ಬಿಗಳು ಆದರ್ಶಪ್ರಾಯವಾಗಿ ಕಂಡವು. ನಾನು ಎಷ್ಟೋ ಸಂಗತಿಗಳನ್ನು ಇರುವೆಗಳಿಂದ ಕಲಿತಿದ್ದೇನೆ. ಸೂರ್ಯನ ಕುದುರೆಗಳಿಂದ ಕಲಿತಿದ್ದೇನೆ. ಹಾವುಗಳಿಂದ ಕಲಿತಿದ್ದೇನೆ. ಅವುಗಳಿಂದ ಕಲಿತ ಪಾಠಗಳಿಗೆ ಅಕ್ಷರರೂಪ ಕೊಟ್ಟು ಕತೆ ಕವಿತೆ ಬರೆದಿದ್ದೇನೆ. ಚೂರುಪಾರು ಹಣ ಗಳಿಸಿ ಮಜ ಉಡಾಯಿಸಿದ್ದೇನೆ. ಈ ದೃಷ್ಟಿಯ ಎದುರು, ಈ ಚರಾಚರದೆದುರು, ನಾನು ನನ್ನ ಕ್ಷುಲ್ಲಕತನವನ್ನು ಮತೆ ಮತ್ತೆ ಸಾದರಪಡಿಸಿದ್ದೇನೆ. ಈ ಗುಬ್ಬಿ ದಂಪತಿಗಳು ನನ್ನ ಸಣ್ಣತನವನ್ನು ಕಳೆಯಬಹುದೆನಿಸಿ ಮನಸ್ಸು ತೆರೆದುಕೊಂಡು ಕೂತೆ. ಈ ಗುಬ್ಬಿಗಳು ಮಾನವೀಯ ಸಂಬಂಧ ಸರಿಪಡಿಸಬಲ್ಲವೆನಿಸಿತು. ಗಂಡುಗುಬ್ಬಿ ಹೆಣ್ಣುಗುಬ್ಬಿಯೊಂದಿಗಿರುವಂತೆ ನಾನು ಅಂತರಂಗದಿಂದ ಕೆಲವು ಸ್ತ್ರೀ ಪಾತ್ರಗಳನ್ನು ಹೊರಗೆಳೆದು ಪಕ್ಕದಲ್ಲಿ ಕೂಡಿಸಿಕೊಂಡೆ...'

ಮುಂದೆ ಗುಬ್ಬಿಗಳಿಗೂ ನಿರೂಪಕನ ಅಂತರಂಗಕ್ಕೂ ನಡುವೆ ಸಂವಾದ ಏರ್ಪಡುತ್ತದೆ. ಗುಬ್ಬಿಯ ಪ್ರೀತಿ ಮಿಗಿಲೊ ನಿರೂಪಕ ಸೃಷ್ಟಿಸುವ ಮನುಷ್ಯ ಪ್ರೀತಿ ಮಿಗಿಲೊ ಎಂಬ ಪ್ರಶ್ನೆ ತಲೆದೋರುತ್ತದೆ. ಸಂವಾದವು ವಾಗ್ವಾದವಾಗಿ ಸಂಘರ್ಷಕ್ಕೆಡೆಗೊಡುತ್ತದೆ. ಒಂದಾದ ಮೇಲೊಂದರಂತೆ ನಿರೂಪಕನ ಮೇಲೆ ಎಗರಲು ಸಜ್ಜಾಗುವ ಗುಬ್ಬಿಗಳು ಎದುರಿಗಿದ್ದ ನಿಲುಗನ್ನಡಿಯಲ್ಲಿ ತಂತಮ್ಮ ಬಿಂಬಗಳನ್ನು ನೋಡಿಕೊಂಡು ಸಂಶಯ ಪ್ರವೃತ್ತಿಯನ್ನು ಬೆಳೆಸಿ ಕೊಳ್ಳುತ್ತವೆ. ಅಂದರೆ ಮಾನವ ನಿರ್ಮಿತವಾದ ಕನ್ನಡಿಯಲ್ಲಿ ತಂತಮ್ಮ ಬಿಂಬಗಳನ್ನು ನೋಡಿ ಕೊಳ್ಳುವಾಗ ಗಂಡುಗುಬ್ಬಿಯು ಮಿಂಡಗುಬ್ಬಿಯನ್ನು ಹೆಣ್ಣುಗುಬ್ಬಿಯು ಸವತಿಗುಬ್ಬಿಯನ್ನು ಮನಗಂಡು ತಂತಮ್ಮ ಬಿಂಬಗಳೊಂದಿಗೆ ಕಾದಾಡುವ ಪರಿ 'ನೆರಳು' ಕತೆಯ ಶಿಖರ ಮೌನವಾಗಿದೆ. ತಂತಮ್ಮ ಬಿಂಬಗಳೊಂದಿಗೆ ಕಾದಾಟ ನಡೆಸುವ ಗುಬ್ಬಿಗಳ ಪ್ರಸಂಗ ಮನುಷ್ಯರ ಸಹವಾಸ ದೋಷದ ಫಲವೆಂಬ ಪರಿಣಾಮ ರಮಣೀಯ ಧ್ವನಿ ಇಲ್ಲಿದೆ. ಗುಬ್ಬಿದಾಂಪತ್ಯ ಮತ್ತು ಮನುಷ್ಯ ದಾಂಪತ್ಯದ ಉಭಯ ವಿವೇಚನಲ್ಲಿ ನಿಸರ್ಗದ ನಿಷ್ಕಲ್ಮಷತೆ ಮತ್ತು ಸಂಸ್ಕೃತಿಯ ಕಾಲುಷ್ಯತೆಗಳ ಅನಾವರಣವಿದೆ. ಕತೆಯ ಆರಂಭದಲ್ಲಿ ಕುಲಗೆಟ್ಟು ಹೋಗಿರುವ ಭ್ರಷ್ಟಗೊಂಡಿರುವ ಬದುಕಿನ ವಿವಿಧ ನೆಲೆಗಳ ಪ್ರಸ್ತಾಪವಿದ್ದು ಮಾತು ಕೂಡ ಭ್ರಷ್ಟಗೊಂಡಿರುವ ಸೂಚನೆಯಿದೆ. ಇದಿಷ್ಟು ಹಿನ್ನೆಲೆಯಲ್ಲಿ ನೋಡಿದರೆ ಮನುಷ್ಯ ನಿರ್ಮಿತವಾದುವೆಲ್ಲ ಅಪಭ್ರಂಶಗೊಳ್ಳುವ, ಮನುಷ್ಯ ಸಂಪರ್ಕಕ್ಕೆ ಬಂದ ನಿಸರ್ಗ ಸಹಜ ನೆಲೆ 'ಗುಬ್ಬಿದಾಂಪತ್ಯ ಕೂಡ ಭ್ರಷ್ಟಗೊಳ್ಳುವ ಅನುಭವ ವಾಗುತ್ತದೆ. ಮನುಷ್ಯರು ಸಂಸ್ಕೃತಿಯಲ್ಲಿ ಬಿಟ್ಟುಹೋಗುವ ನೆರಳಿನ(ಭ್ರಷ್ಟತೆಯ) ವಿರಾಟ್ ಸ್ವರೂಪದ ಕತೆಯಿದು.

**ಕುಬುಸ**

'ಕುಬುಸ' ಕಥೆಯು ಸಹ ಭಾಷಾವಿಮುಖತೆ ಬಿಂಬಿಸುವ ಕಥೆಯಾಗಿದೆ. 'ವಡ್ಡಟ್ಟಿ' ಎಂಬ ಗ್ರಾಮದಲ್ಲಿರುವ ಬಂಡೆವ್ವಜ್ಜಿಯ ಮೊಮ್ಮಗ ನೆಟ್ಟಕಲ್ಲು ಕುಲವೃತ್ತಿಯನ್ನು ತೊರೆದು ಇಸ್ಕೂಲಿಗೆ ಸೇರಿಕೊಂಡು ವಿದ್ಯಾವಂತನಾಗಿ ನೌಕರಿ ಗಿಟ್ಟಿಸಿ ನಗರದಲ್ಲಿ ನೆಲೆ ನಿಲ್ಲುತ್ತಾನೆ. ಕಮಲ ಎಂಬುವಳನ್ನು ಮದುವೆಯಾಗುತ್ತಾನೆ. ಅವನು ಮೂರು ಜನ ಮಕ್ಕಳ ತಂದೆಯಾಗುತ್ತಾನೆ. ಈ ವೇಳೆಗೆ ಅವನ ಹೆಸರು ನಡೆ ನುಡಿ, ಅಭಿರುಚಿ ಇತ್ಯಾದಿಗಳೆಲ್ಲಾ ಬದಲಾವಣೆಗೊಂಡಿರುತ್ತವೆ.

ನೆಟ್ಟಕಲ್ಲುವಿನ ಅಜ್ಜಿ ಬಂಡೆವ್ವ ಕುಬುಸ ತೊಟ್ಟವಳೇ ಅಲ್ಲ. ತಮ್ಮ ಜಾತಿಯ ಕುಲದೇವರೇ ಕುಬಸ ತೊಟ್ಟಿಲ್ಲದಿರುವಾಗ ನರಮಾನವರು ಹೇಗೆ ಕುಬುಸ ತೊಡುವುದು ಎಂಬ ಪ್ರಶ್ನೆ ಬಂಡೆವಜ್ಜಿಯಲ್ಲಿರುತ್ತದೆ. ನಾಗರಿಕತೆಯ ನಯ ನಾಜೂಕುಗಳನ್ನು ಬಲ್ಲ ಕಮಲ ಮತ್ತು ಬಂಡೆವ್ವ ಎರಡು ತುದಿಗಳೆನ್ನಬಹುದು. ಮೊಮ್ಮಗ ನೆಟ್ಟಕಲ್ಲು ಬಂಡೆವ್ವಜ್ಜಿಯನ್ನು ಮೊದಲ ಬಾರಿಗೆ

ಬಸ್ಸು ಹತ್ತಿಸಿ ನಗರದಲ್ಲಿರುವ ತನ್ನ ಮನೆಗೆ ಕರೆತರುತ್ತಾನೆ. ಬ್ಲೌಜ್‌ಲೆಸ್ ಮುದುಕಿ ಬಂಡವಜ್ಜಿ ನಾಗರಿಕರೆಲ್ಲರ ಕುತೂಹಲದ ವಸ್ತುವಾಗುತ್ತಾಳೆ. ಇದರಿಂದ ಕಸಿವಿಸಿಗೊಳ್ಳುವ ಕಮಲ–ನೆಟ್ಟಕಲ್ಲು ಬಂಡೆವಜ್ಜಿಗೆ ಕುಬುಸ ತೊಡಿಸಲು ತೀವ್ರವಾಗಿ ಜಾಣ್ಮೆಯಿಂದ ಯತ್ನಿಸುತ್ತಾರೆ.

ಇದಕ್ಕೆಲ್ಲಾ ಸೊಪ್ಪು ಹಾಕದ ಬಂಡವ್ವಜ್ಜಿ ನಗರ ಪರಿಸರವನ್ನೆ ಧಿಕ್ಕರಿಸಿ ಮರಳಿ ವಡ್ಡಟ್ಟಿಗೆ ಹಿಂದಿರುಗುತ್ತಾಳೆ. ಬಂಡೆವ್ವಜ್ಜಿ ಕುಬುಸ ತೊಡುವುದು ನೆಟ್ಟಕಲ್ಲು ಹೆಸರು ಭಾಷೆ ನಡವಳಿಕೆ ಮುಂತಾದವನ್ನು ಬದಲಿಸಿದಷ್ಟು ಸಲೀಸಲ್ಲ. 'ಕುಬುಸ' ಎಂದರೆ ಬಟ್ಟೆ ಮಾತ್ರವಲ್ಲ ಹೊಸ ಹೆಸರು, ಹೊಸಭಾಷೆ, ಹೊಸ ನಡವಳಿಕೆ ಇವು ಕೂಡ ಕುಬುಸಗಳೆ. ಇಂಥ ಕುಬುಸಗಳನ್ನು ಸಲೀಸಾಗಿ ತೊಡಲು ಹಪಹಪಿಸುವ ಮಂದಿ ಎದುರು ಬಂಡೆವ್ವಜ್ಜಿಯ ನಡೆನುಡಿಗಳು ವಡ್ಡಟ್ಟಿ ಗ್ರಾಮದಷ್ಟೆ ಸುಸ್ಥಿರವಾದವು. ಮೇಲುನೋಟಕ್ಕೆ ನಗರೀಕರಣ, ನಾಗರಿಕತೆಗಳು ವಿರೋಧಿಯಂತೆ ಕಂಡುಬರುವ ಈ ಕತೆಯ ಒಳಹೊಕ್ಕು ನೋಡಿದರೆ ಬಗೆ ಬಗೆಯ 'ಕುಬುಸ' ತೊಟ್ಟು ನಿಸರ್ಗದಿಂದ ದೂರ ಸಿಡಿದು ಹೋಗುತ್ತಿರುವ ಕೃತ್ರಿಮತೆ ಮತ್ತು ನಿರ್ವೀರ್ಯತೆಗಳನ್ನು ಕೂಡ ಗ್ರಹಿಸಬಹುದಾಗಿದೆ.

ಆದ್ದರಿಂದಲೇ ನಿಸರ್ಗವನ್ನು ಮರೆಮಾಡುವ 'ಕುಬುಸ' ತೊಡಲು ನಿರಾಕರಿಸುವ ಬಂಡೆವ್ವಜ್ಜಿಯ ಒಳತೋಟಿ ಮುಖ್ಯವೆನಿಸುತ್ತದೆ.

**ಮುಳ್ಳು**

'ಮುಳ್ಳು' ಕತೆಯಲ್ಲಿ ನಿರೂಪಕ ಹೇಳುವಂತೆ ಒಳಗಿನ ಎಚ್ಚರವಿಲ್ಲದೆ ಹಲವು ತಲೆಮಾರುಗಳು ಅಥವಾ ಇಡೀ ಮಾನವ ಜನಾಂಗವನ್ನೆ 'ನಿಸರ್ಗದಿಂದ ಬಹುದೂರಕ್ಕೆ ಕೊಂಡೊಯ್ಯುವ ಶಕ್ತಿಯಿರುವುದು ಶಿಕ್ಷಣಕ್ಕೆ. ಮಗುವೊಂದು ಶಿಕ್ಷಣ ಮತ್ತು ನಾಗರಿಕತೆಯ ಪ್ರಕ್ರಿಯೆಗೊಳಪಡುವುದು ಎಂದರೆ ನಿಸರ್ಗದಿಂದ ದೂರ ಸರಿಯುವುದು ಎಂದೇ ಅರ್ಥ. ಈ ದೃಷ್ಟಿಯಿಂದ ನೋಡಿದರೆ ನಾಗರಿಕತೆ ಯಾನವೆಂಬುದು ಮುಳ್ಳುದಾರಿಯ ಪಯಣವೇ ಸರಿ. ಇದನ್ನೇ 'ಮುಳ್ಳು' ಎಂಬ ಕತೆ ಅನನ್ಯವಾಗಿ ನಿರೂಪಿಸಿದೆ. ಗುಣಸಾಗರ ಮತ್ತು ವಿರಾಪುರ ಎಂಬ ಅವಳಿಗ್ರಾಮಗಳ ನಡುವೆ ಒಂದು ಕಾಲದಲ್ಲಿ ಹರಿಯುತ್ತಿದ್ದ 'ರತ್ನಾವತಿ' ಎಂಬ ತೊರೆಯ ಸ್ಥಳ ಪುರಾಣಗಳು ಜಾನಪದ ಐತಿಹ್ಯಗಳು ಪಂಡಿತ ನಿಷ್ಪತ್ತಿಗಳು ಇವುಗಳನ್ನೆಲ್ಲ ವರ್ಣಿಸಿದ ಮೇಲೆ ಪ್ರಸ್ತುತ ಮಾಯವಾಗಿರುವ 'ರತ್ನಾವತಿ'ಯನ್ನು ಕುರಿತು ನಿರೂಪಕ ಹೇಳುವ ಮಾತುಗಳಿವು.

'ಹನ್ನೆರಡು ತಿಂಗಳುಗಳ ಕಾಲವೂ ಮೈಕೈ ತುಂಬಿಕೊಂಡಿರುತ್ತಿದ್ದಳು ರತ್ನಾವತಿ. ಸಕಲಚರಾಚರ ದಾಹ ತಣಿಸುತ್ತಿದ್ದಳು ರತ್ನಾವತಿ. ನೆಲಕ್ಕೆ ಹಸಿರು ಸೀರೆ ಉಡಿಸುತ್ತಿದ್ದಳು ರತ್ನಾವತಿ. ರೈತಾಪಿ ಮಂದಿಯ ಮನೆಯೊಳಗೆ ಕಣಜ ಅಗೇವುಗಳೊಳಗೆ ನಿಟ್ಟು ನಿಟ್ಟು ಕಾಳು

ಕಡಿ ತುಂಬಿರುತ್ತಿದ್ದಳು ರತ್ನಾವತಿ. ಆಕೆ ವಾತ್ಸಲ್ಯಮಯಿ. ಆಕೆಯನ್ನು ಮಂದಿ ಕೊಲೆ ಮಾಡಿಬಿಟ್ಟರು. ನಿರ್ದಾಕ್ಷಿಣ್ಯವಾಗಿ ಕತ್ತು ಹಿಚುಕಿಬಿಟ್ಟರು. ಅವರು ಮಾಡಲಿಕ್ಕೆ ಅವರ ಸ್ವಾಧೀನ ಅಲ್ಲ ಎಲ್ಲ ವಿಧಿಯ ಇಚ್ಛೆ.' ಹೀಗೆ ನದಿಯೊಂದರ ಸಾವಿನಿಂದ ಆರಂಭವಾಗುವ ಈ ಕತೆ ಇದಕ್ಕೆ ಕಾರಣವಾದ ಪರಿಸ್ಥಿತಿಯನ್ನು ಶೋಧಿಸುತ್ತಾ ಸಾಗುತ್ತದೆ. 'ಮುಳ್ಳು' ಕತೆಯ ಪ್ರಕಾರ ನೂಕಜ್ಜನೆಂಬ ಕುರುಬನೋರ್ವನಿಗೆ ಬೀರಪ್ಪನಾಯಕನೆಂಬ ಮಗನಿರುತ್ತಾನೆ. ಈ ಬೀರಪ್ಪನಾಯಕನು ಹೈಸ್ಕೂಲ್, ಕಾಲೇಜು ಶಿಕ್ಷಣಗಳನ್ನೆಲ್ಲ ಪೂರೈಸಿ ಉನ್ನತ ವ್ಯಾಸಂಗಕ್ಕಾಗಿ ಫರಂಗಿ ಸರ್ಕಾರದ ನೆರವಿನಿಂದಲೇ ವಿದೇಶಕ್ಕೆ ಹೋಗಿ ಬರುತ್ತಾನೆ. ಮುಳ್ಳುಗಳನ್ನು ಕುರಿತು ವಿಶೇಷ ಅಧ್ಯಯನ ಮತ್ತು ಸಂಶೋಧನೆ ಮಾಡುವ ಭೀರಪ್ಪನಾಯಕನು 'ಅಂತಾರಾಷ್ಟ್ರೀಯ' ಮುಳ್ಳಿನ ಗಿಡಗಳ ಮಹಾಧಿವೇಶನದಲ್ಲಿ ತಾನು ಕಂಡು ಹಿಡಿದ ವಿಚಿತ್ರವಾದ ಮುಳ್ಳಿನ ಗಿಡದ ಬೀಜಗಳನ್ನು ಪ್ರದರ್ಶನಕ್ಕೆ ಇಡುತ್ತಾನೆ. ಇವನ್ನು ಲೋಕ ಕಲ್ಯಾಣಕ್ಕಾಗಿ ಅಭಿವೃದ್ಧಿಪಡಿಸಬೇಕೆಂಬ ಅಪೇಕ್ಷೆ ಅವನಿಗಿರುತ್ತದೆ. ಮಗನ ಮುಳ್ಳಿನ ತೆವಲಾಟಗಳನ್ನು ಕಂಡು, 'ಮುಳ್ಳಿನ ಗಿಡಗಳು' ಮತ್ತು 'ದಾಸ್ಯ'ಗಳೆರಡೂ ಒಂದೇ ಎಂದು ತಿಳಿದು ನೂಕಜ್ಜ ಮಗನ ವಿರುದ್ಧ ಒಟ್ಟು ವ್ಯವಸ್ಥೆಯ ವಿರುದ್ಧ(ಗಾಂಧಿ ನೇತೃತ್ವದಲ್ಲಿ ಕಾನೂನುಭಂಗ ಚಳುವಳಿಗಳು ನಡೆಯುತ್ತಿದ್ದಂತೆಯೇ ಚಳುವಳಿಗಳನ್ನು ಸಂಘಟಿಸುತ್ತಾನೆ.[೯]

'ಮುಳ್ಳಿನ ಗಿಡಗಳೆಂಬ ಹಸಿರು ಬಣ್ಣದ ದಾವಾನಲ ಗ್ರಾಮಗಳ ಒಳಗೆ, ಹೊರಗೆ ನದಿಯ ಇಕ್ಕೆಲಗಳಲ್ಲಿ ದಾಪುಗಾಲಿರಿಸಿತು. ರಾಣಿಯ ಗರ್ಭದಲ್ಲಿ ನೂರು ತಲೆಯ ರಾಕ್ಷಸ ಬೆಳೆದ ಎಂಬ ಕಥೆ ಇದೆಯಲ್ಲ ಹಾಗೆ ಮುಳ್ಳಿನ ಗಿಡಗಳು ಎಲ್ಲಿ ಬೇಕೆಂದರಲ್ಲಿ ವ್ಯಾಪಿಸಿದವು. ದಾಹ ತಣಿಸಿ ತಣಿಸಿ ರತ್ನಾವತಿ ಸೋತು ಸುಣ್ಣವಾದಳು. ಅವುಗಳ ಬೇರುಗಳ ಚುಂಬನದಿಂದಾಗಿ ಬಾವಿಗಳ ನೀರು ಕಹಿಯಾಯಿತು. ಕೆಲವು ಹಾದಿಗಳು ಅಂತರ್ಧಾನವಾದವು

'ಮುಳ್ಳಿನ ಗಿಡಗಳೆಂಬ ಹಸಿರು ಬಣ್ಣದ ದಾವಾನಲ' ಎಂಬ ಗ್ರೀನ್ ಕ್ಯಾನ್ಸರ್ ಅಥವಾ ಮೋನೋಕಲ್ಚರ್ ತೋಪು ಎಂಬರ್ಥದಲ್ಲಿ ಗ್ರಹಿಸಿದರೆ ಇದರ ಹಿಂದಿರುವ ವನ್ಯಪ್ರಾಣಿಗಳ ನಾಶದ ಅರ್ಥ ಸ್ಫುರಣೆಯಾಗುತ್ತದೆ. ಮೋನೋಕಲ್ಚರ್-ತೋಪು ಎಂಬುದು ಕೇವಲ ಸಸ್ಯಜಗತ್ತಿನ ವಿಸ್ಫುಧ್ಯಮಾನವಲ್ಲ ನಾಗರಿಕತೆಯ ಮಹಾಪ್ರಸ್ಥಾನದಲ್ಲಿ ಆಡಳಿತ ಶಿಕ್ಷಣಗಳೇ ಕಾರಣವಾಗಿ ತಲೆ ಎತ್ತುವ ಏಕರೂಪಕಾತ್ಮಕ ಜೀವನಶೈಲಿ ಕೂಡ ಮೋನೋಕಲ್ಚರ್-ತೋಪು ಎಂದು ಗುರುತಿಸಿಕೊಳ್ಳಬೇಕಾಗಿದೆ. ಕುಂ.ವೀ. ಇಂಥ ಅಕ್ರಮಣಕಾರಿ ಜೀವನ ಶೈಲಿಯನ್ನೇ 'ಮುಳ್ಳು' ಎಂಬ ಶಬ್ದದಲ್ಲಿ ಹಿಡಿಯಲು ಯತ್ನಿಸಿದ್ದಾರೆ. ಆಧುನಿಕ ಶಿಕ್ಷಣವ್ಯವಸ್ಥೆಯ ಟೊಳ್ಳುಗಟ್ಟಿ'ಯನ್ನು ಕುರಿತು ಟಿ.ಪಿ. ಕೈಲಾಸಂ ಬರೆದಿರುವ 'ಮಕ್ಕಳ ಸ್ಕೂಲ್ ಮನೇಲಲ್ಲವೆ' ಎಂಬ ನಾಟಕವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ. 'ನಾವ್ ಅನುಸರಿಸೋ ಇಂಗ್ಲೀಷು ವಿದ್ಯಾಭ್ಯಾಸಕ್ರಮ ಅಂಬೊ

ಪಾತಾಳಗರಡಿಗೆ ಕೊಂಡಿಗಳೇ ಇಲ್ಲ. ಇನ್ನೂ ಗುಣಗಳು ಅಂಬೊ ಬಿಂದಿಗೆಯನ್ನು ಹೊರ ತೆಗೆಯಲು ಹೇಗೆ ಸಾಧ್ಯ? ಎಂಬ ಪ್ರಶ್ನೆ 'ಟೊಳ್ಳುಗಟ್ಟಿ'ಯಲ್ಲಿದೆ. ಆಧುನಿಕ ಶಿಕ್ಷಣವ್ಯವಸ್ಥೆಯಲ್ಲಿ ಪಾತಾಳಗರಡಿಯ ಕೊಂಡಿಗಳಿಗೆ ಬದಲು ನಂಜಿನ ಮುಳ್ಳುಗಳೇ ತುಂಬಿಕೊಂಡಿದೆಯೆಂಬ ಗಾಢವಿಷಾದವನ್ನು ಸೃಷ್ಟಿಸಿರುವ ಕುಂ.ವೀ. ಅವರು ಇದು ಅಂತಿಮವಾಗಿ ತಿರುಗುಬಾಣ ವಾಗುವುದನ್ನು ನಿರೂಪಿಸಿದ್ದಾರೆ. ಬೀರಪ್ಪ ನಾಯಕನ 'ಮುಳ್ಳುಗಿಡಗಳ ಪ್ರಯೋಗಾಲಯ' ದಲ್ಲಿ ಅಡ್ಡಾಡುತ್ತಿದ್ದ ಅವನ ಮಗ ಒಮ್ಮೆ ಅಂಗಾಲಿಗೆ ಮುಳ್ಳು ಚುಚ್ಚಿಸಿಕೊಂಡು ನಂಜೇರಿ ನರಳುತ್ತಾನೆ. ನಗರದ ಪ್ರಸಿದ್ಧ ವಿಷತಜ್ಞರು ಕೂಡ ನಂಜನ್ನು ಇಳಿಸಲಾಗದೆ ಬೀರಪ್ಪ ನಾಯಕರ ಮುದ್ದಿನ ಕುವರ ಪ್ರಾಣಬಿಡುತ್ತಾನೆ. ಇದರಿಂದ ಜ್ಞಾನೋದಯವಾಗಿ ಸರಕಾರಿ ಕೆಲಸಕ್ಕೆ ರಾಜೀನಾಮೆಯಿತ್ತು. 'ಮುಳ್ಳುವಿರೋಧಿ ಪ್ರತಿಷ್ಠಾನ'ವೊಂದನ್ನು ಸ್ಥಾಪಿಸುತ್ತಾನೆ. ಮುಳ್ಳಿನ ವಿರುದ್ಧ ಹೋರಾಡುವವರಿಗೆ ಪ್ರೋತ್ಸಾಹ, ಬಹುಮಾನ, ಫೆಲೊಶಿಪ್ ಇತ್ಯಾದಿಗಳನ್ನು ನೀಡಲಾಗುತ್ತದೆ.

'ಮುಳ್ಳುವಿರೋಧಿ ಪ್ರಶಸ್ತಿಗೆ ಪಾತ್ರರಾಗುವ ಶಿವರಾಮ ಶಾಸ್ತ್ರಿಗಳು ಅದನ್ನು ಪಡೆಯಲು ತಿರಸ್ಕರಿಸುತ್ತಾರೆ. ಕತೆಯ ಕೊನೆಯಲ್ಲಿ ಮುಳ್ಳಿನ ಸಂಸ್ಕೃತಿಯ ತಾಯಿಬೇರುಗಳು ತಮ್ಮ ಗ್ರಾಮ ಗಳಲ್ಲಿದೆ ಎಂದು ಮಾತ್ರ ಹೇಳುವುದಿಲ್ಲವೆಂಬುದೆ ಸೋಜಿಗದ ಸಂಗತಿಯೆಂಬ ಮಾತಿದೆ.

**'ಕ್ರಮ'** ಎಂಬ ವಿಶಿಷ್ಟ ಕಾಲ್ಪನಿಕ ಕಥೆ ಕುಂ.ವೀ ಅವರಂಥವರಿಗೆ ಮಾತ್ರ ಸಾಧ್ಯವೇನೋ ಎನ್ನುವಂತಿದೆ. ಮನುಷ್ಯ ಸಂಪರ್ಕವೆಂಬ ಅಪವಿತ್ರ ಮೈತ್ರಿಯ 'ನೆರಳು'ಗಳು, ಕೃತಕ ನಡೆ–ನುಡಿಗಳೆಂಬ 'ಕುಬುಸ'ಗಳು ಆಡಳಿತ ಮತ್ತು ಶಿಕ್ಷಣವ್ಯವಸ್ಥೆಯೆಂಬ ಮುಳ್ಳುಗಳು ಇವುಗಳಿಂದ ಇಡಿ ಕಿರಿದ ಮನುಕುಲದ ಕ್ರಮ ಅಲ್ಪ. ಇದಕ್ಕಾಗಿ ಘನಸರ್ಕಾರ ಕೈಗೊಳ್ಳುವ ಸೂಕ್ತಕ್ರಮ ಗಳನ್ನು ಒಟ್ಟೊಟ್ಟಿಗೆ ಹೇಳುವ ಕತೆಯೇ 'ಕ್ರಮ'. ನಿಸರ್ಗದ ನೇರವಾದ ಅನುಭವವೇ ಇಲ್ಲದ ನಾಗರಿಕರ ನಿರ್ವೀರ್ಯತೆ ಮತ್ತು ಮೃಗಭೀತಿ(impotency and zoo phobia)ಗಳನ್ನು ಕಥನ ಮಾಡಿರುವ ಕುಂ.ವೀ. ಅವರ ಕಲ್ಪಕಶಕ್ತಿಯ ಧಾತು ಮತ್ತು ಧೋರಣೆಗಳನ್ನು 'ಕ್ರಮ'ವೆಂಬ ಕತೆಯಲ್ಲಿ ಮನಗಾಣಬಹುದು. ನಗರವೆಂಬ 'ಜೂ'ನಲ್ಲಿ ಬೆಳೆಯುತ್ತಾ ನಿಸರ್ಗದಿಂದ ದೂರ ಸಿಡಿದ ನಾಗರಿಕ ಇತಿಮಿತಿಗಳು, ಯಾಂತ್ರಿಕವಾದ ಬದುಕು ಸಸ್ಯಗಳು ಮತ್ತು ಪ್ರಾಣಿಜಗತ್ತಿನ ಸೋದರ ಸ್ನೇಹವಿಲ್ಲದೆ ನಿರ್ವೀರ್ಯಗೊಂಡಿರುವ ನಾಗರಿಕರ ಮನಸ್ಸುಗಳನ್ನು ಸಹಜಸ್ಥಿತಿಗೆ ತರಲು ಸರ್ಕಾರವು ಕೈಗೊಳ್ಳುವ ಕ್ರಮಗಳೇ ಇಲ್ಲಿ ಕತೆಯಾಗಿ ಅರಿಕೆಗೊಂಡಿವೆ. ನಾಗರಿಕರಿಗಾಗಿ ಇಲ್ಲಿ ಮೃಗಶಾಲೆಯೊಂದನ್ನು ತೆರೆದು ಪಕ್ಷಿ ಪ್ರಾಣಿಗಳೊಡನೆ ನಾಗರಿಕರ ಪ್ರಪ್ರಥಮ ಭೇಟಿಯನ್ನು ಏರ್ಪಾಡು ಮಾಡುವುದು, ಮೃಗಭೀತಿಯಿಂದ ತತ್ತರಿಸುವ ನಾಗರಿಕರು ಮೃಗವೀಕ್ಷಣೆಯ ನಕಲಿ ಸರ್ಟಿಫಿಕೇಟ್‌ಗಳನ್ನು ಪಡೆಯುವುದು, ನಕಲಿ ಸರ್ಟಿಫಿಕೇಟುಗಳ ವಿತರಣೆಯ ಬೃಹತ್ ಜಾಲವನ್ನು ನಿಯಂತ್ರಿಸಲು ವಿಫಲವಾಗುವ ಸರ್ಕಾರ ಮಿಲಿಟರಿ ಕಾರ್ಯಾಚರಣೆ ಕೈಗೊಳ್ಳುವುದು,

ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡುವ ಮಿಲಿಟರಿಯವರು ಮೃಗಶಾಲಾ ವೀಕ್ಷಣೆಯನ್ನು ಕಡ್ಡಾಯ ಗೊಳಿಸುವುದು ಮುಂತಾದ ವಿವರಗಳಿವೆ. ಜಿರಲೆ ಕಂಡರೂ ಹೆದರಿಕೊಳ್ಳುವ ನಾಗರಿಕರು ಮೃಗಶಾಲೆಯಲ್ಲಿರುವ ಪ್ರಾಣಿಗಳ ಸಿನುಗು, ವಾಸನೆ ರೂಪಗಳಿಗೆ ಅಸಹ್ಯ ಪಟ್ಟುಕೊಂಡು ವಾಂತಿ ಮಾಡಿಕೊಳ್ಳುತ್ತಾರೆ. ಕೊನೆಗೆ ಪುಟ್ಟ ಬಾಲಕನೊಬ್ಬ ಹುಲಿ ಎಂದರೇನೆಂಬುದನ್ನು ತಿಳಿಯದೆ ಹುಲಿಯ 'ಗೊಂಡೇವುಬಾಲ'ದೊಂದಿಗೆ ಆಟವಾಡುತ್ತಿರುವುದನ್ನು ಕಂಡು ಎಲ್ಲಾ ನಾಗರಿಕರು ಮೃಗಭೀತಿಯಿಂದ ಪಾರಾಗುವರಲ್ಲದೆ, ಪ್ರವೇಶಿಸಲು ಹಿಂಜರಿಯುತ್ತಿದ್ದ ಮೃಗಶಾಲೆಯೊಳಕ್ಕೆ ಧಾವಿಸುತ್ತಾರೆ. ಚಿಣ್ಣರ ಮಸಿ ಇಲ್ಲದ ಮನಸ್ಸು ನಾಗರಿಕರ ಮನೋವಿಕಾರಗಳಿಗೆ ನಿಸರ್ಗಸಹಜ ಕ್ರಮವೆಂಬ 'ಧ್ವನಿ'ಯೊಂದಿಗೆ ಕತೆ ಮುಗಿಯುತ್ತದೆ.

### ಮೃತ್ಯು

'ಮೃತ್ಯು' ಎಂಬ ಕಥೆಯಲ್ಲಿ ಕುಂ.ವೀ. ಅವರು ಸಾಹಿತ್ಯ ಕಲಾಪದ ವಿವಿಧ ಮುಖಗಳನ್ನು ಅನಾವರಣಗೊಳಿಸಿದ್ದಾರೆ. 'ಮೃತ್ಯುವಿನ ಬಗೆಗೆ ಒಂದು ಬೃಹತ್ ಕಾದಂಬರಿ ಬರೆಯುವ ಯೋಚನೆ ಶಾರದೆಗಿರುತ್ತದೆ. ಶಾರದೆಗೆ ಮೃತ್ಯುವಿನ ಅನುಭವಗಳು ಮನೆಯಲ್ಲಿರುವ ಮುದುಕಿಯಿಂದಾರಂಭಿಸಿ ನೆರೆಮನೆಯ ಚೊಚ್ಚಲ ಬಸುರಿ ಶಾಂತಾ, ಹತ್ತರ ಪ್ರಾಯದ ತನ್ನ ಮಗ ಇವರೆಲ್ಲರ ಸಾವುಗಳಿಂದ ಆಗುತ್ತಿರುತ್ತವೆ. ಈ ಹಂತದಲ್ಲಿ ಶಾರದೆ ತನ್ನ ಮನಸ್ಸಿನಲ್ಲಿ ಮೃತ್ಯು ಎಬ್ಬಿಸುತ್ತಿದ್ದ ಸುಂಟರಗಾಳಿಯನ್ನು ಕಥೆ ಕಾದಂಬರಿಯಂಥ ಸೃಜನಶೀಲ ಬರಹಗಳ ಮೂಲಕ ಅಭಿವ್ಯಕ್ತಿಸುತ್ತಿರುತ್ತಾಳೆ. ಕ್ರಮೇಣ ಮೃತ್ಯುವನ್ನು ತನ್ನೊಳಗೆ ಆವಾಹನೆ ಮಾಡಿಕೊಂಡಂತೆ ಶಾರದೆ ಕಂಡುಬರುತ್ತಾಳೆ. 'ಕೆಲವಾರು ಸೀಳುಗಳಿದ್ದ ನಿಲುಗನ್ನಡಿ ಮುಂದೆ ನಿಂತು ತನ್ನನ್ನು ತಾನು ನೋಡಿಕೊಳ್ಳುತ್ತಿದ್ದಳು. ಗುಲಾಬಿಗೆನ್ನೆಗಳಿದ್ದ ಜಾಗದಲ್ಲಿ ತಗ್ಗುಗಳಿರುವುದನ್ನು ಗುರುತಿಸುತ್ತಿದ್ದಳು. ಆ ತಗ್ಗುಗಳು ವೈಶಂಪಾಯನ ಸರೋವರಗಳಾಗಿರುವುದನ್ನು ಆ ಸರೋವರಗಳಲ್ಲಿ ಸರೋಜ ಗಳಿರುವುದನ್ನು ಆ ಸರೋಜಗಳ ಒಂದೊಂದು ದಳದ ಮೇಲೂ ಕಾಗೆಗಳ ನೆರಳಿರುವುದನ್ನೂ ಗುರುತಿಸಿಕೊಳ್ಳುತ್ತಿದ್ದಳು(ಪು. ೮೦೭).

ಕೊನೆಕೊನೆಗೆ ಶಾರದೆ ಮೃತ್ಯುವನ್ನೇ ಬದುಕುತ್ತಿರುತ್ತಾಳೆ. ಮಲಗಿ ನಿದ್ರಿಸುತ್ತಿರುವ ಮೃತ್ಯುವಿನಂತೆ ಗಂಡ ಕಾಣುತ್ತಾನೆ. ತನ್ನಿಂದ ಕವಲೊಡೆದ ಮಗಳು ಮಂಜುಳಾ ತನ್ನ ಕೈಯಲ್ಲಿರುವ ಮೃತ್ಯುವಿನಂತೆ ಕಾಣುತ್ತಾಳೆ. ಸತ್ತುಹೋದ ಮಗಳ ಕಳೇಬರವನ್ನು ಕೈಯಲ್ಲಿಟ್ಟುಕೊಂಡು ಶಾರದೆ ತನ್ನ ಬೆತ್ತಲೆ ದೇಹವನ್ನು ತಾನೇ ಪರೀಕ್ಷಿಸಿಕೊಳ್ಳುತ್ತಾಳೆ. "ಒಂದು ಕೈಯಿಂದ ಕಳೇಬರ ಅವುಚಿಕೊಂಡು ಇನ್ನೊಂದು ಕೈಯ ಬೆರಳುಗಳಿಂದ ತನ್ನ ದೇಹದ ಹಲವು ಕಡೆ ಒತ್ತಾಗಿರುವ ಮಾಂಸ ಖಂಡಗಳನ್ನು ಹಿಚುಕಿ ಅವುಗಳಿಗೆ ಇನ್ನೂ ಸ್ಥಿತಿಸ್ಥಾಪಕ ಗುಣ ಇರುವುದನ್ನು

ಖಚಿತ ಪಡಿಸಿಕೊಂಡು ಭಯಪಟ್ಟಳು. ಒಂದು ಗಂಡಸಿನ ಹೆಂಡತಿಯಾಗಿ ಒಂದು ದಶಕದ ಪರ್ಯಂತರ ಸ್ವತಂತ್ರ ಅಸ್ತಿತ್ವ ಕಂಡುಕೊಳ್ಳಲು ಹೆಣಗಾಡಿದಾಗ್ಯೂ ತನ್ನ ದೇಹದಲ್ಲಿ ಇನ್ನೂ ಮಾಂಸ ಇರುವುದು ಗೊತ್ತಾಗಿ ಆಕೆಗೆ ಆಶ್ಚರ್ಯವಾಯಿತು"[೧೦](ಪು-೮೦೭). ಇಲ್ಲಿ ಮೃತ್ಯು ವಿನಂತಿರುವ ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆಯ ವಿಡಂಬನೆಯಿರುವುದು ಸುಸ್ಪಷ್ಟ. ಒಂದು ಸಮಾಜದ ಮೇಲುರಚನೆ ಎನ್ನಬಹುದಾದ ಸಾಹಿತ್ಯಕ ಮತ್ತು ಸಾಂಸ್ಕೃತಿಕ ವಾತಾವರಣವೂ ಅಷ್ಟೆ. ಇದು ಕೂಡ ಮೃತ್ಯುಸಮಾನವಾಗಿರುವುದು ಶಾರದೆಗೆ ಅರಿವಾಗುತ್ತದೆ. ಕೊನೆಗೆ, ಶಾರದೆಯನ್ನು ಬಲಾತ್ಕಾರವಾಗಿ ದೊಡ್ಡ ಬಂಗಲೆಯೊಳಕ್ಕೆ ಕರೆದೊಯ್ಯುವ ವ್ಯಕ್ತಿಗಳು, ಅಲ್ಲಿ ಕಾಣುವ ವಿವಿಧ ದೃಶ್ಯಗಳು, ಕೇಳಿ ಬರುವ ಚರ್ಚೆಗಳು, ವಾದ ವಿವಾದಗಳು, ರಾಜಕೀಯ ವ್ಯಕ್ತಿಗಳ ಆಗಮನಗಳು, ಬಂಗಲೆಯಲ್ಲಿರುವ ಕೃಪಾಪೋಷಿತರಾದ ಸಾಹಿತಿಗಳು – ಎಲ್ಲರೂ ಶೋಷಣೆಯ ಪ್ರತೀಕದಂತಿರುವ 'ಶಾರದೆ'ಯನ್ನು ಚರ್ಚೆಗೆತ್ತಿಕೊಳ್ಳುತ್ತಾರೆ. ಇವೆಲ್ಲ ಮೃತ್ಯುವನ್ನು ಕುರಿತ ಶುಷ್ಕ ಚರ್ಚಾಗೋಷ್ಠಿಗಳು, ಅರ್ಥಹೀನ ಅಧ್ಯಯನಗಳು. ಈ ಕತೆಯಲ್ಲಿ ಕುಂ.ವೀ. ಸಾಹಿತ್ಯ ಕಲಾಪದ ವಿವಿಧ ಮುಖಗಳನ್ನು ಅನಾವರಣಗೊಳಿಸಿದ್ದಾರೆ. ೧. ಮೃತ್ಯುವಿನ ಅನುಭವಗಳನ್ನು ಅಭಿವ್ಯಕ್ತಿಸುವುದು, ೨. ಮೃತ್ಯುವಿನ ಆವಾಹನೆಯಾಗುವುದು. ೩. ಮೃತ್ಯುವನೇ ಬದುಕುವುದು, ೪. ಮೃತ್ಯುವನ್ನು ಚರ್ಚೆಗೆತ್ತಿಕೊಂಡು ಅಧ್ಯಯನ ಮಾಡುವುದು.

ಹೀಗೆ ಕುಂ.ವೀ. ಅವರು ಮೃತ್ಯುವನ್ನು ಸಾಹಿತ್ಯಕ್ಕೆ ಎಳೆದು ತಂದು ಅಲ್ಲಿ ಕಾಣುವ ಹಲವು ಮುಖಗಳ ಅನಾವರಣವನ್ನು ಮಾಡಿದ್ದಾರೆ.

**೪.೧.೩. ಸ್ತ್ರೀಸಂವೇದನೆ ಇರುವ ಕಥೆಗಳು**

ಅನಾದಿಕಾಲದಿಂದಲೂ ಬಾಯಿಂದ ಬಾಯಿಗೆ ಹರಿದು ಬಂದ ಹಾಗೂ ಇಡೀ ಜಾಗತಿಕ ಸಾಹಿತ್ಯದ ತಾಯಿಬೇರಾದ ಜನಪದ ಸಾಹಿತ್ಯದಲ್ಲೂ ಅನೇಕ ಸಾಮಾನ್ಯ ಸ್ತ್ರೀಯರು ತಮ್ಮ ಮನದ ಬೇಗುದಿಯನ್ನು ತಾವು ಬದುಕಿದ ಸ್ಥಿತಿಗತಿಗಳನ್ನು ಜಾನಪದ ಹಾಡುಗಳಲ್ಲಿ ಹೆಣೆದಿದ್ದಾರೆ. ಅಂದಿನ ಸಂಪ್ರದಾಯದ ಸಂಕೋಲೆಯೊಳಗೆ ಸಿಲುಕಿ ನರಳಿದ ಹೆಣ್ಣು ಕರಾರುವಕ್ಕಾಗಿ ಸರಳ ಭಾಷೆಯಲ್ಲಿ ಜೀವನಚಿತ್ರಣ ನೀಡಿರುವುದನ್ನು ಗಮನಿಸಿದರೆ ಆಕೆಯ ಪರಾವಲಂಬಿತನ, ಅಸಹಾಯಕತೆ, ಆಕ್ರೋಶಗಳೆಲ್ಲಾ ತಣ್ಣನೆಯ ಭಾಷೆಯಲ್ಲಿ ವ್ಯಕ್ತವಾಗಿದೆ. ಇದು ಅಂದಿನ ಮಹಿಳೆ ಮೌಖಿಕ ಕಾವ್ಯದ ಮೂಲಕ ಹಕ್ಕು ಮತ್ತು ಬಿಡುಗಡೆಯ ಕಾವ್ಯಾಭಿವ್ಯಕ್ತಿಯ ಹಿಂದಿನ ಪ್ರೇರಣೆ.

ದುಡಿಯುವ ವರ್ಗದ ಮಹಿಳೆಯರು ಯಜಮಾನ ಸಂಸ್ಕೃತಿಯ ಬರ್ಬರತೆಯನ್ನು ಪ್ರತಿಭಟಿಸುತ್ತಲೇ ತಮ್ಮ ದುಡಿಮೆಯ ಮೂಲಕ ಸ್ವತಂತ್ರ ಬದುಕಿಗೆ ಹಂಬಲಿಸಿರುವರು.

ಧರ್ಮ-ಕರ್ಮದ ಒತ್ತಡದಲ್ಲಿ ಸಿಲುಕಿದ ಈ ವರ್ಗದ ಮಹಿಳೆಯರು ಸಂಘಟಿತ ಶಕ್ತಿ ಹೊಂದಲು ಸಾಧ್ಯವಿಲ್ಲ. ಹೀಗಾಗಿ ವ್ಯಕ್ತಿಗತ ನೆಲೆಯಲ್ಲಿ ನಿಂತೇ ಪ್ರತಿಭಟಿಸಿದ, ಪ್ರಶ್ನಿಸಿದ ಪ್ರಸಂಗಗಳು ಮೌಖಿಕ ಪರಂಪರೆಯಲ್ಲಿ ಸ್ತ್ರೀಪರ ಸಿದ್ಧಾಂತವಾಗಿ ಉಳಿಯಲು ಸಾಧ್ಯವಾಗಿದೆ. ಇಂತಹ ಮೌಖಿಕ ಸಿದ್ಧಾಂತವನ್ನು ಅಕ್ಷರಸ್ಥ ಲೋಕ ಅರಿಯದೆ ಇರುವುದರಿಂದ ನಮ್ಮ ಜನಪದರ 'ಅನುಭವದ ಅಮೃತ' ಹಾಗೆ ಉಳಿದಿದೆ. ಪಿತೃಸತ್ತೆಯ ದೌರ್ಜನ್ಯಕ್ಕೆ ಸಿಕ್ಕ ಸಾಮಾನ್ಯ ದುಡಿಯುವ ವರ್ಗದ ಮಹಿಳೆಯರು ಪ್ರತಿಕ್ರಿಯಿಸಿದ ರೀತಿ ಇಂದಿನ ನಮ್ಮ ಮಹಿಳಾ ಚಳುವಳಿ ಸಿದ್ಧಾಂತಕ್ಕೆ ಭದ್ರ ನೆಲೆಗಟ್ಟಾಗಬೇಕು. ಜನಪದ ಮಹಿಳೆ ಯಜಮಾನ ಸಂಸ್ಕೃತಿಯ ಕಾರ್ಯ, ಹಿಂಸೆಯನ್ನು ಪ್ರತಿಭಟಿಸಿ ಪರ್ಯಾಯ ಬದುಕನ್ನು ಕಂಡುಕೊಂಡ ರೀತಿಯನ್ನು ವ್ಯಕ್ತಪಡಿಸಿದ ರೀತಿಯಂತಿರುವ ಈ ತ್ರಿಪದಿಯನ್ನು ನೋಡಬಹುದಾಗಿದೆ. 'ಹರಕೊಳೊ ನಿನ್ನ ಗುಳದಾಳಿ ಹರಕೊಳೋ ನಿನ್ನ ಗುಳಿದಾಳಿ ಸರಕಾರದ ಮಗಳಾಗಿ ಇರತೀನಿ ಎಲೆ ರಾಯ' ಎಂಬುದನ್ನು ಇಂದಿನ ವಿದ್ಯಾವಂತ ಮಹಿಳೆಯರು ಅರಿಯಬೇಕು. ಇಲ್ಲಿ ಸರಕಾರದ ಮಗಳೆಂದರೆ ಆಕೆಯ ದುಡಿಮೆ. ಸ್ವಾವಲಂಬಿ ಬದುಕಿಗೆ ಮೂಲವಾದ ದುಡಿಮೆಯನ್ನು ಅರ್ಥಪೂರ್ಣವಾಗಿ ಕಂಡ ಇಂತಹ ರೀತಿ ಮಾದರಿಯಾಗಬೇಕು. ಅಂದಿನಿಂದ ಇಂದಿನವರೆಗೂ ಹೆಣ್ಣನ್ನು ಧರ್ಮ ಸಂಸ್ಕೃತಿಯ ಹೆಸರಿನಲ್ಲಿ ಶೋಷಿಸುತ್ತ ಬರಲಾಗಿದೆ. ಇದರ ಜೊತೆಗೆ ಜಾಗತೀಕರಣದ ಹೊಸ ಆರ್ಥಿಕ ಮೂಲದ ಶೋಷಣೆಯ ವಿಧಾನವೊಂದು ಹುಟ್ಟಿಕೊಂಡಿದೆ.

ಸಾಮ್ರಾಜ್ಯಶಾಹಿ ಪ್ರೇರಿತ ಆರ್ಥಿಕ ನೀತಿಯಲ್ಲಿ ಹೆಣ್ಣು ಗ್ರಾಹಕಸಂಸ್ಕೃತಿಯ ತೃಪ್ತಿಗಾಗಿ ಹೊಸ ಅವತಾರದಲ್ಲಿ ಕಾಣಿಸಿಕೊಂಡಿದ್ದಾಳೆ. ಭಾರತದಲ್ಲಿ ಜಾತಿ ಮತ್ತು ಮೈಬಣ್ಣ ವ್ಯಕ್ತಿಯನ್ನು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಹೀನಾಯವಾಗಿ ಕಾಣುವ ಪ್ರಮುಖ ಲಕ್ಷಣಗಳು. ಬಿಳಿಯ ಬಣ್ಣ ಪಶ್ಚಿಮದಿಂದ ಆಮದುಗೊಂಡದ್ದಲ್ಲ. ಆರ್ಯರ ತೆವಲಿನ ಮೂಲಕ ಉಳಿದುಕೊಂಡದ್ದು. ದುಡಿಯಲಾರದ ವರ್ಣವೊಂದು ಬಿಳಿ ಮೈ ಬಣ್ಣದ ಜನ ಸಮುದಾಯವಾಗಿ ಬೆಳೆಯಿತು. ಅದು ಶ್ರೇಷ್ಠತೆಯ ಗುತ್ತಿಗೆಯನ್ನು ಹಿಡಿದು ಮೂಲನಿವಾಸಿಗಳನ್ನು ತನ್ನ ಒಡೆತನದಲ್ಲಿರುವ ಅಕ್ಷರದ ಅಸ್ತ್ರದ ಮೂಲಕ ನಿರಂತರ ದೂರವಿಟ್ಟು ನಿಯಂತ್ರಿಸುತ್ತಾ ಬಂದಿದೆ. ಇದಕ್ಕಾಗಿ ಧರ್ಮ ಕರ್ಮವನ್ನು ಹುಟ್ಟುಹಾಕಿತು. ಬಹುಕಾಲದಿಂದಲೂ ಸುಂದರವಾದ ಸ್ತ್ರೀಯರನ್ನು ಪ್ರಭುತ್ವ ತನ್ನ ಸ್ವಾರ್ಥಕ್ಕಾಗಿ ಬಳಸಿಕೊಂಡಿದೆ. ಹೀಗೆ ಬಳಸಿಕೊಳ್ಳುವುದನ್ನು ಪುರೋಹಿತಶಾಹಿ, ಜಾತಿಕಾರಣಕ್ಕಾಗಿ, ಲಿಂಗಕಾರಣಕ್ಕಾಗಿ ಧರ್ಮ ಸಮ್ಮತಗೊಳಿಸಿದೆ. ಇದೇ ಆಶಯ ಜಾಗತಿಕ ಪ್ರಭುಗಳಲ್ಲಿಯೂ ಇರುವುದರಿಂದ ಮಹಿಳೆಯನ್ನು ಸರಕುಸಂಸ್ಕೃತಿಯಲ್ಲಿ ಸೇರಿಸಲಾಗಿದೆ.

ಇಂದು ಮಹಿಳೆ ಅಕ್ಷರಸ್ಥಳಾಗುವುದು ಆಕೆಯ ಸ್ವಾಭಿಮಾನದ ಬದುಕಿಗಾಗಿಯಲ್ಲ. ಅಕ್ಷರಸ್ಥಳಾದ ಮಹಿಳೆಗೆ ಆರ್ಥಿಕ ಸ್ವಾವಲಂಬನಕ್ಕಾಗಿ ಸಿಗಬೇಕಾಗಿದ್ದ ಉದ್ಯೋಗದ ಅವಕಾಶಗಳೆಲ್ಲ ಕಡಿಮೆಯಾಗುತ್ತಿವೆ. ಖಾಸಗಿ ಒಡೆತನದ ಬಂಡವಾಳ ಪ್ರಾಯೋಜಿತ ಉದ್ಯೋಗಗಳು ಮೆರಿಟ್ ಎಂಬ ಗುಮ್ಮನನ್ನು ಮುಂದಿಟ್ಟು ಸಾಮಾಜಿಕ ನ್ಯಾಯದ ಹಕ್ಕನ್ನೇ ಅಪ್ರಸ್ತುತಗೊಳಿಸುತ್ತಿದೆ. ಇಂದಿನ ಉದ್ಯೋಗ ಮಹಿಳೆಯಿಂದ ಬಯಸುತ್ತಿರುವುದು ಅವಳಲ್ಲಿಯ ಜ್ಞಾನ, ಕ್ರಿಯಾಶೀಲತೆ, ಬೌದ್ಧಿಕ ದಕ್ಷತೆಯನ್ನಲ್ಲ. ಅದಕ್ಕೆ ಬೇಕಾಗಿರುವುದು ತಾನು ಉತ್ಪಾದಿಸಿದ ವಸ್ತುಗಳಿಗೆ ಸಂತೆಯಲ್ಲಿ ಜಾಗ ಕಲ್ಪಿಸುವುದು. ಇಂತಹ ಸಂತೆಯಲ್ಲಿ ಜನರನ್ನು ಹಿಡಿದಿಡುವುದು ಶತಮಾನದಿಂದ ನಂಬಿರುವ ಹುಸಿಸೌಂದರ್ಯದ ಭ್ರಮೆಗಳಿಂದ ಮಾತ್ರ ಸಾಧ್ಯ. ಹುಸಿಸೌಂದರ್ಯದ ಕಾರಣಗಳಿಂದ ಬಿಳಿಯ ಬಣ್ಣಕ್ಕೆ ತೆಳು ದೇಹಕ್ಕೆ ವಿಶ್ವ ಮಾರುಕಟ್ಟೆಯಲ್ಲಿ ಎಲ್ಲಿಲ್ಲದ ಬೇಡಿಕೆ ಇದೆ. ಈ ಎರಡು ಲಕ್ಷಣಗಳು ದುಡಿಯುವ ವರ್ಗದ ಮಹಿಳೆಯರಲ್ಲಿ ಇರಲು ಸಾಧ್ಯವೇ ಇಲ್ಲ. ಹೀಗಾಗಿ ಇಂದು ಜಾಗತಿಕ ಪ್ರಭುಗಳ ಪ್ರಾಯೋಜಿತ ಉದ್ಯೋಗಗಳೆಲ್ಲ ಶತಮಾನದಿಂದ ಬಿಸಿಲು ಮಳೆಯಲ್ಲಿ ಕಾಲಿಡದ ಪುರೋಹಿತಶಾಹಿಯ ನೆರಳಲ್ಲಿ ಅರಳಿದ ಕಮಲ ಕನ್ನೆಯರಿಗೆ ದಕ್ಕುತ್ತಿವೆ. ಇಂದು ಮಹಿಳೆಗೆ ಸ್ವಾತಂತ್ರ್ಯ ಬೇಕಾಗಿದೆ. ಅದು ಎಂತಹ ಸ್ವಾತಂತ್ರ್ಯವೆಂದರೆ ಆರ್ಥಿಕ, ರಾಜಕೀಯ ಕ್ಷೇತ್ರಗಳಲ್ಲಿ ಆಕೆಯ ಆಯ್ಕೆಗನುಗುಣವಾಗಿ ಇಂತಹ ಅವಕಾಶ ಲಭ್ಯವಾದರೆ ತನ್ನಿಂದ ತಾನೇ ಸಮಾನತೆಯೆಂಬುದು ಕಾಣಿಸಿಕೊಳ್ಳಬಹುದು.

ಎರಡನೆಯದಾಗಿ ಹೆಣ್ಣು ತಮ್ಮ ಅಸ್ತಿತ್ವದ ಹುಡುಕಾಟದ ನೆಲೆಯಲ್ಲಿ ಆದ ಸೂಕ್ಷ್ಮ ಬದಲಾವಣೆ, ನಿರ್ವಹಿಸಬೇಕಾದ ಪಾತ್ರ ಕುರಿತು ನಡೆಸಿದ ಮಂಡನೆ ಹಾಗೂ ಆಧುನಿಕ ಯುಗದಲ್ಲಿ ಬದಲಾದ ಹಳೆಯ ಮೌಲ್ಯ ಮತ್ತು ನಂಬಿಕೆಗಳೊಂದಿಗೆ ಪಲ್ಲಟಗೊಂಡ ಅವಳ ಸಾಮಾಜಿಕ ಸ್ಥಾನ ಮಾನಗಳು ಹಾಗೂ ಆ ಬಗೆಗಿನ ತೊಂದರೆಗಳ ಕುರಿತಾದದ್ದು. ಕ್ರಿ.ಶ. ೨೦ನೇ ಶತಮಾನದ ಪ್ರಾರಂಭದಲ್ಲಿ ಜೀವಿಸಿದ್ದ ಕೇಶವಸುತ, ತಂಬ್ಲೆ, ಜೂಲಿಯನ್ ಮತ್ತಿತರರ ಕೃತಿಗಳಲ್ಲಿ ಹೆಣ್ಣು ಮಹತ್ವದ ಸ್ಥಾನ ಪಡೆದುಕೊಂಡಿದ್ದಲ್ಲದೆ ಆಕೆಯ ಸುತ್ತಮುತ್ತ ಇವರ ಸಾಹಿತ್ಯ ಸೃಷ್ಟಿಯಾಗಿದೆ. ಪಶ್ಚಿಮದಿಂದ ಹರಿದು ಬಂದ ಚಿಂತನೆ, ಶಿಕ್ಷಣದಲ್ಲಿ ಆದ ಬದಲಾವಣೆ ಈ ಸಾಹಿತ್ಯ ಸೃಷ್ಟಿಯ ಹಿಂದಿನ ಪ್ರೇರಣೆ. ಇವರ ಕಾವ್ಯಗಳಲ್ಲಿ ಹೆಣ್ಣು ಕೇವಲ ಶಕ್ತಿದೇವತೆ ಅಥವಾ ಭೋಗ ವಸ್ತುವಾಗದೆ, ಪುರುಷನ ನಿಜ ಸಂಗಾತಿಯಾಗಿ ದಾಂಪತ್ಯದಲ್ಲಿ ಜೊತೆ ಜೊತೆಯಾಗಿ ಹೆಜ್ಜೆ ಹಾಕುವ ಗಂಡಿನ ಸಮಾಜ ಸ್ಥಾನ ಕಲ್ಪಿಸಿಕೊಟ್ಟಿದ್ದಾರೆ.

“ಮಾಡೇಕರ್ ಹೆಣ್ಣಿನ ಬಗ್ಗೆ ಈವರೆಗೆ ಬರೆದವರಿಗಿಂತ ಭಿನ್ನವಾದ ಹಾದಿ ತುಳಿದು ಸಂಪ್ರದಾಯಕ ಚಿಂತನೆಗಳನ್ನು ಧಿಕ್ಕರಿಸಿ ಅವಳ ದೈಹಿಕ ಬಾಹ್ಯ ಸೌಂದರ್ಯ ಕುರಿತ ಚಿಂತನೆ

ಯನ್ನು ಬದಿಗಿಟ್ಟು ಹೆಣ್ಣಿನ ಬಗ್ಗೆ ಹೊಸ ಚಿಂತನೆಯನ್ನು ಪ್ರಾರಂಭಿಸಿದರು. ೨೦ನೇ ಶತಮಾನದಲ್ಲಿ ಉಂಟಾದ ಕೈಗಾರಿಕಾ ಕ್ರಾಂತಿ ಇದರ ಫಲವಾಗಿ ಸಮಾಜದ ಬದಲಾವಣೆ ಈ ಸ್ಥಿತಿಯಲ್ಲಿ ಹೆಣ್ಣು ಎದುರಿಸಬೇಕಾದ, ಎದುರಿಸಿದ ಹೊಸ ಸವಾಲುಗಳನ್ನು ಚಿತ್ರಿಸಿದ್ದಾರೆ. ಇದರ ಚಿಂತನೆ ಕೃತಿಗಳಲ್ಲಿ ಕೇವಲ ಹೆಣ್ಣೊಂದೇ ಮುಖ್ಯವಾಗಿರದೇ ಕೈಗಾರಿಕಾ ಸಮಾಜದಲ್ಲಿ ಬದಲಾದ ಮಾನವೀಯ ಸಂಬಂಧಗಳ ಹಿನ್ನೆಲೆಯಲ್ಲಿ ಗಂಡು ಹೆಣ್ಣಿನ ನಡುವಿನ ಸಂಬಂಧ ಸಾಮಾಜಿಕ ಮೌಲ್ಯಗಳೆಲ್ಲವೂ  ಚರ್ಚಿತವಾಗಿದೆ.

ಆಧುನಿಕ ಯುಗದ ಅನೇಕ ಮರಾಠಿ ಕವಯಿತ್ರಿಯರು ಇತ್ತೀಚಿನ ದಿನಗಳಲ್ಲಿ ಮಹಿಳೆಯರ ಮೇಲಿನ ವಿಷಯಗಳತ್ತ ಬೆಳಕು ಚೆಲ್ಲಿದ್ದು ಗಮನಾರ್ಹವಾದುದು. ಇಂದಿರಾಸುತ, ರಜನಿ ಪುರೇಲ್ಕರ್ ಮತ್ತು ಅರುಣ್‌ಢೇರೆ ಇವರು ಆಧುನಿಕ ಮಹಿಳೆಯ ಆತ್ಮಶಕ್ತಿ ಹಾಗೂ ಆಕೆಯ ಕನಸು ಮತ್ತು ಆಕಾಂಕ್ಷೆಗಳನ್ನು ಕೃತಿಗಿಳಿಸಿದರು. ಅಷ್ಟೇ ಅಲ್ಲದೆ, ಅವರು ಸೃಷ್ಟಿಸಿದ ಮಹಿಳೆ ಸಾಮಾಜಿಕ ನ್ಯಾಯದ ಹೆಸರಿನಲ್ಲಿದ್ದ ಅನ್ಯಾಯಗಳನ್ನು, ಕುರುಡುನಂಬಿಕೆಗಳನ್ನು ತಿರಸ್ಕರಿಸಿದವಳು. ಅಲ್ಲದೆ ಅತ್ಯಂತ ದೃಢವಾಗಿ ನೇರವಾಗಿ ಪುರುಷನೊಂದಿಗಿನ ಸಂಬಂಧಗಳನ್ನು ಗಂಭೀರವಾಗಿ ಚಿಂತಿಸಿದಳು. ಇತ್ತೀಚಿನ ದಿನಗಳ ಮರಾಠಿ ಸಾಹಿತ್ಯದಲ್ಲಿ ಬಂದ ಮಹಿಳಾ ಲೇಖಕಿಯರ ಆತ್ಮಕಥೆಗಳು ಆಧುನಿಕ ಮಹಿಳೆಯ ಬದಲಾದ ಮನೋಭಾವಕ್ಕೆ, ಅನೇಕ ತಿರುವುಗಳಿಗೆ ಕಾರಣೀಭೂತವಾಗಿವೆ. ಜೊತೆಗೆ ಹೆಣ್ಣಿನ ಅಸ್ತಿತ್ವದ ಹುಡುಕಾಟದ ಸಾಕ್ಷ್ಯ ಚಿತ್ರಗಳಾಗಿವೆ. ಈ ಮೂಲಕ ಹೆಣ್ಣಿನ ಮಾನಸಿಕ ಸ್ಥಿತಿ ಸಾಮಾಜಿಕ ಮತ್ತು ವೈಯಕ್ತಿಕ ಬೇಡಿಕೆಗಳ ಕುರಿತು ಸ್ಪಷ್ಟ ಚಿತ್ರಣ  ನೀಡಿವೆ.'[೧೧]

ಕುಂ.ವೀ. ಅವರ ಸಾಹಿತ್ಯದಲ್ಲಿ ಅದರಲ್ಲಿಯೂ ಗ್ರಾಮೀಣ ಪರಿಸರದಲ್ಲಿ ಬದುಕುವ ಅವರ ಕಥೆಗಳಲ್ಲಿ ಸ್ತ್ರೀ ಸಾಧ್ಯತೆಗಳನ್ನು ಚಿತ್ರಿಸುವುದು ಅವರ ಪ್ರಧಾನ ಆಶಯ. ಕುಂ.ವೀ. ಅವರ ಕತೆಗಳು ಶೂದ್ರ ಜಗತ್ತಿನ ವಿವಿಧ ಮುಖಗಳನ್ನು ತೋರುತ್ತವೆ. ಆ ಜನಾಂಗಕ್ಕೆ ಹತ್ತಿರವಾದ ಭಾಷೆಯಲ್ಲಿ ನುಡಿಕಟ್ಟುಗಳಲ್ಲಿ ಒಂದು ಸಮುದಾಯವನ್ನು ಅದಕ್ಕೆ ಅನನ್ಯವಾದ ದಟ್ಟ ಅನುಭವಗಳನ್ನು ನಮ್ಮೆದುರು ಕಡೆದು ನಿಲ್ಲಿಸುತ್ತಾರೆ. ಜೊತೆಗೆ ಆ ಸಮುದಾಯದ ಜಾತಿ ಮತ್ತು ವರ್ಗ ಸಮಾಜದ ಎಲ್ಲಾ ಕ್ರೌರ್ಯ, ಅಮಾನವೀಯತೆಯನ್ನು ಅವುಗಳ ನಗ್ನರೂಪದಲ್ಲಿ ಪ್ರದರ್ಶಿಸುವಂಥದ್ದು ಬೆರಗು ಹುಟ್ಟಿಸುತ್ತದೆ. ಅವರು ಸೃಷ್ಟಿಸುವ ಪಾತ್ರಗಳು ಶೋಷಕ ಶಕ್ತಿಗಳ ವಿರುದ್ಧ ಒಂದು ಸಂಘಟಿತ ಸಂಚಿತ ವಿರೋಧಕ ಮತ್ತು ಆಕ್ರಮಣಕಾರಿ ಅಸ್ತ್ರವಾಗಬಲ್ಲದು. ಆದರೆ ಕುಂ.ವೀ. ಅವರು ಅತ್ಯುತ್ತಮ ಬರವಣಿಗೆಯ ಆಶಯ ಈ ಶೂದ್ರ ಶಕ್ತಿಯ ಅನಾವರಣವೇ ಆಗಿದೆ. ಟಿ.ಪಿ. ಅಶೋಕ ಅವರು 'ನಿಜಲಿಂಗ' ಕಥಾಸಂಕಲನದ ಬೆನ್ನುಡಿಯಲ್ಲಿ ಹೇಳಿದ ಮಾತುಗಳು ಇವು.

**ಭಗವತಿ ಕಾಡು**

ಈ ಕಥಾಸಂಕಲನದಲ್ಲಿ ಇದೇ ಹೆಸರಿನ ಕಥೆ ಇದೆ. ದಲಿತರ ಕೇರಿಯಲ್ಲಿರುವ ಅದರಲ್ಲೂ ನಾಗವ್ವನ ಮನೆ ಮುಂದಿರುವ ಬೇವಿನ ಮರಕ್ಕೆ ಗೌಡ ಆಸೆಪಟ್ಟು ಅದನ್ನು ಕಡಿಸಲು ನಾಗವ್ವನ ಗಂಡನನ್ನೆ ನೇಮಿಸುತ್ತಾನೆ. ಆದರೆ ಬೇವಿನ ಮರ ಅವರ ಬದುಕಿನ ಮುಕ್ಕಾಲು ಪಾಲನ್ನು ಆಕ್ರಮಿಸಿಕೊಂಡಿರುತ್ತದೆ. ಬೆಳಿಗ್ಗೆಯಿಂದ ಅತ್ತೆ ಮತ್ತು ಸೊಸೆ ಒಂದು ಕ್ಷಣ ಬಿಡದೆ ಜಗಳವಾಡುತ್ತಿರುತ್ತಾರೆ. ಆದರೆ ಯಾವಾಗ ಗೌಡ ಬೇವಿನ ಮರ ಕಡಿಸಲು ಆಳುಗಳನ್ನು ಕಳಿಸಿ ಅದರ ಮೇಲುಸ್ತುವಾರಿಯನ್ನು ತನ್ನ ಗಂಡನಿಗೆ ವಹಿಸಿದ್ದಾನೆ ಎಂದು ತಿಳಿದ ನಾಗವ್ವ ಮತ್ತು ಮುದುಕಿ ಆ ಗೌಡನ ದುಡ್ಡಿನಿಂದ ತಂದ ಅಕ್ಕಿಯ ಅನ್ನ ಉಂಡ ನಂತರ ಸತ್ಯ ಗೊತ್ತಾದಾಗ ಅವರು ಮರ ಕಡಿಯುವುದನ್ನು ವಿರೋಧಿಸಿ ಅದಕ್ಕೆ ತನ್ನ ಗಂಡನಿಗೆ ಗೌಡ ದುಡ್ಡು ಕೊಟ್ಟಿರುವವನೆಂದು ತಿಳಿದು ಆ ಅನ್ನವನ್ನು ಅವರು ಕಷ್ಟಪಟ್ಟು ವಾಂತಿ ಮಾಡುತ್ತಾರೆ.

"ಲೊ ನೀನು ಈಟಿದ್ದಾಗ ನಿನ್ನ ಬೊದ್ಕಿಸಿದ್ದು ಆ ಮರಲೊ ಅದೇ ಕೊಂಬೆಗೆ ತೊಟ್ಲ ಕಟ್ಟಿ ನಿನ್ನಾಕಿ ಬುಟ್ರೆ ಗಪ್ಪಂತ ಮಲಗ್ತಿದ್ದೆ.... ಹೆತ್ತಾಕಿ ಬ್ಯಾರೆ ಅಲ್ಲ ಆ ಮರ ಬ್ಯಾರೆ ಅಲ್ಲ... ಕೆರ್‍ಯಾಗ ಬಿದ್ಕೊಳ್ಲೋದ್ಕೂ ಆ ಮರ ಬೇಕು... ಒಂದು ಕೆಟ್ಟದ್ಕೂ ಒಂದು ಒಳ್ಳೆದಕ್ಕೂ ಆ ಮರ ಬೇಕು... ಅದು ಬರಿ ಬೇವಿನ ಮರ ಅಲ್ಲಲೋ... ಅದ್ರಾಗ ಚವುಡವ್ವಾ ಮನಿಮಾಡ್ಕಂಡಾಳೆ... ಅಂಥಾದಕ್ಕೆ ಕೊಡ್ಲಿ ಬುದ್ರೆ ನರಮನಸ್ಸು ಬೊದ್ಕಿ ಉಳ್ದಾರಾ... ಬಲುಗಂಡ್ಸು ನೀರೊತ್ತು ಬೆಳೆಸ್ಲೋ ನನ್ನಂಗೆ ಗೋಡ್ಗೆ ಮಾರಿ ತಂಬ್ಲಿ ತಿಂದು ಬೊಂದೀಯಾ... ಅದಾವನು ಬರ್ತಾನೆ ಬರ್ಲಿ ನ್ವಾಡೇ ಬುಡ್ತೀನಿ... ಯಲೇನಾಗಿ... ನೀ ತಳಾರ ಅನುಮಂತ್ಗೆ ವುಟ್ಟಿದ್ ಮೊಗಳಾಗಿದ್ರೆ. ಆ ಮರಾನ ಉಳಿಸ್ಗೆಂತಿ... ಎಂದು ನಾಲಿಗೆ ಝಳಪಿಸಿ ಕಿಡಿಕಿಡಿ ಎಗರಿತು ಮುದುಕಿ.

ಮರ ಕಡಿಸಲು ಗೌಡ ವಿಲೇಜ್ ಅಕೌಂಟೆಂಟು ಮತ್ತು ಪೀಸಿ ರಂಗಣ್ಣ ಹಾಗೂ ಆಳುಗಳೊಂದಿಗೆ ಮರದ ಹತ್ತಿರ ಬಂದ. ಪಿ.ಸಿ. ರಂಗಣ್ಣ ಕೇರಿ ಜನಕ್ಕೆ ಯಾರಾದರು ಹತ್ತಿರ ಬಂದರೆ ಮೈ ಮುಪ್ಪಾಗೋದು ಗ್ಯಾರೆಂಟಿ ಎಂದ ಎಚ್ಚರಿಸಿದ. ನಾಗವ್ವ ತಲೆ ತಿರುಗಿ ಬಿದ್ದಿದ್ದಳು. ಆ ಮರದಲ್ಲಿರುವ ಹಕ್ಕಿಗಳು ನಿರಾಶ್ರಿತರಾಗುವ ಭಯಕ್ಕೆ ಛವುಡಿಕೆ ಮೀಟಿದಂತೆ ಚೀರಾಡತೊಡಗಿದವು.

ಮರದ ಸುತ್ತಲು ಕಟುಕರು ಕೊಡಲಿ ಹಿಡಿದು ಒಲ್ಲದ ಮನಸ್ಸಿನಿಂದ ನಿಂತು ಮರದ ಕಡೆ ಪಿಳಿ ಪಿಳಿ ಕಣ್ಣಬಿಟ್ಟರು. ಇಡೀ ಕೇರಿಯ ಇಡೀ ಶೂದ್ರ ಸಮುದಾಯದ ಇಚ್ಚಾಶಕ್ತಿಯೇ ಮರದ ರೂಪ ಧರಿಸಿ ನಿಂತಿರುವಂತೆ ಕಂಡಿತವರಿಗೆ... ಕೊಡಲಿ ಎತ್ತುವ ಶಕ್ತಿಯೇ ತಮ್ಮ ರೆಟ್ಟೆಗಳಲ್ಲಿ ನಶಿಸಿ ಹೋಗಿದೆ ಎನ್ನಿಸಿ ಮಂಕಾದರು. ಚಣದಿಂದ ಚಣಕ್ಕೆ ರಾಪಾಗುತ್ತಿದೆ.

ಹುಲಿಗೆವ್ವನಂತೂ ಮೈ ಮೇಲಿನ ಬಟ್ಟೆ ಖಬರಿಲ್ಲದೆ ಚವುಡಿಕೆ ಟಿವ್ವ.. ಟಿವ್ವ.. ನುಡಿಸುತ್ತ ತಿರುಗಿದಳು. ಆಕೆಯ ಭಂಡಾರದ ಪುಡಿ ಪುತಪುತು ಅಂತ ನಾಗವ್ವನ ದುಂಡು ಮುಖದ ಮೇಲೆ ಉದುರಿತು.

ಮಾರೆಮ್ಮ ತಾಯೆ ನಿನಗಾರು ಸರಿಯೇ ಸರಿ ಸರಿ ಅಂದವರ ಹಲ್ಲು ಮುರಿಯೇ ಬಹುಪರಾಕ್... ಹುಲಿಗೆವ್ವನ ಧ್ವನಿ ಸುತ್ತ ಇದ್ದ ಜನ ಧ್ವನಿ ಸೇರಿಸಲು ಹುಲಿಗೆವ್ವ ಮಾಂತ್ರಿಕ ಶೈಲಿಯಲ್ಲಿ ಮಾತಾಡುತ್ತ ಒಂದು ಹಿಡಿ ಕುಂಕುಮ ತೆಗೆದು ನಾಗವ್ವನ ಮುಖದ ಮೇಲೆ ಸುರಿದಳು... ಪ್ರಪಂಚವನ್ನೆಲ್ಲಾ ಆಪೋಶನ ತೆಗೆದುಕೊಳ್ಳಲಿರುವವಳಂತೆ ಕಣ್ಣು ತೆರೆದು ಎಚ್ಚರಾದಳು ನಾಗವ್ವ.. ತಲೆಯನ್ನು ಅತ್ತ ಇತ್ತ ವೇಗವಾಗಿ ತಿರುಗಿದಳು ಮೊದಲಿಗೆ ನಾಗವ್ವ ನಾಟಕ ಆಡ್ತಿದಾಳೇನೋ ಎಂದು ಭಾವಿಸಿದ್ದ ಗೌಡ, ಉರಿಯುತ್ತಿದ್ದ ಕರ್ಪೂರವನ್ನೆ ಆಕೆ ಬಾಯಲ್ಲಿಟ್ಟು ಕೊಂಡು ನುಂಗುತ್ತಲೆ ಹಡಲ್ಲಾಗಿ ಹೋದನು. ದೋತರ ಒದ್ದೆ ಮಾಡಿಕೊಂಡು ಯವ್ವ ತಾಯಿ ಎಂದು ತನ್ನ ಪಾದಕ್ಕೆರಗಿದ ಗೌಡನ ಬೆನ್ನ ಮೇಲೆ ಕಾಲಿಟ್ಟು ಪೀಸಿ ರಂಗಣ್ಣನ ಕಡೆ ನುಗ್ಗಿದಳು. ಬಿರುಗಾಳಿಯಂತೆ ತರಗೆಲೆಯಂತಾದ ಪಿ.ಸಿ. ರಂಗಣ್ಣ ಗಂಡ ಭರಮ್ಯ ದಿಕ್ಕೆಟ್ಟು ಹೋಡಿ ಹೋದರು. ಸಂತೋಷದಿಂದ ಪಕ್ಷಿಗಳು ಬೇವಿನ ಮರದ ಮೇಲೆ ಕುಣಿದಾಡಿದವು." ಇಲ್ಲಿ ಕುಂ.ವೀ. ಅವರು ಮಹಿಳಾ ಪ್ರತಿಭಟನೆಯನ್ನು ಅದ್ಭುತವಾಗಿ ಧರ್ಮದ ದೇವರ ಹೆಸರಿನಲ್ಲಿ ಹಿಡಿದಿಟ್ಟಿದ್ದಾರೆ.

ಕನ್ನಡದ ಪುರುಷ ಲೇಖಕರು ಮಹಿಳೆಯನ್ನು ಕೇಂದ್ರವಾಗಿಟ್ಟುಕೊಂಡು ಆಧುನಿಕತೆಯ ಪ್ರಶ್ನೆಯನ್ನು ಕಥೆಗಳಲ್ಲಿ ನಿರ್ವಹಿಸಿದಂತಿಲ್ಲ. ಕುಬುಸ ಕಥೆಯು ಸೂರ್ಯನ ಕುದುರೆಯಂಥದೇ ಒಂದು ರೂಪಕವಾಗಿ ಬೆಳೆಯುತ್ತದೆ. ಅದಕ್ಕೆ ಪ್ರತಿಯಾದ ರೂಪಕವಾಗಿದೆ. 'ಸ್ವಾತಂತ್ರ್ಯೋತ್ತರ ಭಾರತದಲ್ಲೂ ಶಿಲಾಯುಗದ ಕಾಲದ ಎಲ್ಲಾ ಲಕ್ಷಣ ಸ್ವಭಾವಗಳನ್ನು ಉಳಿಸಿಕೊಂಡೇ ಬಂದಿರುವ' ವಡ್ಡಟ್ಟ, 'ದುಸರಾ ಪ್ರಪಂಚವನ್ನೇ ನೋಡಿರದ' 'ಅಕ್ಷರ ಕಂಡರೆ ಗಡಗಡ ನಡುಗಿ ಮೂರು ಮಾರು ದೂರ ನಿಲ್ಲುವವ ಸಾಧು ಸ್ವಭಾವದ 'ಭೂತಕಾಲದ ಉಕ್ಕಿನ ತೆರೆ ಸೀಳಿಕೊಂಡು ವರ್ತಮಾನದ ಜಗಜಗಿಸುವ ರಂಗಭೂಮಿಯತ್ತ ಇಣುಕಿಯೂ ನೋಡದ ಜನರಲ್ಲಿ ಒಬ್ಬಳಾದ ಬಂಡೆವ್ವಜ್ಜಿ ಮತ್ತು ಅಂಥವರಲ್ಲೇ ಒಬ್ಬನಾದ ನೆಟ್ಟಕಲ್ಲು. ಅಕ್ಷರ ಕಲಿತು 'ಹಿಂಗಾಲ ಕಸುವು ಮುಂಗಾಲು ಕಸುವು ಕಡಿಮೆಯಾಗಿ 'ಗೋರುಮೆಂಟು ನೋಕರಿ ಸೇರಿ, ಹೆಸರು ಬದಲಾಯಿಸಿ ಕೊಂಡು ಜೀವನಶೈಲಿ ಬದಲಾಯಿಸಿಕೊಂಡು, ಆರಾಧಿಸುವ ದೇವರನ್ನು ಬದಲಾಯಿಸಿಕೊಂಡು, ಹೆಂಡತಿ ಕಮಲಳ ವಶವರ್ತಿಯಾಗಿ, ತನ್ನಜ್ಜಿಯನ್ನು ನಗರದಲ್ಲಿ ಉಳಿಸಿಕೊಂಡು ತನ್ನಂತೆ ಮಾಡಲಾರದೆ ಮತ್ತೆ ವಡ್ಡಟ್ಟಿಗೇ ಬಿಟ್ಟು ಬರುವುದು ಕಥೆ. ಏಕಕಾಲದಲ್ಲಿ ನೆಟ್ಟಕಲ್/ವಡವಟ್

ಮತ್ತು ಬಂಡೆವ್ವರ ಕಥೆಯಾಗಿಯೂ ಪ್ರಾಚೀನತೆ ಮತ್ತು ಆಧುನಿಕ ನಾಗರಿಕತೆಯ ಕಥೆಯಾಗಿಯೂ ಬೆಳೆದಿದೆ. ಕಥೆಗಾರ ಕುಂ.ವೀ. ಆಧುನಿಕತೆ ಮತ್ತು ಪ್ರಾಚೀನತೆಗಳೆರಡನ್ನೂ ಸಮಾನ ಲೇವಡಿ ವಿಮರ್ಶೆಗೆ ಒಳಪಡಿಸಿದ್ದಾರೆ. ಉತ್ಪ್ರೇಕ್ಷಿತ ವಿಡಂಬನೆಯ ಹಿಂದೆ ಸೂಕ್ಷ್ಮವಾದ ಮೆಲುದನಿಯಲ್ಲಿ ಬದುಕಿನ ವಿಭಿನ್ನ ಲಯಗಳು ತಮ್ಮಷ್ಟಕ್ಕೆ ತಾವು ತಮ್ಮದೇ ಪಾಡಿಗೆ ತಾವು ಇರಬಲ್ಲಂಥ ವ್ಯವಸ್ಥೆಯೊಂದರ ಹಂಬಲ ಕಾಣುತ್ತದೆ. ಆದರೆ ವರ್ತಮಾನದ ವಾಸ್ತವದಲ್ಲಿ ಅದು ಅಸಾಧ್ಯ... ಬಂಡೆವ್ವ ತನ್ನೂರಿಗೆ ಹಿಂದಿರುಗಿದರೂ ಆ ಊರು ಕೂಡ ನಗರದಂತೆಯೇ ಆಗುವ ಸನ್ನಾಹ ದಲ್ಲಿದೆ. ಕುಂ.ವೀ. ಅವರು ಇಲ್ಲಿ ಬಂಡೆವ್ವಜ್ಜಿ ಮತ್ತು ಕಮಲ ಪಾತ್ರಗಳನ್ನು ತುಂಬಾ ವಾಸ್ತವದ ನೆಲಗಟ್ಟಿನಲ್ಲಿ ಚಿತ್ರಿಸಿದ್ದಾರೆ.

**೪.೧.೬. ಕುಂ.ವೀ. ಅವರ ಕಾದಂಬರಿ ಸಾಹಿತ್ಯ**

ಎಂಬತ್ತರ ದಶಕದಲ್ಲಿ ಕಾದಂಬರಿ ಕ್ಷೇತ್ರ ಸಾಕಷ್ಟು ವಿಸ್ತಾರವಾಗಿ ಬೆಳೆದಿತ್ತು. ಬಂಕಿಮರ ಕಾದಂಬರಿಗಳು ಕನ್ನಡದಂಥ ಪ್ರಾದೇಶಿಕ ಭಾಷೆಯಲ್ಲಿಯೂ ಪ್ರಕಟವಾಗಿದ್ದವು. ವಾಸ್ತವವಾದಿ ಮಾರ್ಗದ ಹಾದಿ ಹದವಾಗಿ ರೂಪಗೊಂಡಿತ್ತು. ಕುಂ.ವೀ. ಅವರು ಆಯ್ಕೆ ಮಾಡಿಕೊಂಡ ಹಾದಿ ಸಣ್ಣಕಥೆ ಮತ್ತು ಕಾದಂಬರಿ ರಚನೆ. ಪ್ರಾರಂಭದಲ್ಲಿ ಅವರು ಆಸಕ್ತಿಯಿಂದ ಕವಿತೆಗಳನ್ನು ರಚಿಸಿದ್ದರು. ನಂತರ ಅವರ ಸಾಹಿತ್ಯಕ್ಷೇತ್ರ ವಿಸ್ತಾರಗೊಂಡದ್ದು ಸಣ್ಣಕಥೆ, ಕಾದಂಬರಿ, ಅನುವಾದಗಳಲ್ಲಿ. ಕನ್ನಡದ ಮೊದಮೊದಲಿನ ವಾಸ್ತವ ವಾದಕ್ಕೆ ಹತ್ತಿರವಿರುವ ಕಾದಂಬರಿಗಳ ಹಿನ್ನೆಲೆಯಲ್ಲಿ ಕೆಲವು ಸಂಗತಿಗಳನ್ನು ಮನಗಾಣಬಹುದು ಕನ್ನಡದ ಕಾದಂಬರಿಗಳಲ್ಲಿ ಪ್ರಾದೇಶಿಕತೆ ಮತ್ತು ರಾಷ್ಟ್ರೀಯವಾದಿ ಚಿಂತನೆಗಳ ಸಮರೂಪವನ್ನು ಎರಡನೆಯದಾಗಿ ಉದಯವಾದ ನವಸುಶಿಕ್ಷಿತ ವರ್ಗಗಳ ಮತ್ತು ಸಾಂಪ್ರದಾಯಿಕ ಸಮಾಜಗಳ ನಡುವಣ ಬಿಕ್ಕಟ್ಟಿನಿಂದ ಕಾದಂಬರಿಯು ಉಗಮವಾಯಿತು. ಮೂರನೆಯದಾಗಿ ಕಾದಂಬರಿಗಳು ವಸಾಹತುಶಾಹಿ ಅನುಭವದ ಸಾಂಸ್ಕೃತಿಕ ಕಥನಗಳಾಗಿವೆ. ನವಚಿಂತನೆಗಳ ರೂಪಕ್ಕೂ ಕಾದಂಬರಿಯ ರೂಪಕ್ಕೂ ಒಂದು ಸಂಬಂಧವಿದೆ. ಕನ್ನಡದ ಮೊದಮೊದಲ ಕಾದಂಬರಿಗಳಲ್ಲಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಪಲ್ಲಟಗಳನ್ನು ಹಿಡಿದಿಡುವ ಪ್ರಯತ್ನವಿದೆ. ಪ್ರಾದೇಶಿಕ ವಾಸ್ತವ ಮತ್ತು ಬದಲಾಗ ಬೇಕಾದ ಅಗತ್ಯಗಳನ್ನು ಕಾದಂಬರಿಗಳು ಪ್ರತಿಪಾದಿಸಿದವು. ಕಾದಂಬರಿಕಾರರು ಸಾಮಾಜಿಕ ಸಂಬಂಧಗಳಲ್ಲಿ ನೇರ ಕ್ರಿಯಾಶಾಲಿಗಳಾಗಿ ಅಥವಾ 'ನಿರೂಪಕ'ರಂತೆ ಬರೆದರು. ಇದರಿಂದ ಪಲ್ಲಟಗಳನ್ನು ಗುರುತಿಸುವುದು ಸುಲಭವಾಯಿತು.

ಕನ್ನಡದಲ್ಲಿ ಕಾದಂಬರಿಯು ಪ್ರಾರಂಭವಾಗಿರುವುದೇ ಕೆಲವು ನಿರ್ದಿಷ್ಟ ಉದ್ದೇಶಗಳಿಗಾಗಿ. ಇಂಗ್ಲಿಷಿನಲ್ಲಿ ಕಾದಂಬರಿಯ ರೂಪಕ್ಕಿರುವ ಹಿನ್ನೆಲೆಗೂ ಕನ್ನಡದಲ್ಲಿ ಕಾದಂಬರಿಯ ರೂಪ

ಹುಟ್ಟಿರುವ ಹಿನ್ನೆಲೆಗೂ ಕೆಲವು ವ್ಯತ್ಯಾಸಗಳಿವೆ. ಹತ್ತೊಂಬತ್ತನೆಯ ಶತಮಾನದವರೆಗೂ ಕನ್ನಡದಲ್ಲಿ ಕಾದಂಬರಿಯ ರೂಪ ಅಪರಿಚಿತ. ಸಾಂಪ್ರದಾಯಿಕವಾದ ಕಥನಕ್ರಮವನ್ನು ಕಾದಂಬರಿಯೂ ಭೇದಿಸಿ ಕತೆಯನ್ನು ಹೊಸ ಬಗೆಯಲ್ಲಿ ಹೇಳುವ ಕ್ರಮದ ಕಡೆಗೆ ಹರಿಸಿತು. ಕಾದಂಬರಿಯೂ ಹೊಸ ಮಾದರಿಯ ಬೌದ್ಧಿಕ ಉತ್ಪಾದನೆಯಾಗಿರುವುದರಿಂದ ಅದನ್ನು ಹೆಚ್ಚಿನ ಕಾದಂಬರಿಕಾರರು ವ್ಯಾಖ್ಯಾನಿಸಬೇಕಾಗಿ ಬಂತು.

'ಸಣ್ಣಕಥೆ ಬರೆಯುವಾಗ ಕತೆಗಾರರು ಚಿಕ್ಕ ಚಿತ್ರ ಕಥೆಗಳನ್ನು ಬರೆಯುತ್ತಾರೆ. ಒಂದೆರಡು ಕ್ಷಣದ ಗೋಚರ ಅದು. ಒಂದು ಘಟನೆ, ಒಂದು ಅನುಭವ, ಒಂದೆರಡು ವ್ಯಕ್ತಿಗಳು ಇವುಗಳನ್ನೇ ಬಿಂಬಿಸಿ, ಶೀಲದ ಒಂದು ಮುಖ್ಯ ಗುಣ ತೋರಿಸುತ್ತಾರೆ. ಕಾದಂಬರಿಕಾರನ ಚಿತ್ತಬಿತ್ತಿ ಶಾಲವಾದದ್ದು, ಗುರಿ ಇನ್ನೂ ದೊಡ್ಡದು. ಅವನ ಮನಸೆಳೆಯುವ ಪ್ರಶ್ನೆ ಒಬ್ಬ ವ್ಯಕ್ತಿಗೆ ಸಂಬಂದಿಸಿದ್ದಿರಲಿ. ಒಂದು ಸಮಾಜಕ್ಕೆ ಸಂಬಂದಿಸಿದ್ದಿರಲಿ, ಅವನು ಬರೆಯುವ ಚಿತ್ರ ಒಂದು ಶೀಲದ ಒಂದು ಸಮಸ್ಯೆಯ ವಿಶಾಲ ಪೂರ್ಣನೋಟ ಕೊಡಲು ಬಯಸುತ್ತದೆ. ಹಿನ್ನೆಲೆಯಿಂದಾಗಿ ಬಂದ ಆವರಣ ವ್ಯಕ್ತಿ ಅವನ ವಿಕಸಿತ ನಡತೆ ಎಲ್ಲಾ ಬಂದು ಇಷ್ಟೆಲ್ಲಗಳಿಂದಾಗಿ ಜೀವನದಲ್ಲಿ ಕೋಟಿಗಟ್ಟಲೆಯಿಂದ ಬಂದ ಜೀವಿಗಳು ಅವುಗಳಿಗೆ ಸಂಬಂಧಿಸಿದ ಸಮಸ್ಯೆಗಳೂ ಉಂಟಾದ ಕಾಲಗತಿಯಿಂದ, ದೇಹಸಂಪರ್ಕದಿಂದ ಗುಂಪುಗುಂಪುಗಳ ಸಂಸ್ಕಾರ ಭಿನ್ನತೆಯಿಂದ ವ್ಯಕ್ತಿ ಸ್ವಾರ್ಥ ಗುಂಪಿನ ನೀತಿಗಳ ಸಂಘರ್ಷಣೆಯಿಂದ ವ್ಯಕ್ತಿ ವ್ಯಕ್ತಿಗಳೊಳಗಿನ ತಾಕಲಾಟದಿಂದ ಏನೇನಾಗುವುದು? ಆಗಲಾರವು ಎಂದು ಕಾರಂತರು ಹೇಳುತ್ತಾರೆ."[೨]

"ಕಾದಂಬರಿ ಮತ್ತು ವಿಮರ್ಶೆ ಹತ್ತೊಂಬತ್ತನೆಯ ಶತಮಾನದ ಭಾರತೀಯ ಓದುಗ ವರ್ಗಕ್ಕೆ ಹೊಚ್ಚಹೊಸ ಮಾದರಿ. ವಸಾಹತು ರಾಷ್ಟ್ರಗಳಲ್ಲಿ ಯುರೋಪ್ ಮೂಲದ ಸಾಹಿತ್ಯ ರೂಪಗಳನ್ನು ಆಮದು ಮಾಡಿಕೊಳ್ಳವಾಗಿನ ತಲ್ಲಣವೇ ಈ ಬಗೆಯ ನಿರೂಪಣೆಗೆ ಕಾರಣವಾಗಿದೆ. ಕಾದಂಬರಿಯ ರೂಪವನ್ನು ಓದುಗರಿಗೆ ಒಪ್ಪಿಸಲೇಬೇಕೆಂಬ ರೀತಿಯ ಮಾತುಗಳಲ್ಲಿ ಕಾದಂಬರಿಕಾರರಿಗೆ ಇರುವ ವಿನಯ ಮತ್ತು ಆತಂಕಗಳು 'ಸಾಂಸ್ಕೃತಿಕ ಮುಖಾಮುಖಿಯ ಪ್ರಶ್ನೆಗಳೂ ಆಗಿವೆ. ಕಾದಂಬರಿಯ ರೂಪ ಪಶ್ಚಿಮದಿಂದ ಬಂದರೂ ಅದನ್ನು ರಾಷ್ಟ್ರೀಯ ಸಾಂಸ್ಕೃತಿಕ ಸಂಗತಿಗಳಿಗೆ ಒಗ್ಗಿಸುವ ಯತ್ನವೂ ಕಾದಂಬರಿಗಳಲ್ಲಿ ವ್ಯಕ್ತವಾಗಿದೆ.

ಕಾದಂಬರಿ ಮತ್ತು ಅದನ್ನು ಓದು ವರ್ಗ ಇಬ್ಬರೂ ವಸಾಹತುಕಾಲದ ಶಿಕ್ಷಣದ ಕೂಸುಗಳು. ವಸಾಹತುಕಾಲದ ಶಿಕ್ಷಣಕ್ರಮ ರೂಪಿಸಿದ ಚಿಂತನೆಯ ಕ್ರಮಕ್ಕೂ ಈ ಮಾದರಿಯ ಸಾಂಸ್ಕೃತಿಕ ಸಂಚಲನೆಗೂ ಒಂದು ಸಂಬಂಧವಿದೆ. ಶಿಕ್ಷಣ, ಸಮೂಹ ಮಾಧ್ಯಮವಾಗಿ ಪತ್ರಿಕೆ, ಸಾಹಿತ್ಯದ ಸಾಂಸ್ಥಿಕ ಕಲಿಕೆ, ಮುದ್ರಣ, ಬಂಡವಾಳ ಇವೆಲ್ಲದರ ಪರಿಣಾಮವಾಗಿ

ಹೊಸ ರೀತಿಯ ಬದಲಾವಣೆಯು ಸಾಹಿತ್ಯಕ್ಕೂ ಅಗತ್ಯವಿತ್ತು. ಇದನ್ನು ಸಾಮಾಜಿಕ ಮತ್ತು ಸಾಂಸ್ಕೃತಿಕ ಅಗತ್ಯವೆಂದು ಕರೆಯಬಹುದು. ಕಾದಂಬರಿಗಳು ಆ ಸಂದರ್ಭದ ಸಾಂಸ್ಕೃತಿಕ ಸಂವಾದದ(Cultural discourse) ರೂಪಗಳು."[೧೩]

"ಹಳೆಯ ಸಾಹಿತ್ಯ ರೂಪಗಳು ಅರ್ಥಹೀನ ಮತ್ತು ಹೊಸ ಸಾಹಿತ್ಯ ರೂಪಗಳ ಅಗತ್ಯದ ಪುನರ್ ಸಮನ್ವಯಗಳೇ ಆಗ ಎದ್ದು ಕಾಣುವ ಸಾಂಸ್ಕೃತಿಕ ಆಲೋಚನೆಗಳಾಗಿವೆ ಮತ್ತು ಮುದ್ರಣ ಸಂಸ್ಕೃತಿಯೆಂದು ಯಾವುದನ್ನೂ ಕರೆಯುತ್ತೇವೋ ಅದರ ಮುಖಾಂತರ ಸಾಮಾಜಿಕವಾಗಿ ಒಂದು ಬಗೆಯ ಓದುವ ವರ್ಗ ನಿರ್ಮಾಣವಾಯಿತು. ಇಂಗ್ಲಿಷ್ ಭಾಷೆಗೆ ಭಾರತೀಯ ಲೇಖಕರು ನಿರ್ದಿಷ್ಟ ಸಾಹಿತ್ಯದ ರೂಪದ ಮೂಲಕ ಪ್ರತಿಕ್ರಿಯಿಸಬೇಕಾದ ಅಗತ್ಯ ಬಂತು. ಮತ್ತು ವಸಾಹತುಶಾಹಿ ಶಿಕ್ಷಣಕ್ರಮದಿಂದ ಬುದ್ಧಿಜೀವಿಗಳು ಬೇರೆ ಬೇರೆ ರೀತಿಯ ಕಾರ್ಯಗಳನ್ನು ನಿರ್ವಹಿಸಬೇಕಾದ ಅಂಶಗಳು ರೂಪಗೊಂಡವು ಮತ್ತು ಈ ಮಾದರಿಯ ಶಿಕ್ಷಣಕ್ರಮದಿಂದ ವರ್ಗಕೇಂದ್ರಿತ ವರ್ಗೀಕರಣವು ರೂಪಗೊಂಡಿತು. ಸುಶಿಕ್ಷಿತ ಮಧ್ಯಮ ವರ್ಗ ಮತ್ತು ಅನಕ್ಷರಸ್ಥ ನಡುವೆ ಒಂದು ಅಂತರವು ನಿರ್ಮಾಣವಾಯಿತು.

ಇಂಗ್ಲಿಷ್ ಮೂಲದ ಜ್ಞಾನಪರಂಪರೆಯು ಶ್ರೇಷ್ಠ ಹಾಗೂ ಅನುಕರಣೆಗೆ ಯೋಗ್ಯವೆಂದು ಬುದ್ಧಿಜೀವಿಗಳು ಭಾವಿಸಿದ್ದರು. ವಸಾಹತುಕಾಲದಲ್ಲಿ ಆಧುನಿಕ ಯುರೋಪಿನ ಪಠ್ಯಗಳು ಭಾರತಕ್ಕೆ ಬೇರೆ ಬೇರೆ ಕ್ರಮದಲ್ಲಿ ಬಂದವು ಮತ್ತು ಭಾರತೀಯ ಅದರಲ್ಲೂ ಸಂಸ್ಕೃತ ಮೂಲದ ಕೆಲವು ಪಠ್ಯಗಳು ಯುರೋಪಿಗೆ ತೆರಳಿದವು."[೧೪]

ಪ್ರಾದೇಶಿಕ ಭಾಷೆಗಳ ಮೇಲೆ ಸಂಸ್ಕೃತದ ಪ್ರಭಾವವು ಮುಖ್ಯವಾಗಿತ್ತು. ಇಲ್ಲಿ ಒಂದು ಅಂಶವನ್ನು ಗಮನಿಸಬೇಕು. ಸಂಸ್ಕೃತದ ಪಠ್ಯಗಳಿಗೂ ಅದರ ನಿರೂಪಣೆಯ ಕ್ರಮಕ್ಕೂ ಪ್ರಾದೇಶಿಕ ಭಾಷೆಗಳ ಪಠ್ಯಗಳಿಗೂ ಇರುವ ಸಂಬಂಧಾಂತರ ಭಾರತೀಯ ಮೇಲುಜಾತಿಯ ಜನರಿಗೆ ಸಂಸ್ಕೃತದ ಪರಂಪರೆ ಮತ್ತು ಪ್ರಾದೇಶಿಕ ಭಾಷೆಗಳ ಸಾಹಿತ್ಯಕ ಪರಂಪರೆಯ ಅರಿವು ಇತ್ತು. ಸಾಹಿತ್ಯ ಪರಂಪರೆಯ ಜ್ಞಾನ ಮತ್ತು ವಸಾಹತು ಶಿಕ್ಷಣದ ಪರಿಚಯದ ಸಂಧಿಕಾಲದ ಮನಸ್ಸು ಕಾದಂಬರಿಯಲ್ಲಿ ವಿಶಿಷ್ಟ ನಿರೂಪಣೆಗೆ ಕಾರಣವಾಯಿತು. ಯಾವಾಗ ವಸಾಹತುಶಾಹಿ ಶಿಕ್ಷಣಕ್ರಮಗಳು ಭಾರತದಲ್ಲಿ ಪ್ರಬಲವಾಗಿ ಬೇರೂರಿದವೋ ಆಗ ಭಾರತೀಯ ಮತ್ತು ದೇಶೀಯ ಸಾಹಿತ್ಯ ಪರಂಪರೆಯ ಬಗೆಗಿನ ಅಧ್ಯಯನಕ್ರಮಗಳು ಬೇರೆಯಾದವು. ೧೮೩೦ರ ವೇಳೆಗಾಗಲೇ ಬ್ರಿಟಿಷ್ ಶಿಕ್ಷಣನೀತಿಯು ಬದಲಾಗಲು ತೊಡಗಿತ್ತು. ಇದರಿಂದಾಗಿ ದೇಶೀಯ ಶಿಕ್ಷಣದಲ್ಲಿ ಪೌರಾತ್ಯ ಭಾಷೆ ಮತ್ತು ಅಧ್ಯಯನಕ್ರಮಗಳು ಬದಲಾದವು. ೧೮೩೫ರಲ್ಲಿ ಬಂದ ಬೆಂಟಿಂಕ್‌ನ ಶಿಕ್ಷಣ ಕಾಯಿದೆ ಮತ್ತು ಅದೇ ವರ್ಷದ ಮೆಕಾಲೆಯ ಸೂತ್ರ ದೇಶೀಯ

ಶಿಕ್ಷಣಪದ್ಧತಿಯ ಮೇಲೆ ಪರಿಣಾಮ ಬೀರಿದವು. ಬೆಂಟಿಕ್‌ನ ಶಿಕ್ಷಣಸೂತ್ರದಲ್ಲಿ ಇಂಗ್ಲಿಷ್ ಶಿಕ್ಷಣದ ನಯವಾದ ಸೂತ್ರವನ್ನು ಕಂಡರೆ ಮೆಕಾಲೆಯದು ಇಂಗ್ಲಿಷಿನ ಪರವಾದ ಬಿಗಿಯಾದ ದೃಷ್ಟಿ. ಮೆಕಾಲೆಯ ಶಿಕ್ಷಣನೀತಿಯ ಪರಿಣಾಮ ಮಾತ್ರ ತುಂಬಾ ದೊಡ್ಡದು. ವಸಾಹತು ಶಿಕ್ಷಣಕ್ರಮದಲ್ಲಿ ಕೆಲವು ಪರಿಕಲ್ಪನೆಗಳು ಆಂತರಿಕವಾಗಿ ಕೆಲಸ ಮಾಡುತ್ತಿದ್ದುದು ಗಮನಾರ್ಹ.

ವಸಾಹತುಶಾಹಿ ಶಿಕ್ಷಣಕ್ರಮದಿಂದ ಹಳೆಯ ಮಾದರಿಯ ಶಿಕ್ಷಣಕ್ರಮ ನಿಧಾನವಾಗಿ ಗೈರು ಹಾಜರಿಯಾಗಲು ಪ್ರಾರಂಭವಾಯಿತು. ಹಳೆಯ ಮಾದರಿಯ ಶಿಕ್ಷಣಕ್ರಮದಲ್ಲಿ ಕಲಿಯುವವರು ಮತ್ತು ಕಲಿಸುವವರ ಸಂಬಂಧದ ನಿರ್ವಚನ ಬೇರೆ ಬಗೆಯದು.

"ಬ್ರಿಟಿಷ್ ಮಾದರಿಯ ಶಾಲೆಗಳು ನಮ್ಮ ದೇಶಕ್ಕೆ ಬರುವ ಮುಂಚೆ ನಮ್ಮ ಶಿಕ್ಷಣ ಕ್ರಮದಲ್ಲಿ ವಿಷಯಗಳ ಸಂಖ್ಯೆ ಮಿತವಾಗಿತ್ತು. ಗುರುಗಳು ಹೇಳಿಕೊಡುವ ಯಾವತ್ತು ಸಂಗತಿಗಳು ಕಂಠಪಾಠ ಮಾಡುವುದು ಶಿಕ್ಷಣದ ವಿಧಾನವಾಗಿತ್ತು. ಇಂಥ ಕ್ರಮದಿಂದ ಸ್ಮರಣಶಕ್ತಿ ಬೆಳೆಯಬಹುದೇ ಹೊರತು ವ್ಯಕ್ತಿಯ ಮನಸ್ಸಿನ ಗಾತ್ರ ಮತ್ತು ತೀಕ್ಷ್ಣತೆ ಬೆಳೆಯಲಾರದು."

**ಯಾಪಿಲ್ಲು**

ವಸಾಹತುಶಾಹಿ ಶಿಕ್ಷಣಕ್ರಮದಲ್ಲಿ ಎಲ್ಲರಿಗೂ ಸಮಾನ ಅವಕಾಶ ದೊರೆಯಿತು. ಈ ಶಿಕ್ಷಣ ಕ್ರಮದಲ್ಲಿ ಆ ಜಾತಿ ಈ ಜಾತಿಯೆಂಬ ಪ್ರಶ್ನೆಯಿರಲಿಲ್ಲ ಈ ಹಿನ್ನೆಲೆಯಲ್ಲಿ ಕುಂ.ವೀ. ಅವರ 'ಯಾಪಿಲ್ಲು' ಎನ್ನುವ ಕಾದಂಬರಿ ಹೊಸಹತುಶಾಹಿಯಿಂದ ಬಂದ ಇಂಗ್ಲಿಷ್ ಶಿಕ್ಷಣವು ಪ್ರವೇಶ ಮಾಡುವುದರಿಂದ ಆಗುವ ಸಾಂಸ್ಕೃತಿಕ ಅನಾಹುತಗಳ ಕಾಮಿಕ್ ಕಥನವಾಗಿದೆ. ಆಧುನಿಕ ಪೂರ್ವಯುಗದ ಹಲವಾರು ಶತಮಾನಗಳ ಹಿಂದಿನ ಜೀವನಕ್ರಮವನ್ನು ತನ್ನ ಹೊಟ್ಟೆಯಲ್ಲಿ ಇಟ್ಟುಕೊಂಡೇ ಬಂದಿರುವ ದಾರಿಯಲ್ಲಿ ಆಧುನೀಕರಣದ ಪ್ಯಾಕೇಜ್ ಆದ ಇಂಗ್ಲಿಷ್ ಅನ್ನುವುದು ಪ್ರವೇಶ ಮಾಡಿದರೆ ಏನಾಗುತ್ತದೆ?' ಈ ಪ್ರಶ್ನೆಗಳನ್ನು ಕಾದಂಬರಿಯ ಮಾಧ್ಯಮದಲ್ಲಿ ಕೇಳಬಹುದೆಂದು ನಮ್ಮ ಬರಹಗಾರರು ಅಂದುಕೊಳ್ಳುವುದೇ ಇಲ್ಲ. ಹೀಗಾಗಿ ನಮ್ಮ ಕಣ್ಣೆದುರಿಗೆ ನಡೆಯುತ್ತಿರುವ ಚರಿತ್ರೆಯ ಬಹುದೊಡ್ಡ ಪಲ್ಲಟದ ಬಗ್ಗೆ ಬರೆಯುವವರೇ ಕಡಿಮೆಯಾಗಿದ್ದಾರೆ. ವಾಗಿಲಿಯ ದೇಶೀಯ ನುಡಿಕಟ್ಟು ಬದುಕುವ ರೀತಿ ನೀತಿಗಳಲ್ಲಿ ಆಧುನಿಕತೆ ವಿಕೃತಗೊಂಡು, ವಿರೂಪಗೊಂಡು ಕಾಮಿಕ್ ದಾಟಿಗೆ ಒಳಗಾಗುತ್ತಿದೆಯೆನ್ನುವ ನೆಲೆಯಲ್ಲಿಯೂ ಕೂಡ ಇದನ್ನು 'ಯಾಪಿಲ್ಲು' ಕೃತಿ ಸಮರ್ಥವಾಗಿ ಮಾಡುತ್ತಿದೆ. ಕೃತಿಯ ಉದ್ದಕ್ಕೆ ದಟ್ಟವಾಗಿರುವ ಪ್ರಾಂತೀಯವಾದ ಉಪಭಾಷೆಯ ಆವರಣದೊಳಗೆ 'ಇಂಗ್ಲೀಷು' ಹೊಕ್ಕಮೇಲೆ ಆಗುವ ಅವಾಂತರಗಳನ್ನು ಇಂಗ್ಲಿಷ್ ಭಾಷೆಯ ಪದಗಳಿಗೆ ಆಗುವ ಕಾಮಿಕ್ ಸಂಸ್ಕಾರಗಳ ಮೂಲಕವೇ ಗ್ರಹಿಸುವುದು ಇಲ್ಲಿ ಸಾಧ್ಯವಾಗಿದೆ. ಎಪಿಪಿಎಲ್‌ಇ ಯಾಪಿಲ್ಲು

ಕಾದಂಬರಿಯ ಒಂದು ಭಾಗದಲ್ಲಿ ಅನುಭಾವದ ಸತ್ಯವಾಗಿ ಅವತಾರ ತಾಳುತ್ತದೆ. ಸೇಬುಹಣ್ಣು 'ಯಾಪಿಲ್ಲಾಗಿ' ಆದ್ದರಿಂದ ಒಂದು ದೊಡ್ಡ ಪಲ್ಲಟವೇ ನಡೆದು ಬಿಡುತ್ತದೆ. ಕಾದಂಬರಿಯ ಕೇಂದ್ರವಾಗಿರುವ ನಿರೂಪಕನ ಭಾವನೆಯಲ್ಲಿ ಕಾದಂಬರಿಯ ಕೇಂದ್ರ ಪಾತ್ರವಾದ ಭಾರತೀಯ ಅಲ್ಲದ ಎಂಜಲು ಅಲ್ಲದ ಹುಡುಗಿಗೆ ಇಂಗ್ಲಿಷ್ ವ್ಯಾಮೋಹ. ಹೆಲ್ತ್ ವರ್ಕರ್ ಇಮಾಮ 'ರಿಕೆಟ್ಟು' 'ಬೆರಿಬೆರಿ' ಎಂದು ಎರಡು ಹೆಸರಿಟ್ಟಿದ್ದರೆ, ನಿರೂಪಕ ಅವಳಿಗೆ 'ಭಾರತಿ' ಎಂದು ಹೆಸರಿಡುತ್ತಾನೆ. ಆದರೆ 'ಕಾರ್‌ಮೆಂಟು ಇಂಗಲೀಸು ಇಸ್ಕೂಲು' ಬಂದ ಮೇಲೆ ವಾಗಿಲಿಯಲ್ಲಿ ಹಬ್ಬುವ ಸಮೂಹಸನ್ನಿಯಿಂದಾಗಿ ಅವಳಿಗೆ 'ಯಾಂಜೆಲ್ಲು' ಅಂದರೆ 'ಏಂಜಲ್' ಎಂದು ಪುನರ್ ನಾಮಕರಣವಾಗುತ್ತದೆ. ಇಲ್ಲಿ ಭಾರತಿಯಲ್ಲದ ಭಾರತಿಯಾಗಿವೆ ಎನ್ನುವ ಊರಿನಲ್ಲಿ ಭಾರತದ ಕಥನಗಳಿಗೆ ವಸ್ತುವಾಗುತ್ತಾಳೆ. ಅವಳ ಮೇಲೆ ಈ ಕಥನಗಳನ್ನು ಹೇರುವ ಕೆಲಸದಲ್ಲಿ ನಿರೂಪ ತಂದೆ-ತಾಯಿ ಮತ್ತು ವಾಗಿಲಿಯೆನ್ನುವ ಊರಿನ ಜನರು ಕಾರಣರಾಗುತ್ತಾರೆ. ಆ ದಲಿತ ಹುಡುಗಿಯನ್ನು 'ಗೋರ್‌ಮೆಂಟ್' ಸ್ಕೂಲಿಗೆ ಸೇರಿಸುವುದರ ಮೂಲಕ ನಿರೂಪಕ ಅವಳಿಗೆ ಒಂದು ಸಾಂಸ್ಕೃತಿಕ ಗುರುತನ್ನು ಕೊಡಬಯಸುತ್ತಾನೆ. ಅದರಿಂದಾಗಿ ವಾಗಿಲಿಯ ಪಟ್ಟಭದ್ರರು ಜಾತಿವಾದಿ ಸ್ಕೂಲ್ ಮೇಷ್ಟ್ರುಗಳು ಎಲ್ಲಾ ನಮೂನೆಯ ಹಲಾಲ್‌ಕೋರರು ಮೂಗರ್ಜಿವೀರರು ತಳಮಳಗೊಳ್ಳುತ್ತಾರೆ. ಭಾರತಿ ಅವಳಿಗೆ ಗೊತ್ತಿಲ್ಲದ ಹಾಗೆಯೇ ಎಲ್ಲರಿಗೂ ಒಂದು ಸವಾಲಾಗುತ್ತಾಳೆ. ಮುಂದೆ ಕಾರ್‌ಮೆಂಟು ಇಂಗ್ಲಿಷ್ ಸ್ಕೂಲ್ ಬಂದ ಮೇಲೆ ವಾಗಿಲಿ ಯಲ್ಲಾಗುವ ವಿಕೃತಪಲ್ಲಟಗಳು ಕೃತಿಯಲ್ಲಿ ಬಹಳ ಪ್ರಭಾವಶಾಲಿಯಾಗಿ ಬಂದಿವೆ. ಇಂಗ್ಲೀಷು ವಾಗಿಲಿ ಜನರ ಆಡುಮಾತಿನಲ್ಲಿ ತೂರಿಕೊಂಡು ಆಗುವ ಅನಾಹುತಗಳ ಅದ್ಭುತವಾಗಿವೆ. 'ವಾಟರಿಗೆ ಬರ್ತಿಯೇನೆ' ಎಂದು ಹೆಂಗಸು ಕರೆಯುವುದು, ನಮೇಜಮಾನರು ಪೀಲ್ಡಿಗೆ ಹೊಗ್ಯಾರ ಇತ್ಯಾದಿಗಳು ಅಧೀನ ಸಂಸ್ಕೃತಿಯ ವಸಾಹತುಶಾಹಿ ಸಂಸ್ಕೃತಿಯನ್ನು ಅಣಕುಮಾಡಿ ವಿಕೃತಗೊಳಿಸಿ ನಗೆಗೀಡು ಮಾಡುವ ಕೆಲಸದಲ್ಲಿ ಪ್ರಧಾನವಾಗಿ ಬಳಸಿಕೊಳ್ಳುವುದು ಭಾಷೆಯ ವಲಯವನ್ನೇ. ಇದು 'ಯಾಪಿಲ್ಲು' ಕೃತಿಯ ಮುಖ್ಯ ತಂತ್ರವೂ ಆಗಿದೆ. ವಿಶೇಷವೆಂದರೆ ನಿರೂಪಕ ಗುರುತಿಸುವ ಹಾಗೆ ಇದು ಬರೀ ಸ್ಥಳೀಯ ಫ್ಯಾಷನ್ ಅಲ್ಲ ಅದು ಸಮೂಹಸನ್ನಿ. ಇಂಗ್ಲಿಷ್ ವ್ಯಾಮೋಹ ಮಾತ್ರವಲ್ಲ, ಕನ್ನಡವನ್ನು ಗವರ್‌ಮೆಂಟು ಕನ್ನಡ ಶಾಲೆಯನ್ನು ನಾಶ ಮಾಡಬೇಕೆನ್ನುವ ಪ್ರವೃತ್ತಿ ಕೂಡ 'ಯಾಪಿಲ್ಲು' ಕೃತಿಯಲ್ಲಿ ನಿರೂಪಕನು ಸಾಂಸ್ಕೃತಿಕ ರಾಜಕೀಯದಲ್ಲಿ ಕನ್ನಡ ಮತ್ತು ಇಂಗ್ಲಿಷ್‌ಗಳ ಮಾಧ್ಯಮ ಅಘೋಷಿತ ಯುದ್ಧವನ್ನು ನಮಗೆ ವರದಿ ಮಾಡುವ ಭಾಗಗಳು. ಅವನ ಒಳತೋಟಿ ವಾಗಿಲಿಯಲ್ಲಿ ನಡೆಯುತ್ತಿರುವ ಹುನ್ನಾರಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಾ ಇವುಗಳ ಕೇಂದ್ರವಾಗಿರುವ ಭಾರತಿಯೆನ್ನುವ ಹೆಣ್ಣುಮಗುವಿನ ಬಗ್ಗೆ ತಂದೆಯ

ಪ್ರೀತಿಯನ್ನು, ತಂದೆಯ ಆತಂಕವನ್ನು ತೋರಿಸುವ ಭಾಗಗಳೇ ಕಾದಂಬರಿಯ ಗಟ್ಟಿಯಾದ ಭಾಗಗಳು.

ಕಾದಂಬರಿಯ ಸತ್ವವಿರುವುದು ಅದು ಎತ್ತುವ ಆತಂಕದ ಪ್ರಶ್ನೆಯಲ್ಲಿ. ದಲಿತ ಹುಡುಗಿ ಭಾರತಿಗೆ ಅವಳದೇ ಗುರುತು ಇರುವುದು ಸಾಧ್ಯವೇ ಇಲ್ಲವೇ? ಸ್ವತಃ ನಿರೂಪಕ ಕೂಡ ವಾತ್ಸಲ್ಯದಿಂದ ಅವಳಿಗೆ ಭಾರತಿ ಎನ್ನುವ ಗುರುತನ್ನು ಕೊಟ್ಟರೂ ಅದೂ ಕೂಡ ಒಂದು ಬಗೆಯ ಸಂಸ್ಕೃತಿಯ ಆಕ್ರಮಣವೇ ಅಲ್ಲವೇ? ಆದ್ದರಿಂದ ಅವಳನ್ನು ಸಂಸ್ಕೃತಿ ರಾಜಕೀಯದ ಎಲ್ಲಾ ಎಡವಟ್ಟುಗಳಿಗೆ ಕೇಂದ್ರವನ್ನಾಗಿ ಅವನೂ ಮಾಡುತ್ತಾನೆಯಲ್ಲವೇ? ಅದೇ ರೀತಿ ಅವಳು ಸ್ಕೂಲಿಗೆ ಬಂದರೆ ಹೇಸಿಗೆ ಪಡುವವರು ಅವಳ ದಲಿತ ಗುರುತನ್ನು ಅಳಿಸಿಹಾಕಲು ಒಪ್ಪಲಾರರು. ಮುಂದೆ ಅವಳನ್ನು ಇಕ್ವೋರಿಯಾ ಅಥವಾ ಯ್ಯಾಂಜಿಲ್ಲು ಎಂದು ನಾಮಕರಣ ಮಾಡಿ ಕಾರ್‌ಮೆಂಟ್ ಸ್ಕೂಲಿಗೆ ಮೆರವಣಿಗೆಯಲ್ಲಿ ತರುವ ಖೂಳರು ಕೂಡ ತಮಗೆ ಬೇಕಾಗಿರುವ ಇಂಗ್ಲಿಷ್‌ಗೆ 'ಸಾಮಾಜಿಕ ಸಮರ್ಥನೆ' ಕೊಡುವುದಕ್ಕಾಗಿ ಅವಳನ್ನು ಬಳಸಿ ಕೊಳ್ಳುತ್ತಾರೆ. ಅವಳ ತಂದೆ-ತಾಯಿ ಕೂಡ ಇದಕ್ಕೆ ಹೊರತಾಗಿಲ್ಲ. ಭಾರತಿಯು ಅಲ್ಲದ, ಯ್ಯಾಂಜಿಲ್ಲೂ ಅಲ್ಲದ ಆ ಹುಡುಗಿ ಯಾಪಿಲ್ಲು ತಿನ್ನಬಯಸಿ ಮೈತುಂಬಾ ಬಾಸುಂಡೆ ಪಡೆಯುತ್ತಾಳೆ. ಕೃತಿಗೆ ಹೆಸರು ಕೊಟ್ಟಿರುವ 'ಯಾಪಿಲ್ಲು' ಹಲವಾರು ಅರ್ಥಗಳನ್ನು ಸಂಕೇತಿಸ ಬಲ್ಲದು. ಅದು ನಮ್ಮ ಸಮಾಜದ 'ತಿರುಕನ ಕನಸನ್ನು' ಸಂಕೇತಿಸುತ್ತದೆ. ಅಂದರೆ ಕನಿಷ್ಠ ಪಕ್ಷ ಮನುಷ್ಯನಂತೆ ಬದುಕುವ ಸವಲತ್ತುಗಳನ್ನು ಪಡೆಯದವರು ಕೂಡ ತಮಗೆ ನಿಲುಕದ ವಸ್ತುವಿಗೆ ಆಸೆಪಟ್ಟಂತೆ ಬಡತನ, ಜಾತಿ ಇದಾವುದೂ ಬದಲಾಗದೇ ಇಂಗ್ಲೀಷು ಮಾತ್ರ ವಾಗಿಲಿಗೆ ಬರುವುದನ್ನು, ಒಟ್ಟಾರೆ ನಾವು ಇರುವುದಕ್ಕೂ ಬಯಸುವುದಕ್ಕೂ ಮಧ್ಯ ಇರುವೆ ಕಂದರವನ್ನು 'ಯಾಪಿಲ್ಲು' ಸೂಚಿಸುತ್ತದೆ.

**ಪರಂಪರೆ ಮತ್ತು ಆಧುನಿಕತೆಯ ಮುಖಾಮುಖಿ 'ಶಾಮಣ್ಣ' ಕಾದಂಬರಿ**

ಆಧುನಿಕತೆ ಎನ್ನುವುದು ಸಮಾಜವನ್ನು ಕುರಿತೇ ಹೇಳಬಹುದಾದ ಸಂಗತಿ. ಸಮಾಜ ಚಲನಶೀಲವಾದುದರಿಂದ ಹಳೆಯದನ್ನೇ ಮುಂದುವರಿಸಿಕೊಂಡು ಹೋಗಲು ಸಾಧ್ಯವಾಗುವುದೇ ಇಲ್ಲ. ನಮ್ಮ ಜೀವನವಿಧಾನ ಬದಲಾವಣೆಯಾದಂತೆಲ್ಲ ನಮಗರಿವಿಲ್ಲದ ಹಾಗೆ ಆಧುನಿಕ ಬದುಕಿನಲ್ಲಿ ಪ್ರವೇಶಿಸುವಂತಾಗುತ್ತದೆ. ಇದರಿಂದ ಪ್ರತಿಯೊಬ್ಬ ವ್ಯಕ್ತಿಯೂ ಬದಲಾವಣೆಗೆ ಒಳಗಾಗುವುದರ ಮೂಲಕ ಆಧುನಿಕತೆಯನ್ನು ಅನುಭವಿಸುತ್ತಿರುತ್ತಾನೆ. ಹಾಗಾಗಿ ಆ ಜನಮಾನಸದ ಪ್ರತಿನಿಧಿಯಾದ ಸಾಹಿತಿ ಅದನ್ನು ತನ್ನ ಬರವಣಿಗೆಯಲ್ಲಿ ಹಿಡಿದಿಡುವ ಪ್ರಯತ್ನ ಮಾಡುತ್ತಾನೆ. ಭಾಷೆಯ ಬದಲಾವಣೆ, ಹೊಸ ಹೊಸ ಸಂಶೋಧನಾ ಮಾರ್ಗಗಳು, ಚಿಂತನಾಧಾರೆಗಳು, ಸಮಾಜ ಸುಧಾರಣಾ ಸಂಗತಿಗಳು ಇವೆಲ್ಲ ನಮ್ಮ ಬದುಕನ್ನು ಸ್ಥಿತ್ಯಂತರಗೊಳಿಸುತ್ತಿರುತ್ತವೆ.

ಈ ನಿಟ್ಟಿನಲ್ಲಿ ಮನುಷ್ಯ ಒಲ್ಲದ್ದನ್ನು ನಿರಾಕರಿಸುತ್ತ ಒಪ್ಪಿಕೊಂಡಿದ್ದನ್ನು ಸ್ವೀಕರಿಸುತ್ತಾ ಜೀವಿಸುತ್ತಾನೆ. ಹಾಗಾಗಿ ನಾವು ಇಡೀ ವ್ಯವಸ್ಥೆಯನ್ನು ಈ ಪರಿಪ್ರೇಕ್ಷ್ಯದಲ್ಲಿರಿಸಿಯೇ ನೋಡಬೇಕಾಗುತ್ತದೆ. ಸಾಹಿತ್ಯ ಪ್ರವೃತ್ತಿಗಳು ಬದಲಾವಣೆಯಾದಾಗಲೂ ಇಂಥ ವ್ಯತ್ಯಾಸಗಳನ್ನು ಗುರುತಿಸುತ್ತಲೆ ಬಂದಿದ್ದೇವೆ. ನವೋದಯ ಮತ್ತು ನವ್ಯ ಮೂಲತಃ ಭಾಷೆ, ತಂತ್ರ, ಪ್ರತಿಮೆ, ಪ್ರತೀಕಗಳಿಗೆ ಸಂಬಂಧಿಸಿದ ವಿಚಾರಗಳಿಗೆ ಆಸಕ್ತಿ ತೋರಿದವು. ಬಂಡಾಯವಾದರೋ ಒಂದು ಮನೋಧರ್ಮ ಆ ಮನೋಧರ್ಮದ ಹಿನ್ನೆಲೆಯಲ್ಲಿ ಬಂಡಾಯ ಕಾದಂಬರಿಗಳನ್ನು ಪರಿಶೀಲಿಸಬೇಕಾಗುತ್ತದೆ.

ಪ್ರಗತಿಶೀಲ ಪಂಥದ ಧ್ಯೇಯ ಧೋರಣೆಗಳಲ್ಲಿ ಬಂಡಾಯದ ಕೆಲವು ಅಂಶಗಳಿದ್ದು ಅದಕ್ಕಾಗಿ ಬಂಡಾಯದವರು ಅವನ್ನು ಪುನಶ್ಚೇತನಗೊಳಿಸಿದ್ದುಂಟು. ಪ್ರಗತಿಶೀಲರ ಮುಂದುವರಿಕೆಯ ಗಟ್ಟಿತನದ ನೆಲೆಗಟ್ಟನ್ನು ಕಂಡುಕೊಂಡು ಹೊಸ ಸಮಾಜವನ್ನು ಕಟ್ಟಿಕೊಡುವ ಆರೋಗ್ಯಕರವಾದ ಮನಸ್ಸುಗಳು ಬಂಡಾಯ ಸಾಹಿತ್ಯದಲ್ಲಿ ಕ್ರಿಯಾಭಿಮುಖವಾಗಿ ಅಭಿವ್ಯಕ್ತವಾದವು. ಮೊದಮೊದಲು ಕಾಣಿಸಿಕೊಂಡ ಬರಹಗಳು ಆವೇಶ ಆಕ್ರೋಶಗಳಿಂದ ಕೂಡಿದ್ದವೆಂದು ಹೇಳಲಾಯಿತಾದರೂ ಅವಿಲ್ಲದೆಯೂ ಬಂಡಾಯ ಮನೋಧರ್ಮವನ್ನು ವ್ಯಕ್ತಗೊಳಿಸಬಹುದು ಎಂಬುದನ್ನು ಅರಿತವರು ಸಹಜವಾದ ಮಾರ್ಗವನ್ನು ಕಂಡುಕೊಂಡದ್ದುಂಟು. ಬರಹಕ್ಕಿಂತ ಬದುಕು ದೊಡ್ಡದು ಎಂಬ ಸತ್ಯವನ್ನು ಕಂಡುಕೊಂಡ ದಲಿತ ಬಂಡಾಯದವರು ಬರಹ ಮತ್ತು ಬದುಕನ್ನು ಒಟ್ಟೊಟ್ಟಿಗೆ ರೂಪಿಸುವಂತಹ ಕಾರ್ಯದಲ್ಲಿ ಸಕ್ರಿಯದಾದರು. ಹಾಗಾಗಿ ಅವರ ಸೃಷ್ಟಿಕ್ರಿಯೆಯೇ ಒಂದು ಹೊಸ ಪ್ರಯೋಗವೆನಿಸಿತು. ಜನಸಾಮಾನ್ಯರ ವೇದನೆಗಳನ್ನು ಸಂವೇದನೆಗೊಳಿಸುವಂತಹ ಕಾರ್ಯ ಬಂಡಾಯದವರ ಮುಖ್ಯ ಗುರಿಯಾಯಿತು. ದಲಿತರು ಮುಸ್ಲಿಮರು, ಸ್ತ್ರೀಯರು, ಶೂದ್ರರು ಮುಂತಾದ ವರ್ಗದ ಜನ ಪಾಲ್ಗೊಳ್ಳುವುದರ ಮೂಲಕ ಈ ಸಾಹಿತ್ಯದ ಸತ್ವ ಹೆಚ್ಚಿತು. ಇತರರಿಂದ ತಮಗಾಗುತ್ತಿರುವ ಅನ್ಯಾಯಗಳನ್ನು ಸರಿಪಡಿಸಿಕೊಳ್ಳುವ ಹಕ್ಕೊತ್ತಾಯದ ಸ್ವರೂಪದ ದನಿಗಳೂ ಕೇಳಿಬಂದವು. ಶಿಕ್ಷಣ ಇವರಿಗೆ ಕೇವಲ ಅಕ್ಷರಜ್ಞಾನವಾಗಿ ಕಾಣಿಸಲಿಲ್ಲ. ನಮ್ಮ ಅಂತರಂಗದ ಆಲೋಚನೆಗಳನ್ನು ಹೊರಹಾಕುವುದಕ್ಕೆ ಸಹಜಮಾರ್ಗವು ಗೋಚರ ವಾಯಿತು. ನೊಂದವರಿಗೆ ಇದನ್ನು ಮನವರಿಕೆ ಮಾಡಿಕೊಡುತ್ತಲೇ ಹೊಸ ಸಮಾಜದ ರಚನೆಗೆ ಅವರನ್ನು ಸಿದ್ಧಗೊಳಿಸುವುದು ಬಂಡಾಯ ಬರಹಗಾರರ ಮುಖ್ಯ ಆಶಯವಾಯಿತು. "ಬಹಳಷ್ಟು ಮಂದಿಯಲ್ಲಿ ಬಂಡಾಯವೆಂದರೆ ಹಿಂಸೆ ಎಂಬ ಭಾವನೆ ಇದೆ. ಅದು ತಪ್ಪುಕಲ್ಪನೆ. ಎಲ್ಲರ ಹಾಗೆ ಬಂಡಾಯ ಲೇಖಕರೂ ತಮಗೆ ದಕ್ಕಬೇಕಾದುದನ್ನು ಹಕ್ಕಿನ ಮೂಲಕ ಪಡೆದು ಕೊಳ್ಳುವಂತಹ ವ್ಯವಸ್ಥೆಗೆ ಜನರನ್ನು ಸಜ್ಜುಗೊಳಿಸು ವಂಥದ್ದು ಬಂಡಾಯ. ಇದೇ ಆ ಸಂದರ್ಭದ ವೈಚಾರಿಕತೆ. ವೈಚಾರಿಕತೆ ಎಂಬುದು ಮೆದುಳಿನ ಕ್ರಿಯೆಯಾದರೆ ಬಂಡಾಯ ಕರುಳಿನ ಕ್ರಿಯೆಯಾಗಿದೆ. ಬಲವಂತವಾಗಿ ಸೇರಿದ್ದನ್ನು ಕಿತ್ತೊಗೆಯುವ ಪ್ರಕ್ರಿಯೆಯಲ್ಲಿ ಬಂಡಾಯದ

ಸೃಜಶೀಲತೆ ಸ್ಫೋಟಗೊಂಡಿತು. ಕರುಳಿನ ಕ್ರಿಯೆ ಹಾಗೂ ಮೆದುಳಿನ ಕ್ರಿಯೆಯೇ ಬಂಡಾಯ ಕಾದಂಬರಿಗಳ ಮುಖ್ಯ ಅಂತಸ್ಸತ್ವವಾಯಿತು. ಇದೇ ಒಂದು ಬಗೆಯ 'ಆಧುನಿಕತೆ'. 'ಕನ್ನಡದಲ್ಲಿ 'ಆಧುನಿಕತೆ' ಎಂಬ ಶಬ್ದವನ್ನು ನಗರಕ್ಕೆ ಸಂಬಂಧಿಸಿದುದು, ಗ್ರಾಮೀಣ ವಲ್ಲದ್ದು, ಇತ್ತೀಚಿನದು, ವಿದ್ಯಾವಂತರ ಶಿಷ್ಟರ ಜಗತ್ತಿನದು, ವೈಚಾರಿಕವಾದುದು, ಪ್ರಗತಿಪರವಾದುದು, ವೈಜ್ಞಾನಿಕವಾದುದು ಇತ್ಯಾದಿ ಅರ್ಥಗಳಲ್ಲಿ ಬಳಸಲಾಗುತ್ತದೆ. ಹಾಗೆ ಕಂಡರೆ ಈ ಎಲ್ಲಾ ಅರ್ಥಗಳೂ ಪರಸ್ಪರ ಸಂಬಂಧವುಳ್ಳವೇ ಆಗಿವೆ. ಎಲ್ಲಾ ಅರ್ಥಗಳನ್ನೊಳಗೊಂಡ ಇಡೀ ಆಧುನಿಕತೆಯ ಪರಿಕಲ್ಪನೆಯೇ ವಸಾಹತೀಕರಣ, ಕೈಗಾರಿಕರಣ, ನಗರೀಕರಣಗಳ ಜೊತೆಯಲ್ಲಿ ನಮ್ಮ ಅನುಭವವಾಗಿರು ವಂಥದ್ದಾಗಿದೆ. ಮೊದಲನೆಯದಾಗಿ ಆಧುನಿಕತೆಯು ವಿಜ್ಞಾನ ಮತ್ತು ಕೈಗಾರಿಕೆಗಳು ನಮ್ಮ ಭೋಗಕ್ಕಾಗಿ ಒದಗಿಸಿದ ಸರಕುಗಳ ಮೂಲಕ ಬಂದಿದ್ದು, ವ್ಯಕ್ತಿಯ ಬದುಕುವ ವಿಧಾನದಲ್ಲಿ ಹೊರರೂಪ ಮಾರ್ಪಾಟುಗಳನ್ನು ತಂದಿತು. ಎರಡನೆಯದಾಗಿ ಸ್ಕೂಲು, ಹೋಟೆಲು, ಸೆಲೂನು ಆಸ್ಪತ್ರೆ, ಕಾರ್ಖಾನೆ, ಪೊಲೀಸು ಕೋರ್ಟು, ಬಸ್ಸು ರಸ್ತೆ ಮೊದಲಾದ ಸಾರ್ವಜನಿಕ ಜಾಗಗಳ ರೂಪದಲ್ಲಿ ಬಂದು ನಿಜವಾಗಿ ತಳಮಳ ಉಂಟುಮಾಡಿತು. ನಮ್ಮ ಆಲೋಚನಾ ವಿಧಾನದಲ್ಲಿ ನಿರ್ಣಾಯಕವಾದ ಮಾರ್ಪಾಟು ತಂದಿತು. ಶಿಕ್ಷಣ ಮತ್ತು ವೈಚಾರಿಕತೆಗಳ ರೂಪದಲ್ಲಿ ಬಂದಂಥ ಆಧುನಿಕತೆಯು ಅಂತಿಮವಾಗಿ ಮಾಡಿದ ಚಲನೆ ಇನ್ನೂ ಹೆಚ್ಚಿನದು. ಹೀಗೆ ಆಧುನಿಕತೆಯು ಅಂದರೆ ಪಶ್ಚಿಮದ ಸಂಸ್ಕೃತಿಯು ಹೊರಗೂ ಒಳಗೂ ಭೌತಿಕವಾಗಿಯೂ ಮಾನಸಿಕವಾಗಿಯೂ ಒಂದೇ ಏಟಿಗೆ ಆಕ್ರಮಿಸಿತು."[೧೫]

ಈ ಹಿನ್ನೆಲೆಯಲ್ಲಿ ಪರಂಪರೆ ಹಾಗೂ ಆಧುನಿಕತೆಯ ಮುಖಾಮುಖಿಯನ್ನು 'ಶಾಮಣ್ಣ' ಕಾದಂಬರಿಯಲ್ಲಿ ಗುರುತಿಸಬಹುದು. ಸಂಪ್ರದಾಯಶರಣ ವೈದಿಕ ಕುಟುಂಬವೊಂದರ ಮೂರು ತಲೆಮಾರುಗಳ ಚಿತ್ರಣ ನೀಡುವ ಕಾದಂಬರಿ ಇದು. ಇದರ ಕೇಂದ್ರಪಾತ್ರವಾದ ಶಾಮಣ್ಣ ವೇದಾಂತ ಶಿಖಾಮಣಿ ಪರಮೇಶ್ವರಶಾಸ್ತ್ರಿಗಳ ಮೊಮ್ಮಗ, ಘಂಟಾಶಾಮಾಶಾಸ್ತ್ರಿಗಳ ಮರಿಮಗ. ತಂದೆ ಅಶ್ವತ್ಥನಾರಾಯಣ ತನ್ನ ಪರಂಪರೆಗೆ ವಿರುದ್ಧವಾದ ರೀತಿಯಲ್ಲಿ ಬದುಕು ನಡೆಸಿದವನು. 'ಶಾಮಣ್ಣ' ಕಾದಂಬರಿಯಲ್ಲಿ ಅಶ್ವತ್ಥನ ಪಾತ್ರ ಪರಂಪರಾಗತ ಸಂಪ್ರದಾಯಗಳ ಧಾರ್ಮಿಕ ಆಚರಣೆಗಳ ವಿರುದ್ಧ ಬಂಡಾಯ ಸಾರಿ ಮಿಲಿಟರಿ ಸೇರುತ್ತಾನೆ ಹಾಗೂ ಮಾನವ ಸಹಜ ಪ್ರವೃತ್ತಿಗಳನ್ನು ಯಶಸ್ವಿಯಾಗಿ ಕೈಗೊಳ್ಳುತ್ತಾನೆ. ತನ್ನ ಹೆಂಡತಿಯನ್ನು ಕೂಡ ತನ್ನ ಹಾಗೆ ವೈಚಾರಿಕತೆಯನ್ನು ಬೆಳೆಸಿಕೊಳ್ಳಲು ಪ್ರೇರೇಪಿಸುತ್ತಾನೆ.

ನಂತರದ ತಲೆಮಾರಿನ ಶಾಮಣ್ಣ ತಂದೆಯ ಹಾಗೆ ವ್ಯವಸ್ಥೆಯ ಎಲ್ಲಾ ಮಿತಿಗಳನ್ನು ಸಂಪೂರ್ಣವಾಗಿ ಪ್ರತಿಭಟಿಸಲು ಆಗದೆ ಅತ್ತ ಅಜ್ಜನ ಹಾಗೆ ಸ್ವೀಕರಿಸಲೂ ಆಗದೆ ಅಸಹಾಯಕತೆ ಯನ್ನು ಪ್ರದರ್ಶಿಸುತ್ತಾನೆ.

‘ಶಾಮಣ್ಣ’ ಕಾದಂಬರಿಯಲ್ಲಿ ವೈದಿಕ ಬ್ರಾಹ್ಮಣದ ನಾಲ್ಕು ಪ್ರಾತಿನಿಧಿಕ ಪುರುಷಪಾತ್ರಗಳು ಪರಸ್ಪರ ವ್ಯತಿರಿಕ್ತವಾದ ಮನೋಧರ್ಮಗಳನ್ನು ಹೊಂದಿವೆ. ಕರ್ಮಠ ಬ್ರಾಹ್ಮಣ್ಯದ ಭದ್ರತಳಹದಿಯನ್ನು ಘಂಟಾಶಾಮಾಶಾಸ್ತ್ರಿಗಳ ಮೂಲಕ ಮಗ ಪರಮೇಶ್ವರಶಾಸ್ತ್ರಿ ತನ್ನ ಜೀವಿತದ ಅವಧಿಯವರೆಗೂ ನಂಬಿಕೊಂಡು ಜೀವನ ಸಾಗಿಸುತ್ತಾರೆ. ಇಂತಹ ಸಂದರ್ಭದಲ್ಲಿ ಶಾಸ್ತ್ರಿಗಳ ಮಗ ಅಶ್ವತ್ಥನಾರಾಯಣ ಮತ್ತು ಮೊಮ್ಮಗ ಶಾಮಣ್ಣನವರು ತೆಗೆದುಕೊಳ್ಳುವ ನಿಲುವಿನಿಂದ ಸನಾತನ ಧರ್ಮದ ಕೊಂಡಿಗಳು ಸಡಿಲಗೊಳ್ಳಲು ಆರಂಭಗೊಳ್ಳುತ್ತವೆ. ಶಾಸ್ತ್ರಿಗಳ ಬಹುದಿನಗಳ ಕನಸನ್ನು ಅಶ್ವತ್ಥ ನುಚ್ಚುನೂರು ಮಾಡಿ ಮಿಲಿಟರಿ ಸೇರಿ ಮದ್ಯ ಮಾನಿನಿಯರ ಸಹವಾಸ ಆರಂಭಿಸುವುದರ ಮೂಲಕ ಕ್ರಾಂತಿಯ ಬಿರುಗಾಳಿಯನ್ನೇ ತರುತ್ತಾನೆ. ಈ ಕಾರಣದಿಂದಲೇ ಶಾಸ್ತ್ರಿಗಳು ತಾನು ಸತ್ತಾಗ ತನ್ನ ಶವಕ್ಕೆ ಮಗನ ಬದಲಿಗೆ ಮೊಮ್ಮಗ ಶಾಮಣ್ಣ ಅಗ್ನಿ ಸಂಸ್ಕಾರ ಮಾಡಬೇಕೆಂದು ಸೂಚಿಸುತ್ತಾರೆ. ಆದರೆ ಇದೇ ಪರಮೇಶ್ವರಶಾಸ್ತ್ರಿಗಳು ತನ್ನ ಯೌವನದಲ್ಲಿ ಇಂದಿರಾಗಾಂಧಿಯವರ ಹಸ್ತಮುದ್ರಿಕೆಗೆ ಹಾಗೂ ನೃತ್ಯರಾಣಿ ತ್ರಿಪುರಸುಂದರದೇವಿಯ ಮೋಹಕ ಬಲೆಗೆ ಬಿದ್ದ ಸನ್ನಿವೇಶವನ್ನು ಜ್ಞಾಪಿಸುತ್ತಾ ಆತ್ಮಾವಲೋಕನ ಮಾಡಿಕೊಳ್ಳುತ್ತಾರೆ. ಇಂತಹ ಪರಿಸರದಲ್ಲಿ ಬೆಳೆದ ಅಶ್ವತ್ಥ ತಲತಲಾಂತರಗಳಿಂದ ಪರಮೇಶ್ವರಶಾಸ್ತ್ರಿಗಳು ಬೆಳೆಸಿಕೊಂಡು ಬಂದಿದ್ದ ವೇದಮಾರ್ಗವನ್ನು ಬಿಟ್ಟು ಜಪ, ತಪ, ಪೂಜೆ ಪುನಸ್ಕಾರಗಳನ್ನು ಖಂಡಿಸಿ ಮಿಲಿಟರಿ ಸೇರಿ ತನ್ನ ವಾಸ್ತವ್ಯವನ್ನು ಹೊಲಗೇರಿಯಲ್ಲಿ ಹೂಡಿ ಜಾತಿಯ ಚೌಕಟ್ಟನ್ನು ಸಂಪೂರ್ಣವಾಗಿ ಮೀರುತ್ತಾನೆ. ತನ್ನ ಏಕೈಕ ಪುತ್ರ ಶಾಮಣ್ಣನು ತನ್ನ ಹಾಗೆ ಜೀವನ ನಡೆಸಬೇಕೆಂದು ಅಪೇಕ್ಷಿಸುತ್ತಾನೆ. ಈ ವಿಚಾರವಾಗಿ ತಂದೆ ಮತ್ತು ಮಗನ ನಡುವೆ ಸಂಘರ್ಷವೇ ನಡೆಯುತ್ತದೆ. ಕೊನೆಯಲ್ಲಿ ಪ್ರತಿಭಟನೆಯನ್ನು ತನ್ನ ಜೀವನದ ಉಸಿರಾಗಿ ಮಾಡಿಕೊಂಡು ಹೆಂಡತಿಯ ತೊಡೆಯ ಮೇಲೆ ತಲೆ ಇಟ್ಟು ಸಾಯುವುದು ಹೃದಯಸ್ಪರ್ಶಿ ಅನುಭವವನ್ನು ನೀಡುವುದರ ಮೂಲಕ ಈ ಪಾತ್ರ ಸಾಂಪ್ರದಾಯಿಕ ಸಂಸ್ಕಾರವನ್ನು ಕಂಡುಕೊಳ್ಳುತ್ತದೆ. ಕಾದಂಬರಿಯಲ್ಲಿ ಶಾಮಣ್ಣನ ಪಾತ್ರವೂ ಕೂಡ ತಂದೆ ಮತ್ತು ತಾತರ ನಡುವಣ ಸಂಘರ್ಷಗಳಿಗೆ ತುತ್ತಾಗುತ್ತದೆ ಹಾಗೂ ತಾಯಿ ಮತ್ತು ಹೆಂಡತಿಯರ ನಡುವಿನ ವ್ರತಾಚರಣೆಗಳ ವಿಚಾರಗಳಿಂದ ಬೇಸತ್ತುಹೋಗಿರುತ್ತಾನೆ.

ಇಂತಹ ಸಂದಿಗ್ಧ ಸನ್ನಿವೇಶದಿಂದ ಹೊರಬರಲು ಆತ ಅನುಸೂಯಳನ್ನು ಆಶ್ರಯಿಸುತ್ತಾನೆ. ಆಕೆಯೇ ಎಲ್ಲವೂ ಆಗುತ್ತಾಳೆ. ಆಕೆಯೊಂದಿಗಿನ ಸಂಬಂಧಕ್ಕೆ ಬಹುಮುಖ ಅರ್ಥಗಳು ಇರುವುದನ್ನು ಕಾದಂಬರಿ ಧ್ವನಿಸುತ್ತದೆ. ಅನುಸೂಯಳು ಕಾದಂಬರಿಯ ಪ್ರಮುಖ ಪಾತ್ರವಾಗಿ ಶಾಮಣ್ಣನಿಗೆ ಪ್ರೇಯಸಿಯಾಗಿ, ಮಾರ್ಗದರ್ಶಿಯಾಗಿ ಮೊದಲಿಂದ ಕೊನೆಯವರೆಗೂ ಹೆಚ್ಚು ಆಸ್ಥೆ ವಹಿಸುತ್ತಾಳೆ. ಶಾಮಣ್ಣನ ಅನಿರೀಕ್ಷಿತ ಅಗಲುವಿಕೆಯಿಂದ ವೇಶ್ಯೆಯಾದವಳು ಅವನು ಸತ್ತ ನಂತರ ಅವನ ಶವಸಂಸ್ಕಾರವನ್ನು ಮಾಡುವ ಹೊಣೆಯನ್ನು ಹೊರುತ್ತಾಳೆ. ಬದುಕನ್ನು

ದಿಟ್ಟತನದಿಂದ ಎದುರಿಸುವ ಸಾಮರ್ಥ್ಯ ಈಕೆಗಿದೆ. ಕಾದಂಬರಿ ಲೋಕದಲ್ಲಿರುವ ಅನೇಕ ಪಾತ್ರಗಳ ಅಪೂರ್ವವಾದ ಜೀವಂತಿಕೆ ಈ ಕೃತಿಯಲ್ಲಿದೆ. ಈ ಪಾತ್ರಗಳು ಕೇವಲ ಆನುಷಂಗಿಕ ವಾಗಿ ಶಾಮಣ್ಣನ ಪಾತ್ರವನ್ನು ಪೋಷಿಸಲು ಮಾತ್ರ ಸೃಷ್ಟಿಯಾಗಿಲ್ಲ. ಬದಲಿಗೆ ಈ ಪಾತ್ರಗಳು ತಮ್ಮ ತಮ್ಮ ಪರಿಧಿಯಲ್ಲಿ ಸ್ವತಂತ್ರಜೀವಿಗಳಾಗಿ ಬರುತ್ತವೆ. ಶಾಸ್ತ್ರಿಗಳು ಶಾಮಣ್ಣ ಅಲಮೇಲು, ವರಲಕ್ಷ್ಮಿ, ಅನುಸೂಯ ಇವರು ಮಾತ್ರವಲ್ಲ ರುದ್ರನಾಯಕರಂಥ ಚಿಕ್ಕ ಪಾತ್ರಗಳೂ ಕೂಡ ತಮ್ಮ ವಿಶಿಷ್ಟವಾದ ಜೀವಂತಿಕೆಯನ್ನು ಮೆರೆಯುತ್ತವೆ. ಇದರಿಂದಾಗಿಯೇ ಈ ಕಾದಂಬರಿಯನ್ನು ರಾಜೇಂದ್ರ ಚೆನ್ನಿಯವರು ಎಪಿಕ್ ಮಾದರಿಯ ಕಾದಂಬರಿಯೆಂದು ಕರೆದಿರುವುದು ಅರ್ಥ ಪೂರ್ಣವಾಗಿದೆ. ಶಾಮಣ್ಣ ಕಾದಂಬರಿಯಲ್ಲಿ ನಿರೂಪಕನ ದೃಷ್ಟಿ ವ್ಯಂಗ್ಯದಿಂದ ಕೂಡಿದ್ದು ಯಾವುದೇ ಪಾತ್ರದ ಬಗ್ಗೆ ಆರಾಧನೆಯ ನಿಲುವು ಎಲ್ಲಿಯೂ ಕಂಡುಬರುವುದಿಲ್ಲ. ಮನುಷ್ಯರ ನಡವಳಿಕೆಯ ಬಗ್ಗೆ ಸಮಗ್ರವಾದ ಅಂದರೆ ನಾವು ಒಪ್ಪಲು ಇಷ್ಟಪಡದಿರುವ ಅಂಶಗಳು ಸೇರಿದಂತೆ ತಿಳುವಳಿಕೆಯನ್ನು ಕೊಡುವುದು ಕುಂ.ವೀ. ಅವರ ಉದ್ದೇಶವಾಗಿದೆ. ಹೀಗಾಗಿ ಅವರು ಪಾತ್ರಗಳ ದೌರ್ಬಲ್ಯಗಳ ಬಗ್ಗೆ ಕೂಡ ಅಂತಃಕರಣದಿಂದ ಬರೆಯುತ್ತಾರೆ. ಶಾಮಣ್ಣ ಕಾದಂಬರಿಯ ಎಲ್ಲಾ ಪಾತ್ರಗಳು ದುರ್ಬಲರು, ಅಪೂರ್ಣರು, ಅತೃಪ್ತರು ಆದ ಮನುಷ್ಯಜೀವಿಗಳೇ ಆಗಿದ್ದಾರೆ. ಆದರೆ ದೌರ್ಬಲ್ಯದಷ್ಟೇ ಸಹಜವಾದ ಮಾನವೀಯತೆ ಕೂಡ ಈ ಪಾತ್ರಗಳಿಗೆ ಅಲ್ಲಲ್ಲಿ ವಿಶೇಷವಾದ ಹೊಳಪನ್ನು ತಂದುಕೊಡುತ್ತದೆ. ಶಾಮಣ್ಣನು ಸೇರಿದಂತೆ ಅನೇಕ ಪಾತ್ರಗಳು ತಮಗೆ ಅರಿವಿಲ್ಲದೆ ಬದುಕಿನ ಪರವಾದ ನಿರ್ಧಾರವನ್ನು ಕೈಗೊಳ್ಳುತ್ತಾರೆ. ಇವರ ಇಂಥ ನಡವಳಿಕೆ ಅನಿರೀಕ್ಷಿತವಾಗಿರುತ್ತದೆ. ಸಾಂಪ್ರದಾಯಿಕ ಕಟ್ಟಳೆಗಳನ್ನು ಮುರಿಯುವ ಮಟ್ಟದಲ್ಲಿಯೂ ಇರುತ್ತದೆ. ಇಷ್ಟೇ ಅನಿರೀಕ್ಷಿತವಾಗಿ ಈ ಪಾತ್ರಗಳು ವಿನಾಶಕಾರಿಯಾದ ಆತ್ಮವಂಚನೆಯ ಕೆಲಸಗಳನ್ನು ಮಾಡುತ್ತವೆ. ಈ ಎರಡೂ ಬಗೆಯ ನಡವಳಿಕೆಗಳನ್ನು ನಿರೂಪಕ ವಿಶ್ಲೇಷಣಾತ್ಮಕವಾಗಿ ಸಮಚಿತ್ತದಿಂದ ನೋಡುತ್ತ ಮನುಷ್ಯರ ಬಗ್ಗೆ ಆರೋಗ್ಯಕರವಾದ ಕುತೂಹಲ ವನ್ನು ತೋರುತ್ತಾ ಪಾತ್ರಗಳ ಬದುಕಿನ ಬಗ್ಗೆ ಸುಲಭವಾದ ತೀರ್ಮಾನಗಳನ್ನು ಮಾಡುವುದು ಅಸಾಧ್ಯವೆನ್ನುವ ನಂಬಿಕೆಯಿದೆ. ಇದನ್ನೇ ರಾಜೇಂದ್ರ ಚೆನ್ನಿಯವರು ಎಪಿಕ್ ಬರವಣಿಗೆಯ ಹಿಂದಿರುವ ದೃಷ್ಟಿಕೋನವೆಂದು ಕರೆದಿದ್ದಾರೆ. ಒಟ್ಟಾರೆ ಕುಂ.ವೀ. ಅವರು ಜೀವನವನ್ನು ನೋಡಿ ಅದನ್ನು ಗ್ರಹಿಸಿ ಚಿತ್ರಿಸುತ್ತಿರುವರೆಂಬುದಕ್ಕೆ ಇಲ್ಲಿಯ ಪಾತ್ರಗಳೇ ಸಾಕ್ಷಿ. ಈತನಕ ಕುಂ.ವೀ. ಅವರ ಯಾವುದೇ ಕಥೆ–ಕಾದಂಬರಿಗಳಲ್ಲಿ ಇಲ್ಲದ ವಸ್ತುರಚನೆ ಮತ್ತು ಪಾತ್ರಸೃಷ್ಟಿ ಶಾಮಣ್ಣ ಕಾದಂಬರಿಯಲ್ಲಿದೆ. ಆದ್ದರಿಂದಲೇ ಇದನ್ನು ಕೆಲವು ವಿಮರ್ಶಕರು ಪ್ರಯೋಗಶೀಲ ಕಾದಂಬರಿ ಎಂದಿದ್ದಾರೆ.

**ರಾಜಸತ್ತೆ, ಬ್ರಿಟಿಷ್ ಪ್ರಭುತ್ವ ಮತ್ತು ಜನಸತ್ತೆಯ ಮುಖಾಮುಖಿ 'ಅರಮನೆ' ಕಾದಂಬರಿ**

ಅರಮನೆ ಕಾದಂಬರಿಯ ಅಧ್ಯಯನದ ಬಗ್ಗೆ ತಿಳಿಯುವ ಮುನ್ನ ವಾಸ್ತವತಾವಾದದ ಬಗ್ಗೆ ತಿಳಿಯುವುದು ಸೂಕ್ತ. ವಾಸ್ತವತಾವಾದ ಯಾವತ್ತೂ ಮೂರ್ತಜಗತ್ತಿನ ಮೂರ್ತವಿವರಗಳ ಅಂತರ್‌ಸಂದರ್ಭಗಳನ್ನು ಮುಖ್ಯವಾಗಿ ಪರಿಗಣಿಸುತ್ತದೆ. ಹೀಗಾಗಿ ವಸ್ತುನಿಷ್ಠತೆ ಇದರ ಪ್ರಧಾನ ಕಾಳಜಿಯಾಗುತ್ತದೆ. ವೈಯಕ್ತಿಕ ನಿಲುವುಗಳಿಗಿಂತ ಹೆಚ್ಚಾಗಿ ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಸಂರಚನೆಗಳು ಮುಖ್ಯವಾಗುತ್ತವೆ. ಇಲ್ಲಿ ಲೇಖಕರ ವ್ಯಕ್ತಿ ವಿಶಿಷ್ಟತೆ ಏನಿದ್ದರೂ ಈ ಸಂರಚನೆಗಳನ್ನು ಅವರು ಎಷ್ಟು ಸಮಗ್ರವಾಗಿ ಮತ್ತು ಅಧಿಕೃತವಾಗಿ ಗ್ರಹಿಸುತ್ತಾರೆ ಎಂಬುದರಲ್ಲಿದೆ. ವಾಸ್ತವವಾದಿ ಲೇಖಕರಿಗಿರುವ ದೊಡ್ಡ ಸವಾಲು ಕೂಡ ಇದೆ. ಅಷ್ಟು ಶ್ರೇಷ್ಠರಲ್ಲದ ಲೇಖಕರು ಸಾಮಾಜಿಕ ಸ್ಥಿತಿಗಳ ಸಾಮಾನ್ಯೀಕೃತ ರೂಪಗಳನ್ನಷ್ಟೇ ಚಿತ್ರಿಸಿದ್ದಾರೆ. ಶ್ರೇಷ್ಠ ಬರಹಗಾರರು ಇನ್ನೂ ಒಳಹೊಕ್ಕು ಮಾನವೀಯ ವೈಶಿಷ್ಟ್ಯಗಳನ್ನು ಮನುಷ್ಯ ಸಮಾಜದ ಬಹುರೂಪತೆಯನ್ನು ತಡವಿ ನೋಡುತ್ತಾರೆ. ಒಬ್ಬ ಶ್ರೇಷ್ಠ ವಾಸ್ತವವತಾವಾದಿ ಬರಹಗಾರ ಒಬ್ಬ ತತ್ವಜ್ಞಾನಿಗಿಂತ ಹೆಚ್ಚಿನದನ್ನು ಸಾಧಿಸಬಲ್ಲ ಕ್ಷೇತ್ರ ಕೂಡ ಇದೆ. ಶುದ್ಧ ಚಿಂತನೆಗೆ ವಾಸ್ತವ ವನ್ನು ಸಮಗ್ರವಾಗಿ ಗ್ರಹಿಸುವ ಶಕ್ತಿ ಇಲ್ಲ ಎಂದು ಲುಕಾಚ್ಸ್ ತಿಳಿಸುತ್ತಾನೆ. ಅವನ ಪ್ರಕಾರ ಮೂರ್ತವಾದದ್ದರ ಮೂಲಕವೇ ಇದು ಸಾಧ್ಯ. ಕಥನಕಲೆ(ಸಾಹಿತ್ಯ) ಮಾತ್ರವೇ ವಾಸ್ತವವನ್ನು ಅಖಂಡವಾಗಿ ಹಿಡಿಯಬಲ್ಲದು. ವಾಸ್ತವತಾವಾದಿ ಬರವಣಿಗೆಯ ಬಹುಪಾಲು ಕಥಾಸಾಹಿತ್ಯ ದಲ್ಲಿಯೇ ಕಂಡುಬರುವುದು ಈ ಕಾರಣದಿಂದಲೇ. ಜಗತ್ತಿನ ಶ್ರೇಷ್ಠ ವಾಸ್ತವತಾವಾದಿ ಬರಹಗಾರರಲ್ಲಿ ಅತಿ ಹೆಚ್ಚಿನ ಸಂಖ್ಯೆಯವರು ಕಾದಂಬರಿಕಾರರೇ. ಆದ್ದರಿಂದಲೇ ಒಂದು ವೈಚಾರಿಕ ಕಲ್ಪನೆಯಾಗಿ ಮಾತ್ರ ಯುರೋಪಿನಲ್ಲಿ ಪ್ರಚಲಿತವಾಗಿದ್ದ ವಾಸ್ತವತಾವಾದವು ಸಾಹಿತ್ಯ ಮತ್ತು ವಿಮರ್ಶೆಗಳ ಸಂದರ್ಭದಲ್ಲಿ ಸೃಜನಶೀಲವಾಗಲು ಹದಿನೆಂಟನೆಯ ಶತಮಾನದ ಪ್ರಾರಂಭದವರೆಗೂ ಕಾಯಬೇಕಾಯಿತು.

ವಿಜ್ಞಾನ ಮತ್ತು ತಂತ್ರಜ್ಞಾನಗಳ ಬೆಳವಣಿಗೆಯಿಂದ ಭೌತಜಗತ್ತಿನ ಮೇಲೆ ಮನುಷ್ಯನ ನಿಯಂತ್ರಣ ಸ್ಪಷ್ಟವೂ ಖಚಿತವೂ ಅಧಿಕೃತವೂ ಆಗುತ್ತಿದ್ದಂತೆ ಅದನ್ನು ಅರಿಯುವ ವಿಶ್ಲೇಷಿಸುವ ಮತ್ತು ವ್ಯಾಖ್ಯಾನಿಸುವ ರೀತಿಗಳೂ ಬದಲಾದವು. ವಾಸ್ತವತಾವಾದೀ ಲೇಖಕರ ಕಥೆ, ಕಾದಂಬರಿಗಳಲ್ಲಿ ಇಹಲೋಕ ತನ್ನಲ್ಲಿ ವೈವಿಧ್ಯಗಳಲ್ಲಿ ಕಾಣಿಸಿಕೊಳ್ಳುತ್ತಿದ್ದಂತೆ ಸಾಹಿತ್ಯದ ಅಪೇಕ್ಷೆಗಳೂ ಬೇರೆಯಾದವು. ಸಾಮಾಜಿಕ ಮನುಷ್ಯನ ಆಶೋತ್ತರಗಳು ಸಾಹಿತ್ಯ ಕೃತಿಗಳ ಪ್ರಬಂಧಧ್ವನಿಗಳಾಗುತ್ತಿದ್ದಂತೆ ಸಾಹಿತ್ಯ ವಿಮರ್ಶೆಯ ಸ್ವರೂಪ, ಉದ್ದೇಶಗಳೂ ಬೇರೆಯಾಗ ಬೇಕಾಯಿತು. ವಿಮರ್ಶಕ ಒಂದು ರೀತಿಯಲ್ಲಿ ತತ್ವಜ್ಞಾನಿಯ ಪಾತ್ರವನ್ನು ವಹಿಸಬೇಕಾಯಿತು. ಬಾಹ್ಯಲೋಕವನ್ನು ತತ್ವಜ್ಞಾನಿ ವಿವರಿಸಿ ವ್ಯಾಖ್ಯಾನಿಸುವಂತೆ ವಿಮರ್ಶಕ ಸಾಹಿತ್ಯ ಕೃತಿಗಳ

ಒಳಲೋಕಗಳ ಸಂರಚನೆಗಳನ್ನು ವಿವರಿಸಿ ವ್ಯಾಖ್ಯಾನಿಸಬೇಕಾಯಿತು. ಕಾವ್ಯಮಿಮಾಂಸೆಗೆ ಪೂರಕವಾಗಿ ಕಾದಂಬರಿ ಮೀಮಾಂಸೆಯೊಂದನ್ನು ರೂಪಿಸಿಕೊಳ್ಳಬೇಕಾಯಿತು. ಕಾವ್ಯಮಿಮಾಂಸೆಯ ಎಲ್ಲಾ ಪುರಾತನ ತತ್ವಗಳೂ ಹೊಸ ಸಾಹಿತ್ಯ ಪ್ರಕಾರವಾದ ಕಾದಂಬರಿಗೆ ನೇರವಾಗಿ ಮತ್ತು ಸರಳವಾಗಿ ಅನ್ವಯವಾಗುವ ಸಂದರ್ಭವನ್ನು ಗ್ರಹಿಸಿದ ವಿಮರ್ಶಕ ಹೊಸ ಕಾದಂಬರಿ ಮೀಮಾಂಸಕನೂ ಆಗಬೇಕಾಯಿತು. ಜಾರ್ಜ್ ಲೂಕಾಚ್ಸ್‌ನಿಂದ ಒಬ್ಬ ಸಾಹಿತ್ಯ ವಿಮರ್ಶಕ ಸ್ವತಃ ಓರ್ವ ದೊಡ್ಡ ಚಿಂತಕನೂ ಹೌದೆಂಬುದನ್ನು ನಾವು ಮರೆಯುವಂತಿಲ್ಲ.

ಕೈಗಾರಿಕಾ ಕ್ರಾಂತಿಯ ನಂತರ ಯುರೋಪಿನ ವಾಸ್ತವ ಬದಲಾಗುತ್ತಿದ್ದಂತೆ ಆ ಕಾಲ ದೇಶಗಳ ಪರಿವರ್ತನೆಯ ಸಂದರ್ಭದಲ್ಲಿ ವಾಸ್ತವತಾವಾದಿ ಪರಿಕಲ್ಪನೆ ಹೆಚ್ಚಿನ ನಿರ್ದಿಷ್ಟತೆ ಮತ್ತು ನಿರ್ಣಾಯಕ ನೆಲೆಗಳನ್ನು ತಲುಪಿತು. ಯುರೋಪಿನ ಬೇರೆ ಬೇರೆ ರಾಜ್ಯಗಳ ಪ್ರಾದೇಶಿಕ ಸತ್ವವನ್ನು ಹೀರಿಕೊಂಡು ಬಲಿಯಿತು. ಹಲವು ಶತಮಾನಗಳ ಕಾಲ ನಿಂತ ನೀರಾಗಿದ್ದ ಯುರೋಪಿನ ಬದುಕು ಹೊಸ ವಾಸ್ತವವೊಂದರತ್ತ ಹೊರಳಿಕೊಳ್ಳುತ್ತಿದ್ದಂತೆ ವಾಸ್ತವತಾವಾದಿ ಪರಿಕಲ್ಪನೆ, ಸಾಹಿತ್ಯ ಕೃತಿಗಳಲ್ಲಿ ಮತ್ತು ವಿಮರ್ಶೆಗಳಲ್ಲಿ ಹೆಚ್ಚು ನಿಚ್ಚಳವಾಗಿ ಮೂಡಿಬಂದಿತು. ಏಶಿಯಾ, ಆಫ್ರಿಕಾ ಖಂಡಗಳಿಗೆ ವಸಾಹತುಶಾಹಿ ಪ್ರವೇಶದ ಸಂದರ್ಭದಲ್ಲಿ ವಾಸ್ತವತಾವಾದ ಬೇರೊಂದು ನೆಲೆಯಲ್ಲಿ ಅಲ್ಲಿನ ಬೌದ್ಧಿಕ ಪ್ರಪಂಚವನ್ನು ಪ್ರವೇಶಿಸಿತು.

ಕಳೆದ ಶತಮಾನದ ಆದಿಭಾಗದಲ್ಲಿಯೇ ಅನೇಕ ಸಾಹಿತಿಗಳಿಗೆ ವಾಸ್ತವತಾವಾದ ತೀವ್ರ ಅತೃಪ್ತಿಯನ್ನುಂಟು ಮಾಡಲು ಪ್ರಾರಂಭಿಸಿದುದು ಇಂದು ಇತಿಹಾಸ. ಈ ಅತೃಪ್ತಿಗೆ ಕಾರಣ ವಾಸ್ತವತಾವಾದ ಕಟ್ಟಿಕೊಡುವ 'ವಾಸ್ತವ'ದ ಸೀಮಿತ ಚೌಕಟ್ಟು ಮತ್ತು ಆ ಚೌಕಟ್ಟಿನಿಂದ ಹೊರ ಗುಳಿಯುವ ಬದುಕಿನ ಅನೇಕ ಹಾಗೂ ಬಹುಮುಖ ಸಂಗತಿಗಳು ಸೂಕ್ಷ್ಮಮಾನವ ಸಂಬಂಧಗಳು ಮತ್ತು ಸಂಕೀರ್ಣ ಭಾವನೆಗಳು. ಮಾನವನಿಗೆ ಪ್ರಾಣಿ ಪಕ್ಷಿ ಕ್ರಿಮಿಕೀಟಗಳೊಡನೆ ಇರುವ ನಿಕಟ ಸಂಪರ್ಕ ಮತ್ತು ಸಹವಾಸ, ಮುಖ್ಯವಾಗಿ ಜನನ ಮರಣಗಳ ರಹಸ್ಯ ಮತ್ತು ಬದುಕಿನಲ್ಲಿ ದೇವರು ಧರ್ಮ–ಧಾರ್ಮಿಕಾಚರಣೆಗಳು ಇವುಗಳಿಗಿರುವ ಸ್ಥಾನ ಇವೆಲ್ಲವೂ ಕಾರ್ಯ ಕಾರಣೀಕರ್ತ ಹಾಗೂ ವೈಜ್ಞಾನಿಕ ವಿಶ್ಲೇಷಣೆಯನ್ನು ಮೀರಿದವುಗಳು. ಆದ್ದರಿಂದ ವಾಸ್ತವತಾದದ ಮಿತಿಗಳನ್ನು ಮೀರಲು 'ವಾಸ್ತವ' ಗ್ರಹಿಕೆಯನ್ನೇ ಹೆಚ್ಚು ವಿಶಾಲಗೊಳಿಸಲು ಸಾಹಿತಿಗಳು ಅನೇಕ ಸಾಧ್ಯ ಮಾರ್ಗಗಳನ್ನು ಶೋಧಿಸಲು ಉದ್ಯುಕ್ತರಾದರು. ಪರಿಣಾಮತಃ ಸಾಂಕೇತಿಕ(symbolism) ಅನ್ಯಕೃತಿ ಸೂಚನೆಗಳು(illusions), ಅತೀಂದ್ರಿಯವಾದ(transecdentalism), ಅತಿವಾಸ್ತವವಾದ(surrealism) ವಾಸ್ತವಭ್ರಮಾವಾದ(Magic realism) ಇತ್ಯಾದಿ ಗ್ರಹಿಕೆಯ ಕ್ರಮಗಳು ಮತ್ತು ಕಥನ ತಂತ್ರಗಳು ಪಾಶ್ಚಿಮಾತ್ಯ ಸಾಹಿತ್ಯಕ್ಷೇತ್ರವನ್ನು ಪ್ರವೇಶಿಸಿದವು.

ಕನ್ನಡ ಸಾಹಿತ್ಯದಲ್ಲಿಯೂ ಇಂತಹದೇ ಪರಿಸ್ಥಿತಿ ಕಳೆದ ಶತಮಾನದ ಕೊನೆಯ ಭಾಗದಲ್ಲಿ ಕಂಡುಬಂದಿತು. ಇಂದಿರಾಬಾಯಿ ಕಾದಂಬರಿಯಿಂದ ೧೮೯೯ರ ಕನ್ನಡ ಸಾಹಿತ್ಯಕ್ಷೇತ್ರವನ್ನು ಪ್ರವೇಶಿಸಿದ ವಾಸ್ತವತಾವಾದ ನಂತರದ ಐದಾರು ದಶಕಗಳಲ್ಲಿಯೇ ಸಾಹಿತಿಗಳಿಗೆ ಯಾಂತ್ರಿಕವಾಗಿ ಕಾಣಲಾರಂಭಿಸಿತು(ಹಾಗೆ ನೋಡಿದರೆ, ಪ್ರಗತಿಶೀಲ ಲೇಖಕರನ್ನು ಹೊರತುಪಡಿಸಿದರೆ ನವೋದಯ–ನವ್ಯ–ನವೋತ್ತರ ಕನ್ನಡ ಲೇಖಕರಲ್ಲಿ ಯಾರೂ ಕಟುವಾಸ್ತವವಾದಿಗಲಾಗಿರಲಿಲ್ಲ. ಕುವೆಂಪು ಅವರ ಮಲೆಗಳಲ್ಲಿ ಮದುಮಗಳು ಕಾದಂಬರಿಯೇ ಅನೇಕ ಸಂದರ್ಭಗಳಲ್ಲಿ ವಾಸ್ತವದ ಗ್ರಹಿಕೆಯನ್ನು ಬದಲಾಯಿಸುತ್ತದೆ. ಕಾದಂಬರಿಯ ಜಗತ್ತಿನಲ್ಲಿ ಮೇಗರವಳ್ಳಿಯಲ್ಲಾಗುವ ಮತಾಂತದ ಪ್ರಯತ್ನ ದೂರದ ಸೇಂಟ್ ಲಾರೆನ್ಸ್ ದ್ವೀಪದಲ್ಲಿದ್ದ ಸ್ವಾಮಿ ವಿವೇಕಾನಂದರಿಗೆ ಕೂಡಲೇ ಅರಿವಾಗಿ ಅವರು ಗಟ್ಟಿಯಾಗಿ ನಗುವುದು 'ವಾಸ್ತವವೇ'. ಹೆಚ್ಚಿನ ಕನ್ನಡ ಲೇಖಕರು ಪಶ್ಚಿಮದ ವಾಸ್ತವತಾವಾದವನ್ನು 'ಸುಧಾರಣವಾದ'ವನ್ನಾಗಿ ರೂಪಾಂತರಿಸಿದ್ದರು). ಕಳೆದ ಶತಮಾನದ ಉತ್ತರಾರ್ಧದಲ್ಲಿ ಹೊರಬಂದ ಹೆಚ್ಚಿನ ಕೃತಿಗಳು ಪ್ರಭುಶಂಕರ ಅವರ 'ಬೆಳಗು', ಕಾಮರೂಪಿ ಅವರ 'ಕುದುರೆ ಮೊಟ್ಟೆ', ಗಿರಿ ಅವರ ಗತಿ ಸ್ಥಿತಿ ತೇಜಸ್ವಿಯವರ 'ಜುಗಾರಿಕ್ರಾಸ್', ಚಂದ್ರಶೇಖರ ಕಂಬಾರರ 'ಚಕೋರಿ' ಇತ್ಯಾದಿ ಕೃತಿಗಳೆಲ್ಲವೂ ವಾಸ್ತವತಾವಾದದ ಮಿತಿಗಳನ್ನು ಮೀರಲು ಪ್ರಯತ್ನಿಸುವಂತಹವುಗಳೇ. ಈ ದಿಕ್ಕಿನಲ್ಲಿ ೧೯೮೦ರಲ್ಲಿ ಹೊರಬಂದ ದೇವನೂರ ಮಹಾದೇವರ 'ಕುಸುಮಬಾಲೆ' ಒಂದು ಮಹತ್ವದ ಮೈಲಿಗಲ್ಲು. ಸಮಕಾಲೀನತೆಗೆ ಬದ್ಧವಾಗಿದ್ದು ಪುರಾಣ ಐತಿಹ್ಯಗಳ ಜಾನಪದ ಕಥನತಂತ್ರಗಳು, ಇವೆಲ್ಲವುಗಳನ್ನು ಅದ್ಭುತವಾಗಿ ದುಡಿಸಿಕೊಳ್ಳುವ ಕೃತಿ ಕುಂ.ವೀ. ಅವರ 'ಅರಮನೆ' ಇದೇ ದಾರಿಯಲ್ಲಿ ಇನ್ನೂ ಹೆಚ್ಚು ಮಹತ್ವಾಕಾಂಕ್ಷೆಯಿಂದ ಸಾಗುವ ಬೃಹತ್ಕೃತಿ.

ಮಲೆಮಹದೇಶ್ವರ, ಮಂಟೇಸ್ವಾಮಿ, ಮೈಲಾರಲಿಂಗ, ಪಲ್ನಾಟಿ ವೀರುಲಕಥಾ ಇತ್ಯಾದಿ ಮೌಖಿಕ ಮಹಾಕಥನಗಳ ವ್ಯಾಪ್ತಿ ಮತ್ತು ಅವು ನಿರ್ವಹಿಸುವ ಕಾರ್ಯಗಳು ಅದ್ಭುತ. ಈ ಮಹಾಕಥನಗಳು ನಿರಾಯಾಸವಾಗಿ ಅಯಾಯಾ 'ಸಮುದಾಯಗಳ' ಜನಾಂಗಗಳ ಇತಿಹಾಸ, ಧಾರ್ಮಿಕ ನೈತಿಕ ಸಂಹಿತೆ ಸಾಂಸ್ಕೃತಿಕ ದಾಖಲೆ ಮತ್ತು ಶೃಂಗಾರ–ವೀರ–ಕರುಣಾದಿ ರಸಗಳನ್ನೊಳ ಗೊಳ್ಳುವ ಸಾಹಿತ್ಯಕ ಕಥನಗಳು ಇವೆಲ್ಲವೂ ಆಗುತ್ತದೆ. ಇಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದ ಸಂಗತಿಯೆಂದರೆ ಇವುಗಳ ನಿರೂಪಣಾಧಾಟಿ ದೇವದೇವತೆಗಳ ಮಹಾತ್ಕಾರ್ಯಗಳಾಗಲಿ ಅವರ ನಡುವಿನ ಕ್ಷುಲ್ಲಕ ಕಲಹಗಳಾಗಲಿ, ಅತಿ ಮಾನವರ ಸಾಹಸಕೃತ್ಯಗಳಾಗಲಿ ಹುಲುಮಾನವರ ಹಾಸ್ಯಾಸ್ಪದ ದೌರ್ಬಲ್ಯಗಳಾಗಲಿ, ಮಾನವಜಗತ್ತಿನ ನೋವುನಲಿವುಗಳಾಗಲಿ ಪ್ರಾಣಿ–ಕ್ರಿಮಿ ಕೀಟಗಳ ಕಷ್ಟಕಾರ್ಪಣ್ಯಗಳಾಗಲಿ, ಒಂದೇ ಸಮಾನಧಾಟಿಯಲ್ಲಿ ಈ ಕಾವ್ಯಗಳ ನಿರೂಪಣೆ ಪ್ರಾರಂಭದಿಂದ ಮುಕ್ತಾಯದವರೆಗೂ ಸಾಗುತ್ತದೆ. ವಿಶ್ವಸೃಷ್ಟಿಯಿಂದ ಪ್ರಾರಂಭವಾಗುವ ಈ

ಕಾವ್ಯಗಳ ಆಕೃತಿ ಮುಕ್ತವಾಗಿರುತ್ತದೆ. ಪೀಳಿಗೆಯಿಂದ ಪೀಳಿಗೆಗೆ ಗಾಯಕನಿಂದ ಗಾಯಕನಿಗೆ ಈ ಕಾವ್ಯಗಳು ಬೆಳೆಯುತ್ತವೆ. ಬದಲಾಗುತ್ತವೆ. ಕುಂ.ವೀ. ಅವರ ಅರಮನೆ ಕಾದಂಬರಿ ಮಾದರಿ ಈ ಬಗೆಯ ಮೌಖಿಕ ಮಹಾ ಕಾವ್ಯಗಳ ರೀತಿಯಲ್ಲಿದೆ. ಆ ಕಾರಣದಿಂದಲೇ ಅವರು ತಮ್ಮ ಕೃತಿಯನ್ನು 'ಐತಿಹಾಸಿಕ, ಪೌರಾಣಿಕ, ಸಾಮಾಜಿಕ ಕಥಾನಕ' ಎಂದು ನಿರ್ದೇಶಿಸುತ್ತಾರೆ.

**ಅರಮನೆ ಕಾದಂಬರಿಯ ಚಾರಿತ್ರಿಕ ಆಯಾಮ**

ಇತಿಹಾಸಕಾರರು ದಾಖಲಿಸುವಂತೆ, ಸರ್ ಥಾಮಸ್ ಮನ್ರೋ ಒಬ್ಬ ಅಪರೂಪದ ಅಸಾಧಾರಣ ವ್ಯಕ್ತಿ. ಕಾರನ್‌ವಾಲಿಸ್‌ನ ಸಮಕಾಲೀನನಾಗಿದ್ದ ಮತ್ತು ಟಿಪ್ಪುವಿನ ವಿರುದ್ಧ ಕೊನೆಯ ಮೈಸೂರು ಯುದ್ಧದಲ್ಲಿ ಭಾಗವಹಿಸಿದ್ದ ಮನ್ರೋ ಭಾರತೀಯ ಸಂಸ್ಕೃತಿಯನ್ನು, ಭಾರತೀಯ ಭಾಷೆಗಳನ್ನು, ಭಾರತದ ಜನಸಾಮಾನ್ಯರನ್ನು ಪ್ರೀತಿಸಿದಷ್ಟು ಅಂದಿನ ಕಾಲದ ಮತ್ತಾವ ಬ್ರಿಟಿಷ್ ಅಧಿಕಾರಿಯೂ ಭಾರತೀಯರನ್ನು ಪ್ರೀತಿಸಲಿಲ್ಲ. ಅರಮನೆ ಕಾದಂಬರಿ ಈ ಅಧಿಕಾರಿಯ ವ್ಯಕ್ತಿತ್ವ, ಸಾಧನೆ ಸಂಘರ್ಷಗಳನ್ನು ಮನೋಜ್ಞವಾಗಿ ಚಿತ್ರಿಸುತ್ತದೆ.

ಈ ಕೃತಿಯಲ್ಲಿ ಕೇಂದ್ರ ಪಾತ್ರವೆಂದು ಕರೆಯಬಹುದಾದ್ದು ಯಾವುದಾದರೂ ಇದ್ದರೆ ಅದು ಮನ್ರೋ ಪಾತ್ರ. ಮನ್ರೋ ಬ್ರಿಟಿಷ್ ವಸಾಹತುಶಾಹಿಯ 'ಪಿತೃಸಮಾನ' ಮುಖವನ್ನು ಪ್ರತಿನಿಧಿಸುತ್ತಾನೆ. ಈ ಮುಖವನ್ನು ಕೃತಿ ಆಪ್ತವಾಗಿ, ವಿವರವಾಗಿ ದರ್ಶಿಸುತ್ತದೆ. ಬಿಡುವಿಲ್ಲದೆ ಸದಾ ಸಂಚರಿಸುತ್ತಿದ್ದ ದುಡಿಯುತ್ತಿದ್ದ ಮನ್ರೋ, ಸಣ್ಣ ಪುಟ್ಟ ರಾಜ್ಯ ಪಾಳೆಯಪಟ್ಟುಗಳಲ್ಲೂ ಆಯಾಯ ಪಾಳೆಯಗಾರಿಂದ ಜಮೀನ್ದಾರರಿಂದ ಭೂಮಿಯನ್ನು ವಶಪಡಿಸಿಕೊಂಡು ಸ್ಥಳೀಯ ಭೂಮಿಹೀನರಿಗೆ ಹಂಚುತ್ತಿದ್ದನು. ತನ್ನ ಕೈಕೆಳಗಿನ ಬ್ರಿಟಿಷ್ ಅಧಿಕಾರಿಗಳಿಗೆ ಪ್ರಾಂತೀಯ ಭಾಷೆ ಸಂಸ್ಕೃತಿಗಳನ್ನು ಕಲಿಯಬೇಕೆಂದು ನಿರ್ಬಂಧಿಸುತ್ತಿದ್ದನು. ಪ್ರತಿ ಗ್ರಾಮದಲ್ಲಿಯೂ ಕನ್ನಡ, ತೆಲುಗು ಇತ್ಯಾದಿ ಸ್ಥಳೀಯ ಭಾಷೆಗಳ ಕಲಿಕೆಗೆ ಶಾಲೆಗಳನ್ನು ತೆರೆಯುತ್ತಿದ್ದನು. ಮನ್ರೋನ ಇವೆಲ್ಲಾ ಗುಣಗಳನ್ನು ಕೃತಿ ವಿವರವಾಗಿ ದಾಖಲಿಸುತ್ತದೆ. ಮನ್ರೋ ಸತ್ತಾಗ ಹಳ್ಳಿಯ ಅಶಿಕ್ಷಿತ ಮುದುಕಿಯೊಬ್ಬಳು ಅವನ ಇಡೀ ಬದುಕಿನ ಸಾಧನೆಗಳನ್ನು ಹೀಗೆ ಗುರುತಿಸುತ್ತಾಳೆ. 'ಮುದ್ಯೋರಿಗೆ ಮಗನಾಗಿದ್ದನಲ್ಲಾ ದಿಕ್ಕು ದೆಸೆ ಇಲ್ಲದವಕ್ಕೆ ತಂದೆಯಾಗಿದ್ದನಲ್ಲಾ... ವುಳುಮೆ ಮಾಡಲಕ ಭೂಮಿ ಸಾಮಿ ಕೊಟ್ಟ, ದುಡಿಯೋ ಕಯ್ಯಗಳಿಗೆ ಕಸುವು ಕೊಟ್ಟ... ಊರೂರಿಗೊಂದು ಭಾವಿ ತೋಡಿಸಿ ಕುಡಿಯೋದಕ್ಕೆ ನೀರು ಕೊಟ್ಟ, ಮರಗಿಡ ನೆಟ್ಟು ಕುಂಡರಲಕ ನೆಳ್ಳು ಕೊಟ್ಟ, ಈ ಕಾರಣದಿಂದಲೇ ಅವನು ಜನಸಾಮಾನ್ಯರ ಹೃದಯದಲ್ಲಿ 'ಮಂಥೋಳ ಸಾಹೇಬ', ಮಂಡ್ರಪ್ಪದೊರೆ', ಮಂಡ್ರಯ್ಯ ದೇವರು ಇತ್ಯಾದಿ ಹೆಸರುಗಳಿಂದ ಶಾಶ್ವತವಾಗಿ ನೆಲೆಸಿದ.

ಕೃತಿಯಲ್ಲಿ ವಸಾಹತುಶಾಹಿಯ ಒಂದು ಮುಖವನ್ನು ಮನ್ರೋ ಪ್ರತಿನಿಧಿಸಿದರೆ. ಎಡ್‌ವರ್ಡ್ ಹೆನ್ರಿ ಥಾಕರೆ, ರೆಬೇರೊ, ಪಾದ್ರಿಗಳು ಇತ್ಯಾದಿ ಅದರ ಇನ್ನೊಂದು ಮುಖವನ್ನು ಪ್ರತಿನಿಧಿಸುತ್ತಾರೆ. ಅವರಿಗೆಲ್ಲಾ ಇರುವ ಏಕಮಾತ್ರ ಗುರಿಯೆಂದರೆ ಹೆಚ್ಚು ಹೆಚ್ಚು ಭಾಗಗಳಲ್ಲಿ ಬ್ರಿಟಿಷ್ ಅಧಿಕಾರವನ್ನು ವಿಸ್ತರಿಸುವುದು ಮತ್ತು ಆ ಮೂಲಕ ಉನ್ನತೋನ್ನತ ಪದವಿಗಳನ್ನು ಪಡೆಯುವುದು ಅಥವಾ ಹೆಚ್ಚು ಹೆಚ್ಚು ಜನರನ್ನು ಕ್ರಿಶ್ಚಿಯನ್ ಧರ್ಮಕ್ಕೆ ಪರಿವರ್ತಿಸುವುದು. ಮತ್ತೆ ಕೆಲವು ಅಧಿಕಾರಿಗಳಿಗೆ ಭಾರತವೆಂದರೆ ಒಂದು ಸುಲಭವಾಗಿ ಕೊಳ್ಳೆ ಹೊಡೆಯಬಹುದಾದ ಅನಂತಭಂಡಾರ. 'ತಮಗೆ ಮಾಂತ್ರಿಕ ಸಗುತಿಯಿದ್ದರೆ ಯೀ ಪಟ್ಟಣದ ಮಂದಿಯನ್ನು ಪುಟ್ಟಪುಟ್ಟ ಗೊಂಬಿಗಳನ್ನಾಗಿ ಮಾಡಬೌದಿತ್ತಲ್ಲ... ಬೆವರು ವಾಸನೆ ಸಹಿತ ಯಿವರನ್ನು ತಮ್ಮ ಬ್ರಿಟನ್ನಿಗೋ ಫ್ರಾನ್ಸಿಗೋ ಸಾಗಾಣಿಕೆ ಮಾಡಿ ಅಪಾರ ಹಣ ಸಂಪಾದಿಸಬಹುದಿತ್ತಲ್ಲ ಎಂದು ಯಸಲೆ, ಬಿಸಲೆ ಮುಂತಾದವರು ವಿಷಾದಿಸುತ್ತಾರೆ.

ಈ ಸಂದರ್ಭದಲ್ಲಿ ಅರಮನೆ ಕಟ್ಟಿಕೊಡುವ ಅತಿಮುಖ್ಯ ಚಾರಿತ್ರಿಕ ಅಂಶವೆಂದರೆ ೧೮-೧೯ನೆಯ ಶತಮಾನಗಳಲ್ಲಿ ಹೇಗೆ ಮತ್ತು ಏಕೆ ವಸಾಹತುಶಾಹಿ ಇಡೀ ಭಾರತವನ್ನು ಸುಲಭವಾಗಿ ತನ್ನ ತೆಕ್ಕೆಯೊಳಗೆ ತೆಗೆದುಕೊಳ್ಳಲು ಸಾಧ್ಯವಾಯಿತು ಎಂಬುದು ಅಂದಿನ ನೂರಾರು ರಾಜ-ಮಹಾರಾಜರ ಸಾವಿರಾರು ಪಾಳೇಗಾರರ-ಜಮೀನ್ದಾರರ ಉಳಿಗಮಾನ್ಯ ವ್ಯವಸ್ಥೆ ಎಷ್ಟು ಕ್ರೂರ ವಾಗಿತ್ತೆಂದರೆ ಭಾರತೀಯ ಜನಸಾಮಾನ್ಯರಿಗೆ ಬ್ರಿಟಿಷ್ ಆಡಳಿತ ಆ ಕ್ರೂರವ್ಯವಸ್ಥೆಯಿಂದ ಬಿಡುಗಡೆ ಪಡೆಯುವ ಮಾರ್ಗವಾಗಿಯೇ ಕಂಡಿತು ಎಂಬುದನ್ನು ಕೃತಿ ಸೂಕ್ಷ್ಮ ವಿವರಗಳಿಂದ ಸಾದ್ಯಂತವಾಗಿ ದಾಖಲಿಸುತ್ತದೆ. 'ಮದ್ಯ ಸೇವನೆ, ಜೂಜು ಲಂಪಟತನ ಗಳನ್ನಂಟಿಸಿಕೊಂಡು ಚಟಗಳ ದಾಸವರೇಣ್ಯರಾಗಿದ್ದ ಪಾಳೇಗಾರರು ತಮ್ಮ ಹಣದ ಅಡಚಣೆ ನಿವಾರಿಸಲೋಸುಗ ಪ್ರಜೆಗಳ ಮ್ಯಾಲ ಹೊಸಹೊಸ ತೆರಿಗೆಗಳನ್ನು ಹೇರಲಾರಂಭಿಸಿದ್ದರು. ಪಿಳ್ಳೆ ನೋಡಿದರಿಷ್ಟು ಮದುವೆ ಆದರಿಷ್ಟು ಸೋಬನ ಪ್ರಸ್ತವಾದರಿಷ್ಟು, ಮಕ್ಕಳಾದರೆಯಿಷ್ಟು ಎಂದು ಹೇಳುತ್ತಾ ಹೋದರೆ ಕೊನೆ ಇಲ್ಲದಂತೆ ಬೆಳೆಯುತ್ತಾ ಹೋಗುತ್ತದೆ. ಈ ತೆರಿಗೆ ವಸೂಲಿ ಕ್ರೂರ ಮುಖ ಈ ಎಲ್ಲಾ ಚಿತ್ರಣ ಅತ್ಯಂತ ನೈಜವಾಗಿ ಅಂದಿನ ಜನಜೀವನದ ಬದುಕಿನ ಪಾಡನ್ನು ಕಟ್ಟಿಕೊಡುತ್ತದೆ.

ಕಥೆಯ ಕಾಲ ಮತ್ತು ಪರಿಸರ ಹದಿನೆಂಟನೆಯ ಶತಮಾನದ ಅಚೆಯದು ಮತ್ತು ಹತ್ತೊಂಬತ್ತನೇ ಶತಮಾನದ ಪ್ರಾರಂಭದ ಎರಡು ಮೂರು ದಶಕಗಳು. ಈ ಕಥೆಯು ನಡೆಯುವ ಸ್ಥಳ ಬಳ್ಳಾರಿ, ಗುಂಟೂರು, ಕಡಪಾ ಪ್ರದೇಶದಲ್ಲಿ ಅಡಕವಾಗಿರುವ ಕುಂತಳ ಸೀಮೆಯ ಕುದುರೆಡವು ಎಂಬ ಗ್ರಾಮ. ಅಲ್ಲಿ ಪುವ್ವಲ ರಾಜವಂಶದ ಸ್ಥಾನಮಾನದ ಸಂಕೇತವಾಗಿ ಒಂದು ಅರಮನೆ ಉಂಟು. ಅರಮನೆಯಲ್ಲಿ ವಯಸ್ಸಾದ ರಾಜಮಾತೆ ಭ್ರಮರಾಂಬೆ

ರಾಜಕುಮಾರ ಕಾಟಯ್ಯ ನಾಯಕ ಮತ್ತು ಆತನ ಐವರು ಹೆಂಡಿರು ವಾಸಮಾಡುತಲಿದ್ದಾರೆ. ಅರಮನೆಗೆ ಇರುವ ಆ ದಯಾ ಪ್ರಜೆಗಳ ಮೇಲೆ ಹೇರಲ್ಪಡುತ್ತಿರುವ ಅನೇಕ ತೆರಿಗೆಗಳು.

**ಅರಮನೆಯ ಕಥೆ, ಪಾತ್ರಗಳು ಮತ್ತು ಸನ್ನಿವೇಶಗಳು**

ಕಥೆ ಪ್ರಾರಂಭವಾಗುವುದೇ ದೇಶ ಕಾಲಗಳ ಒಂದು ಸ್ನಾಪ್ ಶಾಟ್‌ನಿಂದ. ಕುಂತಳ ಸೀಮೆಯ ಸುತ್ತ ಮುತ್ತಲಿನ ಪ್ರದೇಶಗಳ ಜನಜೀವನ ಮತ್ತು ವಿದ್ಯಮಾನಗಳ ಪಟ್ಟಿಯಂತಿರುವ ಪ್ರಾರಂಭದ ಭಾಗಗಳು ಕಥೆಯ ತಳಹದಿಯನ್ನು ಸೃಷ್ಟಿಸುವಲ್ಲಿ ಫಲಕಾರಿಯಾಗಿವೆ. ಹತ್ತಾರು ಕಥೆಗಳ ಎಳೆಗಳು ಸಮಾನಾಂತರವಾಗಿ ಹರಿದಿರುವುದನ್ನು ಮೊದಲ ಪುಟದ ಈ ವಾಕ್ಯದಿಂದಲೇ ಕಾಣುತ್ತೇವೆ. 'ವಾರದ ಹಿಂದೆಯಷ್ಟೆ ಬೆಳಗುಪ್ಪದ ಜಮೀಂದಾರ್ರು ಚೆನ್ನೋಬಳ ರೆಡ್ಡಿಯನ್ನು ಮುಷ್ಠೂರು ಮಾದಿರೆಡ್ಡಿಯನ್ನು ಯೇಕ ಕಾಲಕ್ಕೆ ಮಣಿಸಿ ಕಡುಪಾದ ವಸ್ತಿವಳಗ... ಕಲೆಟ್ರು ಥಾಮಸು ಮನ್ರೋ ಸಾಹೇಬನು ತನ್ನ ಪ್ರತಿಬಿಂಬವನ್ನು ತಾನು ಮೋಹಿಸಿಕೊಳ್ಳುತ್ತಿರುವಾಗ್ಗೆ... ತಮ್ಮ ರಾಜ ನೆಟಕಲ್ಲಪ್ಪನಾಯಕನ ವುಪಟಳಕ್ಕೆ ರೋಸಿ ನೂರಾರು ಮಂದಿ ಪ್ರಜೆಗಳು... ಗುಳೆ ಹೊರಟಿರುವಾಗ್ಗೆ ಅತ್ತೆ ಕುದುರೆಡವು ಪಟ್ಟಣದ ಅರಮನೇಲಿ ರಾಜಮಾತೆ ಭ್ರಮರಾಂಬೆಯು ತನ್ನ ಸವತಿಯ ಮಗ ಕಾಟಯ್ಯ ನಾಯಕನೊಂದಿಗೆ ವಂದು ಕಾಸಿನ ಸರದ ವಿಷಯದಲ್ಲಿ ಜಗಳವಾಡು ತಲಿದ್ದಳು... ಕಸ ಗುಡಿಸೋರು ಕಸ ಗುಡಿಸುತಲಿದ್ದರು... ಹಲ್ಲಿದ್ದೋರು ಹರುಗಡ್ಲಿ ಜಮಡುತಲಿದ್ದರು... ಹಲ್ಲಿಲ್ಲದೋರು ಜಮ್ಮಕಡ್ಲಿ ನಮುಲುತಲಿದ್ದರು ಇತ್ಯಾದಿ ಇತ್ಯಾದಿ.

**ಪೀಕದಾನಿ ಮೂಳೆವೋಬಯ್ಯನ ಮೇಲೆ ಸಾಂಭವಿಯ ಆವಾಹನೆ**

ಈ ಕಥೆಯ ನಾಯಕ ಮೂಳೆವೋಬಯ್ಯ ಎಂಬ ಅರವತ್ತು ವರ್ಷ ಮೀರಿದ ಮನುಷ್ಯ. ವೋಬಯ್ಯನಾದರೋ ಸಮಾಜದ ಕಣ್ಣಿನಲ್ಲಿ ಕೆಳವರ್ಗದವನು. ಅವನ ಕೆಲಸ ಅರಮನೆಯಲ್ಲಿ ರಾಜಮಾತೆ ಭಮರಾಂಬೆಯ ಪಾದದಡಿ ಕೂತು ಆಕೆಯು ತನ್ನ ಬಾಯಲ್ಲಿ ನಮಲುತಲಿದ್ದ ತಾಂಬೂಲವನ್ನು ಆಗಾಗ ಉಗಿಯಲು ಪೀಕದಾನಿ ಹಿಡಿಯುವುದು. ಇಂತಹ ವೋಬಯ್ಯ ಒಂದು ಮಧ್ಯಾಹ್ನ ತನ್ನ ಮನೆಯ ಮುಂದೆ 'ಯಡಗಯ್ಯನ್ನು ತಲೆಗಾನಿಸಿಕೊಂಡು ಬೀದಿಯ ತುದಿಯಲ್ಲಿ ಬಿಸಿಲಗುದುರೆಯತ್ತ ದೃಷ್ಟಿ ಅಂಟಿಸಿ ವಡಲೊಳಗಿನ ನೀರು ಅಳ್ಳಾಡದಂತೆ ಕೂಕಂಡಿರುವಾಗ' ಒಂದು ಕನಸು ಕಾಣುತ್ತಾನೆ. ಕನಸಿನಲ್ಲಿ ತನ್ನ ದೇಹವು ತನ್ನಿಂದ ಬೇರೆ ಯಾಗಿರುವಂತೆ ಮತ್ತು ಒಂದು ದೊಡ್ಡ ಆಕೃತಿಯು ತನ್ನ ದೇಹವನ್ನು ಪ್ರವೇಶ ಮಾಡಿದಂತೆ ಭಾಸವಾಗುತ್ತದೆ. ಈ ಆಕೃತಿ ಯಾರೆಂದರೆ ಮಹಾಶಕ್ತಿಯಾದ 'ಸಾಂಭ.' ವೋಬಯ್ಯನಿಗೆ ಇದನ್ನು ನಂಬಲಾಗುವುದಿಲ್ಲ. ಸಾವಿರಾರು ಹಕ್ಕಿಗಳ ಕಣ್ಣುಗಳಿಂದ ಪ್ರಪಂಚ ನೋಡುವ, ಗುಡುಗು ಸಿಡಿಲುಗಳನ್ನು ವಟಗುಟ್ಟಲು ಈ ಮಹಾಶಕ್ತಿ ಯಃಕಶ್ಚಿತ್ ಪೀಕದಾನಿ ವೋಬಯ್ಯನ ದೇಹವನ್ನು ವಸ್ತಿ ಮಾಡಿಕೊಳ್ಳುವುದು ಎಂದರೇನು ಸಿವನೇ?

ಇಲ್ಲಿನ ಸಾಂಕೇತಿಕ(ಸಿಂಬಾಲಿಸಮ್) ಗಮನಿಸಿದರೆ ತ್ರಾಣವಿಲ್ಲದ ವೋಬಯ್ಯನನ್ನು ಅವನ ದೇಹದಿಂದ ಓಡಿಸಿ ಆ ಜಾಗದಲ್ಲಿ ಸಾಂಥವಿ ಎಂಬ ಅದಮ್ಯಶಕ್ತಿಯು ಆಕ್ರಮಿಸಿಕೊಳ್ಳುತ್ತದೆ. ಮೇಲ್ನೋಟಕ್ಕೆ ಮೂಢನಂಬಿಕೆಯಿಂದ ಕೂಡಿದ ಒಂದು ಘಟನೆಯಂತಿದ್ದರೂ ಇಲ್ಲಿ ಕಾಣುವುದು ಒಂದು ಸಾಮಾಜಿಕ ಕ್ರಾಂತಿಯ ಸಂಕೇತವನ್ನು. ವೋಬಯ್ಯನಲ್ಲಿ ಅಷ್ಟು ದಿವಸ ಸುಪ್ತವಾಗಿದ್ದ ಶಕ್ತಿಯೊಂದು ಜಾಗೃತಗೊಂಡಿದೆ. ಆದರೆ ವೋಬಯ್ಯನಿಗೆ ಇದನ್ನು ನಂಬಲಾಗುತ್ತಿಲ್ಲ. ಸಾಂಥವಿಯು ತನ್ನಂಥ ನಿಕೃಷ್ಟನ ದೇಹದಲ್ಲಿ ಮನೆ ಮಾಡುವುದು ಹೇಗೆ ಸಾಧ್ಯ ಎಂದು ತನ್ನ ಶಕ್ತಿಯನ್ನೇ ಸಂದೇಹಿಸುತ್ತಾನೆ. ಕೈಗೆ ಬಂದ ಬಲವನ್ನು ತನ್ನದಾಗಿಸಿಕೊಳ್ಳಲು ಆತ್ಮಸ್ಥೈರ್ಯ ಬೇಕು. ಶತಮಾನಗಳಿಂದ ನಮ್ಮ ಸಮಾಜದ ಕಣ್ಣಲ್ಲಿ ಕೀಳೆನಿಸಿಕೊಂಡಂಥ ವೋಬಯ್ಯನಂಥವರು ತಮ್ಮ ಆತ್ಮಶಕ್ತಿಯನ್ನೇ ಕಳೆದುಕೊಂಡು ಹತಾಶರಾಗಿರುವುದನ್ನು ಇಲ್ಲಿ ಕಾಣುತ್ತೇವೆ. ತನ್ನ ದೇಹವನ್ನು ಆಕ್ರಮಿಸಿಕೊಳ್ಳುವ ಹಕ್ಕನ್ನು ಕೊಟ್ಟವರಾರೆಂದುಕೊಳ್ಳುತ್ತಾ ಸಾಂಭವಿಯನ್ನು ತಡೆಯಲು ನೋಡುತ್ತಾನೆ. ಆದರೆ ಸಾಂಭವಿಯು ಇವನ ದೇಹವನ್ನು ಸೇರಿಕೊಂಡೇ ಬಿಡುತ್ತಾಳೆ. ಆ ಕ್ಷಣದಲ್ಲಿ ಅವನ ದೇಹವು ಪುಳಕಿತಗೊಂಡು ಒಂದು ಅಲೌಕಿಕವಾದ ಅನುಭವವಾಗುತ್ತದೆ. ವೋಬಯ್ಯನಲ್ಲಿ ಮನೆ ಮಾಡಿರುವ ಈ ಶಕ್ತಿಯ ಪ್ರಭಾವದಿಂದ ಇಡೀ ಪಟ್ಟಣವೇ ಪುಳಕವನ್ನು ಅನುಭವಿಸುತ್ತದೆ. 'ಯಲ್ಲಾರೊಳಗೂ ಯಂಥದೋ ವಂದು ಅಗೋಚರ ಆನಂದವು. ಅನಿರ್ವಚನೀಯ ಭಾವನೆಯು... ಮೂಗರಿಗೆ ಮಾತಾಡತೀವೆಂಬ ಭಾವನೆ ಬಂತು. ಕಿವುಡ ಕೆಪ್ಪರ ಕಿವಿಗಳು ಸಬುದಗಳು ತುಂಬಿದವು.... ನವಿಲು ಕೆಂಬೂತಗಳು ತಮ್ಮ ತಮ್ಮ ತಾರತಮ್ಯ ಮರೆತವು" ಎಂದು ಕುಂ.ವೀ ಅವರು ಸಮಾಜದಲ್ಲಿ ಒಂದು ಹೊಸ ಶಕ್ತಿ ಸಂಚರಿಸಿ ತಾರತಮ್ಯಗಳನ್ನು ಬಡಿದೋಡಿಸುವ ಸಾಧ್ಯತೆಗೆ ಆಶಿಸುತ್ತಾರೆ. ಈ ದಿವ್ಯ ಕನಸಿನಲ್ಲಿ ದಲಿತನಾದ ವೋಬಯ್ಯನಿಗೆ ತನ್ನ ಸುಪ್ತಶಕ್ತಿಯು ಜಾಗೃತಗೊಂಡಂತೆನಿಸುತ್ತದೆ. ತನ್ನಂಥ ದಲಿತರು ಏಳಿಗೆಯನ್ನು ಹೊಂದಿದಂತೆ ಭಾಸವಾಗುತ್ತದೆ. ವೋಬಯ್ಯನ ಮನಸ್ಸಿಗೆ ತನ್ನ ಶಕ್ತಿ ಏನು ಎಂದು ಅರಿವಾಗಿ ಅವನ ಆತ್ಮವಿಶ್ವಾಸ ಹೆಚ್ಚಾಗಿದೆ ಎಂಬ ಸಂಕೇತವನ್ನು ಈ ಘಟನೆಯಲ್ಲಿ ಕಾಣಬಹುದು. ಕಣ್ಣುಬಿಟ್ಟು ಎಚ್ಚರಗೊಂಡಾಗ ತನ್ನಲ್ಲೇನೊ ಬದಲಾವಣೆ ಉಂಟಾಗಿದೆ ಎನಿಸುತ್ತದೆ. ತನ್ನ ಪ್ರತಿಬಿಂಬವನ್ನು ನೋಡಬೇಕೆನಿಸುತ್ತದೆ. ಆದರೆ ಅವನ ಬಳಿ ಕನ್ನಡಿ ಇಲ್ಲ. ಇಡೀ ಕೇರಿಯ ಮಂದಿ ತಮ್ಮನ್ನು ತಾವು ಕಂಡುಕೊಳ್ಳುವುದು ಕೇರಿಯ ಇತರರ ಕಣ್ಣುಗಳಲ್ಲಿ. ಅಂದರೆ ಅವರೆಲ್ಲರಿಗೂ ತಮ್ಮ ವ್ಯಕ್ತಿತ್ವವನ್ನು ಸಾಮರ್ಥ್ಯವನ್ನು ತಮ್ಮ ವರ್ಗದ ಹೊರಗೆ ತೋರಿಸಲು ಅವಕಾಶವೇ ಇಲ್ಲವಾಗಿದೆ ಎಂಬುದು ಇಲ್ಲಿ ಮನದಟ್ಟಾಗುತ್ತದೆ. ಅಂತಹವರನ್ನು ಬಡಿದೆಬ್ಬಿಸಲು ತಮ್ಮ ಸಂಕೋಲೆಗಳನ್ನು ಕಳಚಿ ಮೇಲೇಳಲು ಸಾಂಭವಿಯಂಥ ಒಂದು ಶಕ್ತಿ ಸಹಾಯಕವಾಗುತ್ತದೆ.

ವೋಬಯ್ಯನಿಗೆ ತನ್ನ ಬಗ್ಗೆ ಇರುವ ಕಲ್ಪನೆ ರಾಜಮಾತೆ ಉಗಿಯುವ ಪಿಕದಾನಿಯಲ್ಲಿ ಕಾಣಿಸುತ್ತಿದ್ದ ಪ್ರತಿಬಿಂಬದಿಂದ. ಅದೂ ಅಲ್ಪಸ್ವಲ್ಪ ಭಾಗ ಮಾತ್ರ. ಇದು ಬಹಳ ಪ್ರಬಲವಾದ ಸಂಕೇತ. ಸಮಾಜದಲ್ಲಿನ ಪಟ್ಟಭದ್ರ ಶಕ್ತಿಗಳು ವೋಬಯ್ಯನಂಥವರಿಗೆ ತಮ್ಮ ಸಂಪೂರ್ಣ ಯೋಗ್ಯತೆಯ ಅರಿವು ಮೂಡಿದಂತೆ ಕಡಿವಾಣ ಹಾಕಿ ಬಿಟ್ಟಿದ್ದಾರೆ. ಈ ಸಂಕೋಲೆಗಳಿಂದ ಮುಕ್ತಗೊಳ್ಳಲು ವೋಬಯ್ಯನಂಥವರು ತಮ್ಮ ಶಕ್ತಿಯನ್ನು ಜಾಗೃತಗೊಳಿಸಬೇಕಾಗಿದೆ. ಈ ಸಾಮಾಜಿಕ ಕ್ರಾಂತಿ ವೋಬಯ್ಯನಲ್ಲಿ ಆಂತರಿಕವಾಗಿ ಹುಟ್ಟಿರುವಂತಹುದು ಎಂಬುದನ್ನು ಇಲ್ಲಿ ಗಮನಿಸಬಹುದು. ಸಾಂಭವಿಯ ಆಗಮನ ಆತನ ಶಕ್ತಿಯ ಸಂಕೇತವು ಮಾತ್ರ ಯೊಹಾನ್ ವುಲ್ಫ್‌ಗ್ಯಾಂಗ್ ಫಾನ್ ಗೇಯ್ತ ಹೇಳಿದಂತೆ 'At the moment of commitment the entire world conspires to help you'(ಒಂದು ಘನಕಾರ್ಯ ಮಾಡಲು ಸಂಕಲ್ಪ ಮಾಡಿದಾಗ ಇಡೀ ವಿಶ್ವವು ನಿಮಗೆ ಸಹಾಯ ಮಾಡಲು ಹೊಂಚು ಹಾಕತೊಡಗುತ್ತದೆ.). ಹಾಗೆ ಆ ಕ್ಷಣದಲ್ಲಿ ದೂರದಲ್ಲೆಲ್ಲೋ ಆರ್ಭಟಿಸುತ್ತಿದ್ದ ಬಿರುಗಾಳಿಯು ವೋಬಯ್ಯನೆಡೆಗೆ ತಂಗಾಳಿಯನ್ನು ಕಳಿಸಿತಂತೆ ಎಂಬಲ್ಲಿಗೆ ಸಿವಸಂಕರ ಮಾದೇವಾ...

ಇದಾದ ನಂತರ ಒಂದು ವಿಚಿತ್ರ ಸ್ಥಿತಿಯಲ್ಲಿ ವೋಬಯ್ಯನು ಮಾತನಾಡದೆ ಸುಮ್ಮನೆ ಕೂತಿರುತ್ತಾನೆ. ಉತ್ತಮ ಸ್ವಭಾವವುಳ್ಳ ಮತ್ತು ಗಟ್ಟಿಗಿತ್ತಿಯೂ ಆದ ಅವನ ಹೆಂಡತಿ ಜಗಲೂರವ್ವ ಹಳ್ಳಿಯವರನ್ನು ಕರೆಯುತ್ತಾಳೆ. ಮೌನಿಯಾಗಿದ್ದ ವೋಬಯ್ಯ ಕೊನೆಗೆ ಬಾಯ್ತೆರೆದು ತಾನು ಸಾಂಭವಿ ಎಂದೂ ಇನ್ನು ಮುಂದೆ ಎಲ್ಲರೂ ತನ್ನನ್ನು ಪೂಜಿಸಬೇಕೆಂದೂ ಹೇಳುತ್ತಾನೆ. ಆದರೆ ಕೆಲ ಸಮಯದ ನಂತರ ವೋಬಯ್ಯ ಇದ್ದಕ್ಕಿದ್ದಂತೆ ಮಾಯವಾಗಿಬಿಡುತ್ತಾನೆ. ಹಳ್ಳಿಯವರೆಲ್ಲ ಹುಡುಕಲು ಪ್ರಾರಂಭಿಸುತ್ತಾರೆ. ಕೊನೆಗೆ ವೋಬಯ್ಯ ಹಳ್ಳಿಯ ಹೊರಗಿನ ಒಂದು ಕಲ್ಲುಮಂಟಪದಲ್ಲಿ ಕಂಡುಬರುತ್ತಾನೆ. ಅವನನ್ನು ಅಲ್ಲಿಂದ ಹಳ್ಳಿಗೆ ಕರೆದೊಯ್ಯಲು ಒಂದು ಪಲ್ಲಕ್ಕಿಯಲ್ಲಿ ಕೂರಿಸುತ್ತಾರೆ. ಆದರೆ ಆ ಪಲ್ಲಕ್ಕಿಯನ್ನು ಎತ್ತಲು ಯಾರಿಗೂ ಸಾಧ್ಯವಾಗುವುದಿಲ್ಲ. ಆಗ ಇಬ್ಬರು 'ಹೊಲೆಯರ' ಹುಡುಗರು ಪಲ್ಲಕ್ಕಿಯನ್ನು ಸಲೀಸಾಗಿ ಎತ್ತಿ ನೆರೆದಿದ್ದ ಜನರು ಮೂಗಿನ ಮೇಲೆ ಬೆಟ್ಟಿಡುವಂತೆ ಮಾಡುತ್ತಾರೆ. ನೆರೆದ ಮಂದಿ ಪಲ್ಲಕ್ಕಿಯನ್ನು ಆ ಹುಡುಗರು ಎತ್ತಿದ್ದಕ್ಕೆ ಸಂತಸಪಡುವುದರ ಬದಲಾಗಿ 'ಹೊಲೆಯರು' ತಾಯಿಯನ್ನು ಮುಟ್ಟಿದ್ದು ಏನು ಅಪಾಯ ತರುತ್ತದೋ ಎಂದು ಹೆದರುವುದು ಅಂದಿನ ಸಮಾಜದಲ್ಲಿದ್ದ ತಾರತಮ್ಯಗಳ ಮೇಲೆ ಬೀರಿದ ಬೆಳಕಾಗಿ ದಲಿತರ ಸ್ಥಿತಿಗೆ ದೃಷ್ಟಾಂತವಾಗಿದೆ.

**ಜಾಗೃತಗೊಂಡ ಶಕ್ತಿ ಮುಂದೆ ಆಗಬೇಕಾದ ಕಾರ್ಯಗಳು**

ಹಳ್ಳಿಯವರು ಸಾಂಭವಿಯ ಪೂಜೆ ಪುನಸ್ಕಾರಗಳಲ್ಲಿ ಮತ್ತು ಅವಳ ಮಹಿಮೆಯನ್ನು ಕೊಂಡಾಡುವುದರಲ್ಲಿ ಮುಳುಗಿ ಹೋಗಿದ್ದಾರೆ. ತಿಳಿದಂಥವರಾದ ಹಳ್ಳಿಯ ಮುದೇತರು

(ಹಿರಿಯರು) ಸಾಂಭವಿಯನ್ನು ಯಾವ ರೀತಿ ನೋಡಿಕೊಳ್ಳಬೇಕು. ಏನೇನು ಕಾರ್ಯಗಳು ನಡೆಯಬೇಕು ಇತ್ಯಾದಿ ನಿರ್ಧರಿಸುತ್ತಾರೆ. ಸಾಂಭವಿಯು ಪಿಕದಾನಿ ವೋಬಯ್ಯನನ್ನು ವಸ್ತಿ ಮಾಡಿಕೊಂಡಿರುವ ಸುದ್ದಿಯು ಕುದುರೆಡವು ಅಷ್ಟೇ ಅಲ್ಲದೆ ಸುತ್ತ ಮುತ್ತಲಿನ ಊರಿನಲೆಲ್ಲ ಹರಡಿ ಬಿಡುತ್ತದೆ. ಸಾಂಭವಿಯನ್ನು ಹೊಳೆಗೆ ಕರೆದುಕೊಂಡು ಹೋಗಿ ಮಂಗಳಸ್ನಾನ ಇತ್ಯಾದಿ ಶಾಸ್ತ್ರಗಳನ್ನು ಮಾಡುವ ಕಾರ್ಯ ಮೊದಲು ಆಗಬೇಕು. ಹಾಗಾಗದಿದ್ದಲ್ಲಿ ಅನಾಹುತಗಳು ನಡೆದುಹೋಗುತ್ತವೆ. ಆದರೆ ಸಾಂಭವಿಯು ತಾನು ಹೊರಡುವುದಿಲ್ಲ ಎಂದು ಪಟ್ಟು ಹಿಡಿದಿದ್ದಾಳೆ. ಏಕೆ ಎಂದು ಯಾರಿಗೂ ತಿಳಿಯುತ್ತಿಲ್ಲ. ಏಕೆಂದರೆ ಸಾಂಭವಿಯು ಮೌನವಾಗಿಬಿಟ್ಟಿದ್ದಾಳೆ. ಅಷ್ಟಾಗಿ ವೋಬಯ್ಯನ(ಸಾಂಭವಿಯ) ಬಾಯಲ್ಲಿ ಬರುವ ಅರ್ಥವಾಗದ ಶಬ್ದಗಳನ್ನು ಅರ್ಥೈಸಿ ಜನಸಾಮಾನ್ಯರಿಗೆ ಹೇಳುತ್ತಿದ್ದವರು ಹಂಪಜ್ಜ ಹಾಗೂ ಹಳ್ಳಿಯ ಇತರೆ ಮುದೇತರು ಹೆದರಿ ಕಂಗಾಲಾಗಿರುವ ಭಕ್ತಾದಿಗಳಿಗೆ ಸಾಂಭವಿ ಏನು ಬಯಸುತ್ತಿರುವಳು ಎಂಬುದು ಮುದೇತರ ಮೂಲಕ ತಿಳಿಯುತ್ತದೆ. 'ಹೊಳಗೆ ಹೋಗುವ ಪಲ್ಲಕ್ಕಿ ಮೆರವಣಿಗೆಗೆ ಅರಮನೆಯ ಸಿಂಹಾಸನ ಬೇಕೆಂತೆ ಸಿವನೆ!' ಇದು ಒಂದು ಪ್ರಮುಖ ಘಟ್ಟ. ಸಮಾಜ ಪರಿವರ್ತನೆಯ ಮೊದಲ ಮೈಲಿಗಲ್ಲು.

ಹಳ್ಳಿಯವರೆಲ್ಲಾ ಅರಮನೆಗೆ ಹೋಗಿ ರಾಜಮಾತೆಯನ್ನು ಭೇಟಿ ಮಾಡಿ ಸಿಂಹಾಸವನ್ನು ಕೊಡುವಂತೆ ಕೇಳುತ್ತಾರೆ. ರಾಜಮಾತೆಗೆ ರೋಷ ಉಂಟಾಗುತ್ತದೆ. 'ತನ್ನ ಉಗುಳನ್ನು ಹಿಡಿಯುತ್ತಿದ್ದ ಈ ಪಿಕದಾನಿ ವೋಬಯ್ಯ ಈಗ ನನ್ನ ಸಿಂಹಾಸನವನ್ನು ಬಯಸುತ್ತಿರುವನೆ? ಎಲಾ ಕುತಂತ್ರಿ ಎಂದು ಅಂದುಕೊಳ್ಳುತ್ತಾರೆ.

ಆದರೆ ಜನ ಮರುಳೋ ಜಾತ್ರೆ ಮರುಳೋ ಎಂಬಂತೆ ಹಳ್ಳಿಯವರೆಲ್ಲ ಈ ರೀತಿ ಸಾಂಭವಿಯ ವಕಾಲತ್ತು ವಹಿಸಿ ಅರಮನೆಯ ಹೊರಗೆ ಛಲದಿಂದ ನಿಂತಿರುವಾಗ ಅವಳ ರೋಷವನ್ನು ಕೇಳುವರಾರು? ಅವಳ ಸೊಸೆಯೇ ರೇಗುತ್ತಾಳೆ. 'ಬೇಯತ್ತೆ,? ಅದರ ಮ್ಯಾಲ ಹತ್ತೋರಿಲ್ಲ ಯಿಳಿಯೋರಿಲ್ಲ... ಪ್ರಜೆಗಳೇ ಕೇಳಲಕ ಹತ್ಯಾರಂದ ಮ್ಯಾಕ ಕೊಟ್ಟು ಕಳುವು' ಎಂದಾಗ ಬೇರೆ ಗತಿ ಇಲ್ಲದೆ ಕೊಡುತ್ತಾಳೆ. ಇಲ್ಲಿ ಸಾಂಕೇತಿಕತೆ ಅಡಗಿರುವುದನ್ನು ನಾವು ಗ್ರಹಿಸಬಹುದಾಗಿದೆ. ಒಂದು ಅಲೌಕಿಕ ಅನುಭವದಿಂದ ವೋಬಯ್ಯನು ತನ್ನ ಶಕ್ತಿಯನ್ನು ಕಂಡುಕೊಂಡಿದ್ದಾನೆ. ತನ್ನಂಥ ದಲಿತರನ್ನು ಹಿಡಿದು ಮೇಲೆತ್ತಲು, ಜಮೀನ್ದಾರರ ಜೀತದಿಂದ ಬಿಡುಗಡೆಗೊಳಿಸಲು ಮತ್ತು ಪಾಳೇಗಾರರ ದೌರ್ಜನ್ಯ ದಬ್ಬಾಳಿಕೆಯಿಂದ ಮುಕ್ತಗೊಳಿಸಲು ಬೇಕಾಗಿರುವ ಶಕ್ತಿ ಅವನಲ್ಲಿ ಆವಾಹನೆಯಾಗಿದೆ. ಅವನನ್ನು ಮುಂದಿಟ್ಟುಕೊಂಡು ಬಹಳ ಚಾಕಚಕ್ಯತೆಯಿಂದ ಅವನ ವರ್ಗದವರು ತಮಗೆ ಬರಬೇಕಾದ ಸ್ಥಾನಮಾನಗಳನ್ನು ಪಡೆಯುವುದಕ್ಕೆ ಹೊರಟಿದ್ದಾರೆ. ತುಳಿಯಲ್ಪಟ್ಟ ವರ್ಗದವರು ಹೇಗೆ ಹಂತ ಹಂತವಾಗಿ ಅಧಿಕಾರವನ್ನು

ತಮ್ಮದಾಗಿಸಿಕೊಳ್ಳುತ್ತಾರೆ ಎಂಬುದನ್ನು ಲೇಖಕರು ಚೆನ್ನಾಗಿ ನಿರೂಪಿಸಿದ್ದಾರೆ. ಸಾಂಭವಿಯ ಪರಿಚಾರಕರಾದ ಹಂಪಜ್ಜ ಮತ್ತು ಜಡೆಶಾತನ ಕಾರ್ಯಾಚರಣೆ ಗಮನಿಸಿದರೆ ಅವರು ಯಾವ ರಾಜಕೀಯ ತಂತ್ರಗಾರರಿಗೂ ಕಡಿಮೆ ಅಲ್ಲ ಎಂಬುದು ಅರಿವಾಗುತ್ತದೆ.

**ಸಿಂಬಾಲಿಸಮ್ ಅಥವಾ ಸಾಂಕೇತಿಕತೆ**

ಈ ಕಾದಂಬರಿಯಲ್ಲಿ ಬೇರೆ ಬೇರೆ ಪಾತ್ರಗಳು ಅನೇಕ ವಿಚಾರಗಳಿಗೆ ಸಂಕೇತವಾಗಿ ನಿಂತಿವೆ. ಈ ಕಥೆಯಲ್ಲಿ ಜಾತಿ ಮತ್ತು ವರ್ಗಗಳ ಸೆಣಸಾಟವನ್ನು ಕೂಡ ಸಾಂಕೇತಿಕವಾಗಿ ನಿರೂಪಿಸ ಲಾಗಿದೆ. ಕ್ಷುದ್ರ ದೇವತೆಗಳಾದ ಮಾರಿ, ಹೆಮ್ಮಾರಿಗಳ ಕೀರ್ತಿ ಹೆಚ್ಚಾಗತೊಡಗಿದಾಗ ಶಿಷ್ಟವರ್ಗದ ಆರಾಧ್ಯ ದೈವನಾದ ಆಂಜನೇಯ ಸ್ವಾಮಿಗೆ ಆಗುವ ಅಸಹನೆ ಒಂದು ಉದಾಹರಣೆ. ಆ ಸಮಯಕ್ಕೆ ಸರಿಯಾಗಿ ಆ ಊರಿನ ಆಕಳುಗಳು ಕಾಲುಬಾಯಿ ವ್ಯಾಧಿಯಿಂದ ಸಾಯತೊಡಗುತ್ತವೆ. ಈ ವ್ಯಾದಿಯನ್ನು ನಿವಾರಿಸಲಾಗದೆ. ಆ ಸಂಸ್ಥಾನದ ರಾಜನು ಇದು ಆಂಜನೇಯನ ಕೋಪದ ಪರಿಣಾಮವೆಂತಲೂ ಮಾರಿಯ ಭಕ್ತರು ಆಂಜನೇಯನಿಗೆ ಶರಣಾಗಬೇಕೆಂದು ಹೇಳುವ ಸನ್ನಿವೇಶ ಕೆಳವರ್ಗದವರ ಏಳಿಗೆಯನ್ನು ಮೇಲ್ವರ್ಗಗಳು ಹೇಗೆ ದೇವತೆಗಳ ಮಟ್ಟದಲ್ಲೂ ತಡೆಯಬಲ್ಲವು ಎಂಬುದಕ್ಕೆ ಪರಿಣಾಮಕಾರಿಯೂ ವಿನೋದಮಯವೂ ಆದ ಸಿಂಬಲ್ ಆಗಿದೆ.

ವೋಬಯ್ಯನ ಹೆಂಡತಿ ಜಗಲೂರೆವ್ವ ತನಗೆ ಮಕ್ಕಳಿಲ್ಲದ ಕಾರಣ ಸೂರ ಎಂಬ ಒಂದು ಕೋಣವನ್ನು ಸಾಕಿರುತ್ತಾಳೆ. ಅದನ್ನು ತನ್ನ ಮಗನಂತೆಯೇ ನೋಡಿಕೊಳ್ಳುತ್ತಿರುತ್ತಾಳೆ. ನಿಜವಾದ ಮಕ್ಕಳೊಂದಿಗೆ ಮಾತಾಡುವಂತೆ ಅದರೊಡನೆಯೂ ಮಾತನಾಡುತ್ತಿರುತ್ತಾಳೆ. ಮಾನವ ಮತ್ತು ಪ್ರಾಣಿಪ್ರಪಂಚದ ನಡುವೆ ಇರಬೇಕಾದ ಆರೋಗ್ಯಕರವಾದ ಸಂಬಂಧಕ್ಕೆ ಇದು ಒಂದು ಉದಾಹರಣೆಯಾಗುತ್ತದೆ. ಹೀಗಿರಲು ಸಾಂಭವಿಯು ಈ ಕೋಣವನ್ನೇ ಬಲಿ ತೆಗೆದುಕೊಳ್ಳ ಬೇಕೆಂದು ಪಟ್ಟು ಹಿಡಿಯುವುದು ಮಾರ್ಮಿಕವೆನಿಸುತ್ತದೆ. ಸೂರನನ್ನು ಜಗಲೂರೆವ್ವನಿಂದ ಬೇರೆ ಮಾಡಲು ಇದು ವೋಬಯ್ಯನ ತಂತ್ರವಿರಬಹುದೆ? ಈ ಹೋರಿಯ ಕಾರ್ಯಚಟುವಟಿಕೆಗಳ ವರ್ಣನೆಯು ಹಾಸ್ಯಮಯವಾಗಿದೆ. ಹಾಳೂರಿಗೆ ಹನುಮಪ್ಪ ಚೆಂದ ಎನ್ನುವಂತೆ ಆ ಊರಿಗೆಲ್ಲ ಸೂರನೊಂದೇ ಬೇಡಿಕೆಯಲ್ಲಿರುವ ಕೋಣ. ಇದರ ಸಂಗ ಬಯಸಿ ಅನೇಕ ಮಹಿಷಿಗಳು ಬರುತ್ತಿದ್ದವಂತೆ. ಆ ಊರಿನಲ್ಲಿ ಸೂರನ ಹೊರತು ವೀರ್ಯವಂತವಾದ ಒಂದೂ ಕೋಣ ಇಲ್ಲವೆನ್ನುವುದು ಆ ಊರಿನ ಪುರುಷದ ಮೇಲೆ ಟೀಕೆಯಾಗದೆ ನಮ್ಮ ಸಾಮಂತರ ರಾಜರು ಬ್ರಿಟಿಷರಿಗೆ ಶರಣಾಗಿ ಅವರ ದಾಸರಾಗಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಆ ಪ್ರಾಂತ್ಯದಲ್ಲಿದ್ದ ರಾಜಕೀಯ ಅರಾಜಕತೆ ನೋಡಿದರೆ ಅದು ಹೇಗೆ ಇಲ್ಲಿಯ ಜನ ಸಂಘಟಿತವಾದ ಸಮಾಜ ರಚಿಸಿಕೊಂಡಿದ್ದಾರೆ ಎನ್ನುವುದೇ ಅಚ್ಚರಿ ತರುವ ವಿಷಯ.

**ಬ್ರಿಟಿಷ್ ಅಧಿಕಾರಿಗಳು**

ಕಥೆಯಲ್ಲಿ ಅನೇಕ ಕೌತುಕಮಯ ಸನ್ನಿವೇಶಗಳು ಪಾತ್ರಗಳು ಇವೆ. ಅನೇಕ ಬ್ರಿಟಿಷ್ ಅಧಿಕಾರಿಗಳ ಮಾನವೀಯ ಗುಣಗಳನ್ನು ಹೊರತರಲಾಗಿದೆ. ಸರ್ ಥಾಮಸ್ ಮನ್ರೋನ ಪಾತ್ರ ಕಣ್ಣಿಗೆ ಕಟ್ಟುವಂತೆ ಬೆಳೆದಿದೆ. ಒಮ್ಮೆ ಮನ್ರೋ ಬಡವರ ಬಂಧು ಎಂದು ಪ್ರಸಿದ್ಧವಾಗಿದ್ದ ಬೊಬ್ಬಲಿ ನಾಗಿರೆಡ್ಡಿಯನ್ನು ಹೋಗಿ ಬೇಟಿ ಮಾಡುತ್ತಾನೆ. ಆ ಸಂದರ್ಭದಲ್ಲಿ ಅವರಿಬ್ಬರೂ ಒಟ್ಟಿಗೆ ಊಟ ಮಾಡಿ ತಮ್ಮ ವಸ್ತ್ರಗಳನ್ನು ಅದಲು ಬದಲು ಮಾಡಿಕೊಳ್ಳುತ್ತಾರೆ. ಆಗ ಒಬ್ಬರಂತೆ ಇನ್ನೊಬ್ಬರು ಕಾಣುವುದು ಅವರಿಬ್ಬರ ಅಂತಿಮ ಗುರಿಯೂ ಒಂದೇ ಆಗಿದ್ದು ಅವರಲ್ಲಿದ್ದ ಸಾಮ್ಯವನ್ನು ತೋರಿಸುತ್ತದೆ. ಮನ್ರೋನ ಬಗ್ಗೆ ಕಥೆಗಾರರು ಹೇಳಿರುವ ಈ ಮಾತು ಆತನ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ. 'ಯೀ' ಪ್ರಕಾರವಾಗಿ ಮನ್ರೋ ಕೊಡಲಿ ಯಿಂದಾಗುವ ಕೆಲಸವನ್ನು ಉಗುರಿನಿಂದಲೂ ಉಗುರಿನಿಂದಾಗುವ ಕೆಲಸವನ್ನು ಕಣ್ಸನ್ನೆಯಿಂದಲೂ... ಮಾಡುತ ಯೆಲ್ಲರಿಂದಲೂ ಸೈ ಎನಿಸಿಕೊಳ್ಳುತ ಜಾತಿ ಜಾತಿ ನಡುವೆ ಕೋಮು ಕೋಮುವಿನ ನಡುವೆ ಸವುಹಾರ್ಧ ವಾತಾವರಣವನ್ನುಂಟು ಮಾಡುತ ಇದ್ದನು.

**ಬ್ರಿಟಿಷರ ಆಗಮನ ಮೇಲ್ವರ್ಗದ ದ್ವಂದ್ವ**

ಮೇಲ್ಜಾತಿಯರಾದ ಬ್ರಾಹ್ಮಣರಲ್ಲಿ ಬ್ರಿಟಿಷರ ಆಗಮನ ತಂದಿಟ್ಟ ಸಂದಿಗ್ಧತಿಯನ್ನು ಈ ಕಾದಂಬರಿಯಲ್ಲಿ ಚಿತ್ರಿಸಲಾಗಿದೆ. ಸಂಪ್ರದಾಯಸ್ಥರು ಬ್ರಿಟಿಷರ ಧರ್ಮ ಮತ್ತು ಅವರ ಭಾಷೆಯು ಹಿಂದೂ ಧರ್ಮವನ್ನು ಮಲಿನಗೊಳಿಸುತ್ತಿದೆ ಎಂದು ಅವರನ್ನು ಅಸಹ್ಯದಿಂದ ಕಂಡರೆ ಇನ್ನೊಂದು ಗುಂಪು ಬ್ರಿಟಿಷರ ಆಧುನಿಕ ನಡೆನುಡಿಗಳು ಲೋಕಜ್ಞಾನ ಮತ್ತು ಬ್ರಿಟಿಷರಲ್ಲಿ ಸಿಗಬಹುದಾದ ಕೆಲಸಗಳ ಆಕರ್ಷಣೆಯಿಂದ ಇಂಗ್ಲಿಷ್ ಕಲಿಕೆಯನ್ನು ಅಂಗೀಕರಿಸುತ್ತದೆ. ಬ್ರಾಹ್ಮಣರಲ್ಲಿ ಉಂಟಾದ ದ್ವಂದ್ವವನ್ನು ಹೇಗೆ ನಿವಾರಿಸಿಕೊಂಡರು ಎಂಬುದನ್ನು ಕಥೆಯಲ್ಲಿ ಕಾಣಬಹುದು. ಹಿಂದೂ ಧರ್ಮದವರನ್ನು ಅಶುದ್ಧಗೊಳಿಸುವ ಬ್ರಿಟಿಷರ ಪ್ರಭಾವವನ್ನು ತಡೆಯಲಾರದೆ ಸಂಪ್ರದಾಯಸ್ಥ ಬ್ರಾಹ್ಮಣರಿಗೆ ಸಾಯುವುದೇ ವಾಸಿ ಎನಿಸಿದರೂ ಸಾಯುವುದು ಒಂದು ಪಾಪವೆಂದು ಯೋಚಿಸಿ ತಮ್ಮ ಸಂಸ್ಕೃತಿಯ ರಕ್ಷಣೆಯನ್ನು ತಾವೇ ಕೈಗೆ ತೆಗೆದುಕೊಳ್ಳುತ್ತಾರೆ. ಇಂಗ್ಲಿಷ್ ಮಾತನಾಡಿದರೆ ಮತ್ತು ಒಬ್ಬ ಆಂಗ್ಲನ ನೆರಳು ಸೋಕಿದರೆ ಕೂಡ ಪ್ರಾಯಶ್ಚಿತ್ತ ಪಡೆಯಬೇಕು ಎಂದು ಎಲ್ಲಾ ಅಗ್ರಹಾರಗಳಿಗೆ ಆದೇಶಿಸುತ್ತಾ. ಈ ವಿಪ್ರಸಮೂಹದ ಸ್ವಯಂಸೇವಕರು ಅಗ್ರಹಾರಗಳಲ್ಲಿ ಮನೆ ಮನೆಗೆ ಹೋಗಿ ಈ ಕಟ್ಟಳೆಗಳನ್ನು ಅನುಷ್ಠಾನಗೊಳಿಸಲು ತೊಡಗುತ್ತಾರೆ.

**ವೈಚಾರಿಕತೆಯ ಪ್ರತಿಕ್ರಿಯೆ**

ಮೊದಲು ಸಾಂಭವಿಯ ವಸ್ತಿ ಆಗಿರುವ ವೋಬಯ್ಯನು ಸಿಂಹಾಸನವನ್ನು ಅರಮನೆಯಿಂದ ತರಿಸಿಕೊಂಡನಷ್ಟೆ. ತನ್ನ ಪ್ರಭಾವವನ್ನು ಹೆಚ್ಚಿಸುತ್ತ ಭಕುತಾದಿಗಳ ಮೂಲಕ ಕ್ರಾಂತಿಯನ್ನು

ವಿಕಸನಗೊಳಿಸತೊಡಗುತ್ತಾಳೆ. ಸಾಂಭವಿ ಇದೊಂದು ಮೋಸವೆಂದು ಯಾರೂ ಶಂಕೆ ಪಡಲಿಲ್ಲವೇ ಎಂಬ ಪ್ರಶ್ನೆಯನ್ನು ಸಹ ಕಾದಂಬರಿಕಾರರು ಎದುರಿಸಿದ್ದಾರೆ. ಕಥೆಯಲ್ಲಿ ಸಮಸ್ಯೆಯ ಎರಡೂ ಬದಿಗಳನ್ನು ವಿಶ್ಲೇಷಿಸಿದ್ದಾರೆ. ಕುಂ.ವೀ. ಆಲ್ಬರ್ಟ್ ಎಂಬ ಬ್ರಿಟಿಷ್ ಅಧಿಕಾರಿ ಸಾಂಭವಿಯ ಮೋಸವನ್ನು ಬಹಿರಂಗಗೊಳಿಸುವನೆಂದು ಸೈನಿಕರೊಂದಿಗೆ ಹೋಗುತ್ತಾನೆ. ಆದರೆ ತಾನೆ ಸಾಂಭವಿಯ ಮಹಿಮೆಗೆ ಒಳಗಾಗಿ 'ಮದರ್ ಇಂಡಿಯಾಳ' ವಿರುದ್ಧ ಹೋರಾಡಲಾಗದೆ ಬರಿ ಕೈಯಲ್ಲಿ ಹಿಂದಿರುಗುತ್ತಾನೆ. ಹೀಗೆಲ್ಲ ನಡೆಯುವಾಗ ವಿಚಾರವಂತರು ಏನು ಮಾಡುತ್ತಿದ್ದರು ಎಂದರೆ ಅದೇ ಮಾಡುತ್ತಿದ್ದರು. ಈ ವರ್ಗದ ಪ್ರತಿನಿಧಿಯಾಗಿ ಅಯ್ಯಾಳಿ ಎಂಬ ಕವಿಯ ಪಾತ್ರವಿದೆ. ಸಾಂಭವಿಯು ಈತನ ಕನಸಲ್ಲಿ ಬಂದು ವೋಬಯ್ಯನಿಂದ ತನಗೆ ಕೆಟ್ಟ ಹೆಸರು ಬರಬಹುದೆಂದು ತನ್ನ ಬಗ್ಗೆ ಒಳ್ಳೆಯ ಅಭಿಪ್ರಾಯ ಬರುವಂತೆ ಒಂದು ಕಾವ್ಯ ಬರೆಯಬೇಕೆಂದು ಆದೇಶ ನೀಡುತ್ತಾಳೆ. ಕಾಳಿದಾಸನ ನಂತರ ಮಾತೆಯ ಕೃಪೆಗೆ ಪಾತ್ರನಾದವನು ತಾನೆ ಎಂದು ಸಾಂಭವಿಯಿಂದ ತಿಳಿದ ಕವಿಯು ಮಾರುಹೋಗಿ ಕಾವ್ಯ ಬರೆಯಲು ಒಪ್ಪುತ್ತಾನೆ. ಕವಿ ಅಯ್ಯಾಳಿಯು ವೋಬಯ್ಯನನ್ನು ನೋಡಲು ಹೋದಾಗ ವೋಬಯ್ಯ ಹೆದರಿ ಚೀರಿಕೊಳ್ಳುತ್ತಾನೆ. ವೋಬಯ್ಯನ ಪರಿಚಾರಕರು ಇವನಿಂದ ತೊಂದರೆ ಎಂದರಿತು ವೋಬಯ್ಯನಿಗೆ ವಿರುದ್ಧವಾದುದು ಏನೂ ಬರೆಯಬಾರದೆಂದು ಕವಿಯನ್ನು ಹೆದರಿಸಿ ಒಪ್ಪಿಸುತ್ತಾರೆ. ಮೊದಲು ಅವರನ್ನು ವಿರೋಧಿಸುವ ಧೈರ್ಯ ತೋರಿದ ಕವಿಯು ಅಂತಿಮವಾಗಿ ಅಂಜುಕುಳಿಯಂತೆ ಅವರ ಬೆದರಿಕೆಗೆ ಮಣಿದು ಒಪ್ಪಿಕೊಳ್ಳುತ್ತಾನೆ. ಪಟ್ಟಭದ್ರ ಹಿತಾಸಕ್ತಿಗಳು ವಿಚಾರವಂತಿಕೆಗೆ ಹಾಗೂ ಮುಕ್ತ ಚಿಂತನೆಗೆ ನಿರ್ಬಂಧ ಹಾಕುವ ಪರಿಯನ್ನು ಇಲ್ಲಿ ಕಾಣಬಹುದಾಗಿದೆ ಕವಿಯೂ ತನ್ನ ಧ್ಯೇಯಗಳನ್ನು ಬಿಡುವಾಗ ನೀಡುವ ಸಮರ್ಥನೆ ಇಂದಿನ ಕೆಲ ಬುದ್ಧಿಜೀವಿಗಳ ವ್ಯವಹಾರಕ್ಕೆ ಹಿಡಿದ ಕನ್ನಡಿಯಾಗಿದೆ.

**ಕುಂ.ವೀ. ಕಥನಶೈಲಿ–ಮ್ಯಾಜಿಕ್ ರಿಯಲಿಸಮ್ ಹಾಸ್ಯ ಇತ್ಯಾದಿ**

ಕಟ್ಟುಕಥೆಗಳು, ಅಂತೆ ಕಂತೆ ಪುರಾಣಗಳನ್ನು ಕುಂ.ವೀ. ಅವರು ಚೆನ್ನಾಗಿ ಬಳಸಿಕೊಂಡಿದ್ದಾರೆ. ಹರಿಕಥೆಯ ಸಮಯದಲ್ಲಿ ನಾಗಿರೆಡ್ಡಿಯ ಕೊಲೆಯ ಸಂಚು ನಡೆದಿದೆ ಎಂದು ತಿಳಿದ ಸಚ್ಚಿದಾನಂದಶಾಸ್ತ್ರಿ ಎಂಬ ಮೃತನು ಸ್ವರ್ಗದಿಂದ ಇಳಿದು ಬಂದು ಹರಿಕಥೆದಾಸರ ದೇಹದಲ್ಲಿ ಸೇರಿ ಸಂಚಿನ ಬಗ್ಗೆಯೇ ಹರಿಕಥೆ ಮಾಡಿ ನಾಗಿರೆಡ್ಡಿಯನ್ನು ಎಚ್ಚರಿಸುವುದು ಅವರು ಆರಿಸಿಕೊಂಡಿರುವ ತಂತ್ರಕ್ಕೆ ಉದಾಹರಣೆ. ಇಲ್ಲಿ ಇದು ಕಟ್ಟುಕಥೆ ಎಂದು ಅನಿಸಿದರೂ ನಾಗಿರೆಡ್ಡಿಗೆ ಹೇಗೋ ಸಂಚಿನ ಸುದ್ದಿ ಮುಟ್ಟಿತು ಎನ್ನುವುದು ಮುಖ್ಯ. ಈ ರೀತಿಯ ದಂತಕಥೆಗಳನ್ನು ಕಾದಂಬರಿಯಲ್ಲಿ ಓದುವಾಗ ನೈಜತೆಗೆ ಕುಂದು ಬರದಂತೆ ಕಥೆಗಾರರು

ಎಚ್ಚರ ವಹಿಸಿದ್ದಾರೆ ಎಂಬುದು ತಿಳಿಯುತ್ತದೆ. ಇವೆಲ್ಲ ಮ್ಯಾಜಿಕ್ ರಿಯಲಿಸಮ್ ಪ್ರಭೇದದಲ್ಲಿ ಕಂಡುಬರುವ ಅಂಶಗಳೇ ಆಗಿವೆ.

ಕುಂ.ವೀ. ಅವರ ಅನನ್ಯ ವಿನೋದದ ವೈಖರಿಯು ಓದುಗರನ್ನು ರಂಜಿಸುತ್ತಲೇ ಇರುತ್ತದೆ. ಬ್ರಿಟಿಷರ ಮನರಂಜನೆಗೆ ಗಿಟಾರ್ ನುಡಿಸುವ ವಿದ್ವಾನ್ ರಾಜ ಅಯ್ಯಂಗಾರರು ಸಾಂಭವಿಯ ಜನಪ್ರಿಯತೆಯನ್ನು ಕಂಡು ಕರುಬಿ ಸಾಂಭವಿಯ ಮೇಲೆ ಇತರೆ ಕ್ಷುದ್ರದೇವತೆಗಳನ್ನು ಎತ್ತಿಕಟ್ಟುವುದು ವಿನೋದವೆನಿಸುತ್ತದೆ. ಸಾಮಂತ ರಾಜರು ದಿವಾಳಿ ಎದ್ದು ಮಾರುವೇಷದಲ್ಲಿ ಕಳ್ಳತನ ನಡೆಸುತ್ತಿರಲು ವೃತ್ತಿಪರ ಕಳ್ಳರಿಗೆ ಇದರಿಂದ ಉಂಟಾಗುವ ವೃತ್ತಿವೈಷಮ್ಯ ಇವೆಲ್ಲ ಕುಂ.ವೀ. ಅವರು ಬೆಳೆಸಿಕೊಂಡಿರುವ ತಮ್ಮದೇ ಶೈಲಿಯ ವೈನೋದಿಕ ಕಲ್ಪನೆಗಳಿಗೆ ಕೆಲವು ಉದಾಹರಣೆಗಳು.

ಅರಮನೆಯಂತಹ ಒಂದು ಬೃಹತ್ ಕೃತಿಯಲ್ಲಿ ಕೊರತೆಗಳು ಇಲ್ಲವೆಂದೇನಿಲ್ಲ. ಕಾದಂಬರಿ ಯಲ್ಲಿ ಅನೇಕ ಮುದ್ರಣದೋಷಗಳು ಉಳಿದಿವೆ. ಕೆಲವೆಡೆ ಹಾಸ್ಯಕ್ಕೆಂದೇ ಸೃಷ್ಟಿಸಿದ ಸನ್ನಿವೇಶಗಳಿದ್ದು ಕಾದಂಬರಿಯಲ್ಲಿರುವ ಗುರುತರವಾದ ವಿಚಾರಗಳಿಗೆ ಪರ್ಯಾಯವಾಗಿ ನಡೆಯುವ ಒಂದು ಮನರಂಜನೆ ಎಂದು ಅನಿಸದೇ ಇರದು ಮತ್ತು ಲೇಖಕರು ಅನೇಕ ಕಡೆ ನೀಡಿರುವ ವಿವರಗಳು ಅಗತ್ಯವಿತ್ತೇ ಎಂದೆನಿಸದೇ ಇರುವುದಿಲ್ಲ. ಆದರೆ ಈ ದೋಷಗಳು ಕಾದಂಬರಿಯ ಮೂಲ ಉದ್ದೇಶಕ್ಕೆ ಧಕ್ಕೆ ತರುವುದಿಲ್ಲ ಎಂದು ನಿಸ್ಸಂದೇಹವಾಗಿ ಹೇಳಬಹುದು.

'ಅರಮನೆ ಕುಂ.ವೀ. ಅವರು ಸೃಜನಶೀಲತೆಯ ಶಿಖರ. ಇದು ಕನ್ನಡದ ಸಂದರ್ಭದಲ್ಲಿ ಕಾದಂಬರಿ ಎನ್ನುವ ಸಾಹಿತ್ಯ ಪ್ರಕಾರದ ನಿರ್ವಚನ ಮತ್ತು ಸ್ವರೂಪವನ್ನೇ ಆಮೂಲಾಗ್ರವಾಗಿ ಬದಲಾಯಿಸುತ್ತದೆ. ಆಧುನಿಕವನ್ನು ಒಳಗೊಳ್ಳುತ್ತಲೇ ದೇಸಿ ಕಥನಪರಂಪರೆಯ ಆಯಾಮಗಳನ್ನು ಪಡೆದುಕೊಳ್ಳುತ್ತದೆ. ಹತ್ತೊಂಬತ್ತನೆಯ ಶತಮಾನದ ಸಮುದಾಯವು ವಸಾಹತೀಕರಣವನ್ನು ಒಳಗು ಮಾಡಿಕೊಂಡ ಬಗೆಯನ್ನು ಬಹಳ ಭಿನ್ನವಾಗಿ ಚಿತ್ರಿಸಿರುವ ಈ ಕೃತಿಯಲ್ಲಿ ರಾಜಸತ್ತೆ, ಬ್ರಿಟಿಷ್ ಪ್ರಭುತ್ವ ಮತ್ತು ಸಾಂಭವಿಯಿಂದ ಪ್ರತಿನಿಧಿತವಾಗುವ ಜನಸತ್ತೆಯ ಮುಖಾಮುಖಿ ನಡೆಯುತ್ತದೆ. ಬಡವರ ಶೋಷಿತರ ಮತ್ತು ಹೆಣ್ಣುಮಕ್ಕಳ ಆಶೋತ್ತರಗಳ ಪ್ರತಿಮಾರೂಪವಾದ ಸಾಂಭವಿಯು ತನಗಿರುವ ಅಲೌಕಿಕವಾದ ಶಕ್ತಿಗಳ ವಿನಿಯೋಗದಿಂದಲೇ ಜನಕಲ್ಯಾಣದಲ್ಲಿ ನಿರತಳಾಗುತ್ತಾಳೆ. ದೈವವು ಮಾನುಷದ ಜೊತೆಯಲ್ಲಿ ಪಡೆಯುವ ಸಂಗಾತನೇ ಅದಕ್ಕೆ ಜನಪರವಾದ ನೆಲೆಗಳನ್ನು ಒದಗಿಸುತ್ತದೆ. ಇಲ್ಲಿನ ಜೀವನವು ತನ್ನ ವಿವರಗಳಲ್ಲಿ ಅಂತೆಯೇ ಧೋರಣೆಗಳಲ್ಲಿ ಜನಸಾಮಾನ್ಯರ ಆಶಯಗಳಿಗೆ, ಜೀವನಪ್ರೀತಿಗೆ ಹಿಡಿದ ಕನ್ನಡಿಯಾಗಿದೆ. ಇನ್ನೊಂದು ಕಡೆ ಬ್ರಿಟಿಷ್ ಅಧಿಕಾರಿಯಾದ ಥಾಮಸ್ ಮನ್ರೋ ರಾಜಕೀಯವಾದ ಹುನ್ನಾರಗಳನ್ನು ನಡೆಸುವುದರ ಸಂಗಡವೇ ಜನಪರವಾದ ಚಟುವಟಿಕೆಗಳಲ್ಲಿಯೂ ನಿರತನಾಗಿ ದಂತಕಥೆ ಯಾಗುತ್ತಾನೆ(ಡಾ. ಎಚ್.ಎಸ್. ರಾಘವೇಂದ್ರರಾವ್, ಅರಮನೆ ಕಾದಂಬರಿಯ ಬೆನ್ನುಡಿಯಲ್ಲಿ).

'ಹೇಮರೆಡ್ಡಿ ಮಲ್ಲಮ್ಮನ ಕಥೆಯು' ಪ್ರಸ್ತುತ ಕಾದಂಬರಿಯ ಹೆಸರು ಪೌರಾಣಿಕವಾದರೂ ಇಲ್ಲಿಯ ಕಥೆ ಹೇಮರೆಡ್ಡಿಯ ಧರ್ಮಪತ್ನಿ ಶಿವಶರಣೆ ಮಲ್ಲಮ್ಮನವರ ಕಥೆಯಲ್ಲ. 'ಹೇಮರೆಡ್ಡಿ ಮಲ್ಲಮ್ಮ' ಎಂಬ ನಾಟಕ ವಾಗಿಲಿ ಎಂಬ ಗ್ರಾಮದಲ್ಲಿ ಶತದಿನೋತ್ಸವ ಕಂಡ ಸಂದರ್ಭದಲ್ಲಿ ನಡೆಯುವ ಆ ಊರಿನ ಸುತ್ತಮುತ್ತಲ ರೆಡ್ಡಿಗಳ ಅಟ್ಟಹಾಸ, ಕ್ರೌರ್ಯ, ಕೊಲೆ ಇತ್ಯಾದಿ ಬದುಕಿನ ವಿಶ್ಲೇಷಣೆ ಎಂದರೆ ತಪ್ಪಾಗಲಿಕ್ಕಿಲ್ಲ.

ಓ.ಎಲ್. ನಾಗಭೂಷಣಸ್ವಾಮಿ ಅವರು ಈ ಕಾದಂಬರಿಯ ಬೆನ್ನುಡಿಯಲ್ಲಿ ಹೇಳುವಂತೆ. 'ಕಾದಂಬರಿಯ ಒಳಗಿನ ಕಲ್ಪಿತ ವಾಸ್ತವ ವಾಗಿಲಿಯಲ್ಲಿ ಸಂಭವಿಸುತ್ತಿರುವ ವರ್ತಮಾನದೊಂದಿಗೆ ಬೆರೆತು ನಿಜಬದುಕಿನ ನಿಜವ್ಯಕ್ತಿಗಳು ಕಾದಂಬರಿಯ ಪಾತ್ರಗಳಾಗಿ, ಕಾದಂಬರಿಯ ಕಲ್ಪಿತ ಪಾತ್ರಗಳು ನಿಜ ಬದುಕಿನಲ್ಲಿ ಕಾಣಿಸಿಕೊಂಡು ಒಂದೊಂದು ಪ್ರಮುಖ ಪಾತ್ರವೂ ಹಲವು ಹೆಸರುಗಳನ್ನು ಹೊತ್ತು ಹಲವು ಅವತಾರಗಳನ್ನು ತಳೆದ, ತೆಲುಗಿನ ಪಾರ್ಥಸಾರಥಿ ಅವರ ವೈಯಕ್ತಿಕ ಬದುಕು. ಅವನ ಕಾದಂಬರಿ ಬರೆಯುತ್ತಿರುವ ಕುಂ.ವೀ. ವ್ಯಕ್ತಿತ್ವ ಎಲ್ಲ ಬೆರೆತು ಬದುಕಿನ ಅನ್ವೇಷಣೆ ಸಾಹಿತ್ಯದ ಪರಿಶೀಲನೆ, ಕಾದಂಬರಿಕಾರನ ಬದುಕಿನ ವಿಶ್ಲೇಷಣೆ ಎಲ್ಲಾ ಹೆಣಿಕೆಗೊಂಡು ಅತ್ಯಂತ ಕೌಶಲದಿಂದ ರೂಪ ತಳೆದಿರುವ ಈ ಕೃತಿ ಕುಂ.ವೀ. ಅವರ ಇದುವರೆಗಿನ ಬರವಣಿಗೆಯ ಎಲ್ಲಾ ಮುಖ್ಯ ಅಂಶಗಳನ್ನು ಧೋರಣೆಗಳನ್ನು ಒಳಗೊಂಡೂ ಭಿನ್ನವಾಗಿದೆ.

ಕುಂ.ವೀ. ಕಥಾಲೋಕ ಒಂದು ಪರ್ವತಶ್ರೇಣಿ. ಈಗಾಗಲೇ ಆ ಕಥಾಪರ್ವತಗಳ ನಡುವೆ ಅಡ್ಡಾಡಿರುವ ಓದುಗರು ಕುಂ.ವೀ. ಕೃತಿಯಲ್ಲಿ ಏನನ್ನು ನಿರೀಕ್ಷಿಸುತ್ತಾರೋ ಅದೆಲ್ಲ ಈ ಹೊಸ 'ಹೇಮರೆಡ್ಡಿ ಮಲ್ಲಮ್ಮ' ಕೃತಿಯಲ್ಲೂ ಇದೆ. ಜಲಪಾತದ ಹಾಗೆ ಭೋರ್ಗರೆಯುವ ಭಾಷೆ ಇದೆ. ನಿಬಿಡ ವೃಕ್ಷರಾಶಿಗಳಂತೆ ಓದುಗರ ಮನಸ್ಸನ್ನೆಲ್ಲ ಆಕ್ರಮಿಸುವ ಅಭಿಜಾತ ಆಕ್ರಮಣಶೀಲ ವ್ಯಕ್ತಿತ್ವದ ಪಾತ್ರಗಳಿವೆ. ಒಂದು ಸಂಗತಿಯನ್ನು ಹತ್ತು ಬಗೆಗಳಲ್ಲಿ ವಿವರಿಸಿ ಇಪ್ಪತ್ತು ಸಾಧ್ಯತೆಗಳನ್ನು ಹೊಳೆಯಿಸಿ ತಬ್ಬಿಬ್ಬುಗೊಳಿಸುವ ವಾಕ್ಯಗಳ ಸಮೃದ್ಧಿ ಇದೆ. ಲೇಖಕರು ಒಂದರೊಳಗಿಗೊಂದು ಭಾಷೆಯನ್ನು ಬೆರೆಸಿ ಅಸ್ಖಲಿತ ರೀತಿಯಲ್ಲಿ ನಿರ್ಭೀತವಾಗಿ ಮಾತನಾಡುವ ಭಾಗಗಳಿವೆ, ಉತ್ಪ್ರೇಕ್ಷೆಯ ಮೂಲಕ ವಿಡಂಬನೆಯನ್ನು ಮಾಡುತ್ತಿರುವಾಗಲೇ ವಾಸ್ತವದ ಭೀಕರತೆಯನ್ನು ಕಾಣಿಸಿ ದಿಗ್ಭ್ರಮೆ ಮೂಡಿಸುವ ಕೌಶಲವಿದೆ.

ಈ ಕಾದಂಬರಿಯೊಂದು 'ದುಃಸ್ವಪ್ನಗಳ ಪರಿಶೆ'. ಭೂಪಟಕ್ಕೂ ತನ್ನ ಅಸ್ತಿತ್ವದ ಸುಳಿವು ನೀಡದಿರುವ ವಾಗಿಲಿಯಲ್ಲಿ ನಡೆಯುವ ಹೇಮರೆಡ್ಡಿ ಮಲ್ಲಮ್ಮ ನಾಟಕ ಮತ್ತು ಅದರ ಶತದಿನೋತ್ಸವ ಕಥೆಯ ಬೀಜ. ಅದು ಬೆಳೆದು ಮಹಾವೃಕ್ಷವಾಗಿ? ಹಲವು ಕತೆಗಳ

ತರುರಾಜಿಯಾಗಿ ವಿಸ್ತರಿಸಿಕೊಂಡಿದೆ. ಐತಿಹ್ಯಗಳಲ್ಲಿ ಬರುವ ಮಲ್ಲಮ್ಮ ಜಮೀನ್ದಾರಿ ವ್ಯವಸ್ಥೆಯ ಅಹಂಕಾರವನ್ನು ನಾಶ ಮಾಡಿದ ಸುದ್ದಿ, ನಾಟಕ ಕೃತಿಯೊಳಗಡೆ ಹೇಮರೆಡ್ಡಿ ಪಕ್ಕಾ ಜಮೀನ್ದಾರ, ಕಾಮುಕ. ತನ್ನ ನಾದಿನಿ ಮಲ್ಲಮ್ಮ ಶಿವಶರಣೆ. ತನ್ನ ಪಾತಿವ್ರತ್ಯದಿಂದ ಶಿವನ ಮೇಲಿನ ಭಕ್ತಿಯಿಂದ ಆತನನ್ನು ಮಹಾ ಸಂತನನ್ನಾಗಿಯೂ ಅನುಭವಿ ಕವಿಯನ್ನಾಗಿಯೂ ಪರಿವರ್ತಿಸುತ್ತಾಳೆ. ವಾಗಿಲಿಗೆ ಬರುವ ನಾಟಕ ತಂಡ ಮತ್ತು ನಟಿ ಪದ್ಮಾವತಿಯರು ನೆಪವಾಗಿ ಇಡೀ ವಾಗಿಲಿಯ ದಣಿಗಳ, ಕೊಲೆಗಡುಕರ, ರಾಜಕೀಯದ ಜನ ಸಾಮಾನ್ಯರ ಬದುಕು ತೆರೆದುಕೊಳ್ಳುತ್ತದೆ. 'ವಾಗಿಲಿ' ಎಂಬ ತ್ರಿಕೋನಾಕೃತಿಯ ಮೂರಣ ಮೂಲೆಯ ಪ್ರೇಮ ಹಿಂಸೆ ತ್ಯಾಗ ಅದರ ಒಳ ಆವರಣದಲ್ಲಿ ಮೃಗೀಯ ಗ್ರಾಮೀಣ ಬದುಕು. 'ಇಲ್ಲಿ ರಣಬಿಸಿಲು ಬೆಳದಿಂಗಳೆಂದಾಗಲಿಲ್ಲ, ಸುಳಿವ ಸುಂಟರಗಾಳಿ ತಂಗಾಳಿಯಾಗಲಿಲ್ಲ, ತಂಗಳು ಬಿಸಿ ಗೂಳಾಗಲಿಲ್ಲ, ವೃದ್ಧರು ಹರೆಯವನ್ನ ವಹಿಸಿಕೊಳ್ಳಲಾಗಲಿಲ್ಲ, ಕೆಟ್ಟವರು ಒಳ್ಳೆಯವರಾಗಲಿಲ್ಲ. ತಮ್ಮ ಊರಿನ ಹೆಸರು ಗೊತ್ತಿರಬಹುದಾದ ಆದರೆ ಈ ದೇಶದ ಹೆಸರು ತಿಳಿಯದ ಸದಾ ಸಾಮಾಜಿಕ ಅವಗಡಗಳಿಗೆ ಗುರಿಯಾಗುತ್ತಲೇ ಇರುವ 'ಶಿಕ್ಷಣವಂಚಿತ ಪ್ರಜಾನಿ?ಹ'ವನ್ನು ಹೇಮರೆಡ್ಡಿ ಮಲ್ಲಮ್ಮ ಕಲಕಿದ ಪರಿಯನ್ನು ವಾಗಿಲಿಯ ಶಿಕ್ಷಕ ನಿರೂಪಕ, ತನ್ನ ಗೆಳೆಯ ತೆಲುಗಿನ ಕತೆಗಾರ ಬರೆದ ಮೊಟ್ಟಮೊದಲ ಕಾದಂಬರಿಯ ಮೂಲಕ ಕಡೆದಿಡುತ್ತಾನೆ. ಈ ತಂತ್ರ ಕಾದಂಬರಿಯಲ್ಲಿ ಅರ್ಥದ ಪದರಗಳನ್ನು ಒಂದಾದ ನಂತರ ಒಂದರಂತೆ ಸೃಷ್ಟಿಸುತ್ತ ಹೋಗುತ್ತದೆ.

ಕಾದಂಬರಿಯೊಳಗಿನ ಕಲ್ಪಿತ ವಾಸ್ತವ ವಾಗಿಲಿಯಲ್ಲಿ ಸಂಭವಿಸುತ್ತಿರುವ ವರ್ತಮಾನ ದೊಂದಿಗೆ ಬೆರೆತು ನಿಜಬದುಕಿನ ನಿಜವ್ಯಕ್ತಿಗಳು ಕಾದಂಬರಿಯ ಪಾತ್ರಗಳಾಗಿ ರೂಪಗೊಂಡಿರುವ ವಿಶಿಷ್ಟ ಕಥನತಂತ್ರವಾಗಿದೆ.

ಈ ಕಾದಂಬರಿಯಲ್ಲಿ ಕಥೆಗಾರ ಕಾದಂಬರಿಯ ಮುಕ್ತಾಯದ ಹಂತದಲ್ಲಿ ಹೇಳುವ ಮಾತುಗಳು ಅವರ ಪಾತ್ರಗಳಿಗೆ ತಾರ್ಕಿಕ ಅಂತವನ್ನು ತಲುಪಿಸುವುದು ಹೇಗೆ ಎನ್ನುವ ಗೊಂದಲ ಉಂಟಾಗುತ್ತದೆ. ಅವರು ಸೃಷ್ಟಿಸಿದ ಎಲ್ಲಾ ಪಾತ್ರಗಳು ಅವರ ಕನಸಿನಲ್ಲೋ ಅಥವಾ ವಾಸ್ತವದಲ್ಲೋ ಯಾವುದೆಂದು ತಿಳಿಯದ ಸ್ಥಿತಿಯಲ್ಲಿ ಎದುರಾಗಿ ಚರ್ಚೆಗೆ ನಿಲ್ಲುತ್ತವೆ. ಅವರೇ ಕಾದಂಬರಿಯಲ್ಲಿ ಹೇಳುವಂತೆ ಶಶಾಂಕ ಮತ್ತು ಹರಿಶ್ಚಂದ್ರ ರೆಡ್ಡಿ, ಲಕ್ಷ್ಮಿ ಮತ್ತು ವನಜಾಕ್ಷಿ, ಶರಭ ಮತ್ತು ಸೂರ್ಯಪ್ರತಾಪರೆಡ್ಡಿ, ರಾಘಪ್ಪ ಮತ್ತು ಪಂಪಯ್ಯರಂಥ ಸ್ವಾಮಿದ್ವಯರು ಚಾಗಲೆ ಮತ್ತು ಚಕ್ರವರ್ತಿ ಹೆಬ್ಬಟಂ ಸೀತಾರಾಮರೆಡ್ಡಿ ಮತ್ತು ನರಸಯ್ಯ ಇಂಥ ಜೋಡಿ ಪಾತ್ರಗಳಿಗೆ ತಾರ್ಕಿಕ ಅಂತ್ಯ ದಯಪಾಲಿಸುವುದು ಯಾವುದೇ ಸೃಜನಶೀಲ ಲೇಖಕನಿಗೆ

ಸವಾಲಿನ ಸಂಗತಿಯೇ ಸರಿ. ಆದರೆ ಅವೆಲ್ಲಕ್ಕಿಂತ ಮುಖ್ಯವಾಗಿ ಪದ್ಮಾವತಿ ಪಾತ್ರ ನನ್ನನ್ನು ಕಾಡಲಾರಂಭಿಸಿತು. ಮೂಲಕಥನಕಾರ ಪಾರ್ಥ ಆಕೆಯನ್ನು ಸ್ನಿಗ್ಧ ಸುಂದರಿ ಎಂದೂ ಅಭಿಜಾತ ಕಲಾವಿದೆ ಎಂದೂ ಗಂಭೀರ ವ್ಯಕ್ತಿತ್ವ ಉಳ್ಳವಳೆಂದೂ ಪ್ರಮಾಣೀಕರಿರುವುದು ತಾನು ಮಾಡಿರುವ ದೊಡ್ಡ ಪರಪಾಟು. ತನ್ನ ಉದ್ದೇಶ ಏನೋ? ಆದರೆ ನಾನು ಮಾತ್ರ ಆಕೆಗೆ ಕಾದಂಬರಿಯ ಕೇಂದ್ರಪಾತ್ರದ ಗೌರವ ನೀಡಬೇಕು. ಆಕೆ ತನ್ನ ನಿರುಪದ್ರವಿ ಸಹೋದರ ಜಲಂಧರನ ಸಂಗಡ ವಾಗಿಲಿಯನ್ನು ಬಿಡುವಳೋ ಅಥವಾ ಅಲ್ಲಿಯೇ ನೆಲೆಸುವಳೋ ಎನ್ನುವುದು ಸಹ ನಿಗೂಢ. ಕಾದಂಬರಿಯ ವಿವಿಧ ಸರ್ಗಗಳಲ್ಲಿರುವ ಆಖ್ಯಾನಗಳನ್ನು ಕೂಲಂಕಷವಾಗಿ ಪರಿಶೀಲಿಸಿದರೆ ಕಂಪನಿಯನ್ನು ಜಲಂಧರ ವಿಸರ್ಜಿಸಿ ವಾಗಿಲಿಯಲ್ಲಿಯೇ ಕಂಡುಕೊಳ್ಳಬಹುದು ಅದು ಬಲವಂತವಾಗಿಯೇ ಸ್ವಯಂ ಇಚ್ಛೆಯಿಂದಾಗಿಯೇ ಅಥವಾ ಬೇರೆ ಏನಾದರೂ ಕಾರಣಗಳು ಕಥೆಯ ನೇಪಥ್ಯದಲ್ಲಿರುವವೋ ಎನ್ನುವಂತೆ ಕಾಣುತ್ತವೆ.

ಹೇಮರೆಡ್ಡಿ ಮಲ್ಲಮ್ಮನ ಕಥೆ ಕಾದಂಬರಿಯನ್ನು ಓದುತಾ ಹೋದರೆ ಖಂಡಿತವಾಗಿಯೂ ಇದೊಂದೊಂದು ದುಃಸ್ವಪ್ನಗಳ ಪರಿಶೆಯೇ ಸರಿ ಎಂದೆನಿಸುತ್ತದೆ.

**ನಿಜಲಿಂಗನ ಗ್ರಾಮವಾಸ್ತವ್ಯ ಮತ್ತು ರಾಜಕಾರಣ**

'ನಿಜಲಿಂಗ' ಕತೆಯು ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ನಡೆಯುವ ಒಂದು ರಮ್ಯ ಅದ್ಭುತ ಕಥಾನಕವಾಗಿದೆ. ಈ ಕಾದಂಬರಿಯ ಮೊದಲರ್ಧದಲ್ಲಿ ಸ್ವಾತಂತ್ರ್ಯಪೂರ್ವ ಭಾರತದಲ್ಲಿ ವಸಾಹತುಶಾಹಿಯನ್ನು ತಮ್ಮದೇ ಆದ ರೀತಿಯಲ್ಲಿ ಅನಕ್ಷರಸ್ಥ ಜನಸಾಮಾನ್ಯರು ಎದುರಿಸಿದ ಚಿತ್ರಣವಿದ್ದರೆ ಎರಡನೇ ಭಾಗದಲ್ಲಿ ರಾಜಕೀಯ ಹುನ್ನಾರುಗಳು, ದುರುಳರು, ದುಷ್ಟರು, ಕಳ್ಳರು, ಕೊಲೆಗೆಡುಕರಿಂದ ಈ ದೇಶ ಹೇಗೆ ಸುಲಿಗೆಗೊಳ್ಳುತ್ತಿದೆ ಎಂಬುದರ ಚಿತ್ರಣವಿದೆ. ಅಂದರೆ ಸ್ವಾತಂತ್ರ್ಯಪೂರ್ವದಲ್ಲಿ ಹೇಗೆ ಜಮೀನ್ದಾರರು, ಪಾಳೇಗಾರರು ಮತ್ತು ಬ್ರಿಟಿಷರು ಈ ದೇಶವನ್ನು ಲೂಟಿ ಮಾಡಿದರೋ ಹಾಗೆ ಸ್ವಾತಂತ್ರ್ಯಾನಂತರ ಈ ಸುಲಿಗೆ ಬೇರೆ ರೂಪ ಪಡೆಯಿತು. ಒಟ್ಟಿನಲ್ಲಿ ಜನಸಾಮಾನ್ಯರ ಜೀವನ ಸ್ವಾತಂತ್ರ್ಯಾನಂತರ ಬದಲಾಗಲಿಲ್ಲ ಎಂಬ ವಿಡಂಬನೆಯನ್ನು ರಾಜಕೀಯದ ಹಿನ್ನೆಲೆಯಲ್ಲಿ ಅತ್ಯಂತ ವಾಸ್ತವವಾಗಿ ಪ್ರಕಟಪಡಿಸುತ್ತದೆ. ಈ ಕಾದಂಬರಿಯು ಇದುವರೆಗಿನ ಇವರ ಕಾದಂಬರಿಗಳಲ್ಲೇ ವಸ್ತು, ಭಾಷೆ, ಶೈಲಿಯಲ್ಲಿ ಭಿನ್ನವಾಗಿ ಮೂಡಿ ಬಂದ ಒಂದು ಅದ್ಭುತ ಪ್ರಯೋಗಾತ್ಮಕ ಕಾದಂಬರಿಯಾಗಿ ಹೊರಹೊಮ್ಮಿದೆ.

ನಿರೂಪಕರಿಗೆ ಕಥೆ ಪ್ರಾರಂಭವಾಗುವುದು ಶ್ರೀಯುತ ಶಂಭುಲಿಂಗಪ್ಪನವರಿಂದ ಕರೆ ಬರುತ್ತದೆ. ಕರೆಯ ಮೇರೆಗೆ ಶಂಭುಲಿಂಗಪ್ಪನವರ ಮನೆಗೆ ಹೋದಾಗ ಅವರು ಒಂದು

ಸ್ತ್ರೀರೂಪದ ಫೋಟೋ ತೋರಿಸಿ ಇವರು ನಮ್ಮ ತಂದೆ ಎಂದು ನಿರೂಪಕರಿಗೆ ಹೇಳುತ್ತಾರೆ. ಆ ತಂದೆಯ ಹೆಸರು 'ನಿಜಲಿಂಗ' ಎಂದು ಹೇಳುವುದರ ಮೂಲಕ ನಿರೂಪಕನಲ್ಲಿ ಕುತೂಹಲ ಕೆರಳಿಸುತ್ತಾರೆ. ಇದರ ಹಿಂದಿನ ರಹಸ್ಯ ಏನಿರಬಹುದು ಎಂದು ವಿಚಾರಿಸುತ್ತಾ ಹೋದಂತೆ ಕತೆಯ ಹಂದರ ಬಿಚ್ಚಿಕೊಳ್ಳುತ್ತಾ ಹೋಗುತ್ತದೆ.

**ಈ ಕಥೆಯನ್ನು ಕುರಿತು ಲೇಖಕರ ನಿಲುವು**

'ಯಾವ ಮಗ್ಗುಲಿಂದ ಕಥೆ ಆರಂಭಿಸುವುದು. ಯಾಕೆಂದರೆ ಇದು ಎಲ್ಲಾ ಕಥೆಗಳಿಗಿಂತ ತೀರಾ ಭಿನ್ನ. ಚಿಗುರು ವರ್ತಮಾನದಲಿದ್ದರೂ. ಕಥೆಯ ಮೂಲ ಬೇರುಗಳಿರುವುದು ಸ್ವಾತಂತ್ರ್ಯಪೂರ್ವ ಭಾರತದಲ್ಲಿ ತ್ರಿಭುಜಾಕೃತಿಯಂಥ ಈ ಕಥೆಯ ಒಂದು ಮೂಲೆಯಲ್ಲಿ ಆಂಗ್ಲರ ವಸಾಹತುಶಾಹಿ ಇದ್ದರೆ ಇನ್ನೊಂದು ಮೂಲೆಯಲ್ಲಿರುವುದು ತರೀಕೆರೆಯ ಇತಿಹಾಸ. ಪಳೆಯುಳಿಕೆ ಅಂತಿಮ ಮೂಲೆಯಲ್ಲಿ ದಾಸ್ಯಶೃಂಖಲೆಯ ಪರಿವೇಶದಲ್ಲಿರುವ ಭಾರತ. ಈ ತ್ರಿಕೋನಾಕೃತಿಯ ನಟ್ಟ ನಡುವೆ ವೇಣುಗೋಪಾಲಭಟ್ಟರ ಕುಟುಂಬದ ಅಸಹಾಯಕತೆಯ ಚಿತ್ರಣ. ಯಾವ ಮೂಲೆಯಿಂದ ಹೊರಟರೂ ತಲುಪದು ಕೇಂದ್ರಸ್ಥಾನವನ್ನು. ಹೀಗೆ ನಿರೂಪಕ ನಿರ್ಧರಿಸುತ್ತಾ ಗಂಡಿಕೋಟೆಯನ್ನು ಕೇಂದ್ರವಾಗಿಟ್ಟುಕೊಂಡು ಕತೆಯನ್ನು ಪ್ರಾರಂಭಿಸುತ್ತಾನೆ.'[೧೬]

ನನ್ನ ಅಧ್ಯಯನದ ಅನುಕೂಲತೆಗಾಗಿ ಈ ಕೆಳಗೆ ಸೂಚಿಸಿದ ನೆಲೆಗಳಲ್ಲಿ ಈ ಕಾದಂಬರಿಯನ್ನು ಅಧ್ಯಯನ ಮಾಡಲಾಗಿದೆ.

**೧. ಸ್ವಾತಂತ್ರ್ಯಪೂರ್ವ ಕಾಲಘಟ್ಟದಲ್ಲಿ ನಡೆಯುವ ಭಾಗ**

೧. ಪಾಳೇಗಾರ ತರೀಕೆರಿ ಅರಸನ ಕಥೆ.

೨. ಕ್ಯಾಪ್ಟನ್ ಸಿದ್ದಲಿಂಗ.

೩. ಶಂಭುಲಿಂಗನ ಅಜ್ಜಿಯ ಕಥೆ.

೪. ನಿಜಲಿಂಗನ ಬದುಕಿನ ಚಿತ್ರಣ.

**೨. ಸ್ವಾತಂತ್ರ್ಯೋತ್ತರ ರಾಜಕಾರಣ**

೧. ಚೋರಕಲೆಯ ಅದ್ಭುತ ರಮ್ಯ ಕಥೆಗಳು.

೨. ಮಂಗಳಮುಖಿಯರ ಸಮಾಜಸೇವೆ.

೩. ನಿಜಲಿಂಗನ ರಹಸ್ಯ.

೪. ತೃತೀಯ ಲಿಂಗಗಳು.

**ಸ್ವಾತಂತ್ರ್ಯಪೂರ್ವ ಕಾಲಘಟ್ಟದಲ್ಲಿ ನಡೆಯುವ ಭಾಗ**

ಪ್ರಸ್ತುತ ಕಥೆ 'ನಿಜಲಿಂಗ' ಪ್ರಾರಂಭವಾಗುವುದು ಸ್ವಾತಂತ್ರ್ಯಪೂರ್ವದಲ್ಲಿ. ಮುಕ್ತಾಯ ವಾಗುವುದು ಸ್ವಾತಂತ್ರ್ಯಾನಂತರ. ಈ ಹಿನ್ನೆಲೆಯಲ್ಲಿ ಸ್ವಾತಂತ್ರ್ಯಪೂರ್ವದಲ್ಲಿ ಬ್ರಿಟಿಷರ ಆಡಳಿತಕ್ಕೆ ಒಳಪಟ್ಟ ಕನ್ನಡ ನಾಡಿನಲ್ಲಿ ಅನೇಕ ಪಾಳೇಗಾರರು ಇದ್ದರು. ಇವರುಗಳಲ್ಲಿ ಅನೇಕರು ಬ್ರಿಟಿಷರ ಅಧೀನಕ್ಕೆ ಒಳಪಟ್ಟವರಾಗಿದ್ದರು. ಕಂಪನಿ ಸರಕಾರದ ಬ್ರಿಟಿಷ್ ಅಧಿಕಾರಿಯಾದ ವೆಲ್ಲೆಸ್ಲಿಯು ಮಂಗಳೂರಿನಲ್ಲಿದ್ದ ಥಾಮಸ್ ಮನ್ರೋ ಸಾಹೇಬನನ್ನು ಕರೆಸಿಕೊಂಡು ನಾಲ್ಕಾರು ಜಿಲ್ಲೆಗಳನ್ನು ಆತನ ಸುಪರ್ದಿಗೊಪ್ಪಿಸಿದ್ದ ಈತ ಅಪಾರ ಚಾಣಾಕ್ಷನೆಂದು ಕಾರ್ನ್ವಾಲಿಸ್ ಸಾಹೇಬನಿಂದ ಹೊಗಳಿಸಿಕೊಂಡಿದ್ದ. ಮನ್ರೋ ಸಾಹೇಬ ಭೂಮಿಯನ್ನು ಬಡವರಿಗೆ ಹಂಚುವ ಮೂಲಕ ಬಹುಸಂಖ್ಯಾತ ಶೂದ್ರ ದಲಿತರ ಪ್ರೀತಿಗೆ ಪಾತ್ರನಾಗಿದ್ದ. ಇವರ ನೆರವಿನಿಂದ ತುಂಡರಸರ ಹುಟ್ಟಡಗಿಸುತ್ತಿದ್ದ ಎಷ್ಟೋ ಮಂದಿ ಪಾಳೇಗಾರರಿಗೆ ನೂರು ಇನ್ನೂರು ಪಿಂಚಣಿ ನೀಡಿ ಮೂಲೆಗೆ ಕೂಡ್ರಿಸಿದ್ದ. ಆವಾಗ ಈ ದೇಶಕ್ಕೆ ಒಂದು ಹೆಸರಾಗಲಿ ಒಂದು ಧರ್ಮವಾಗಲಿ ಇರಲಿಲ್ಲ. ಇಂಥ ಸಂದರ್ಭದಲ್ಲಿ ತರೀಕೆರೆ ಪಾಳೇಗಾರ ರಾಜಾ ವಿರುಪಾಕ್ಷನಾಯಕ ಸಹ ಒಬ್ಬ ಈತನು ಬ್ರಿಟಿಷರ ಕುತಂತ್ರಕ್ಕೆ ಬಲಿಯಾಗಿ ಹಾಸಿಗೆ ಹಿಡಿದಿದ್ದ. ಈತನ ಮಗ ಪರುಶುರಾಮ ನಾಯಕ ನಾಪತ್ತೆಯಾಗಿದ್ದ. ಆತನ ಮಗ ರಾಜನರಸಿಂಹನಾಯಕ ಇವರುಗಳಿಗಿಂತ ವಾಸಿ. ಕನ್ನಡ, ಇಂಗ್ಲಿಷ್ ಬಲ್ಲವನಾಗಿದ್ದ. ಈತ ಪ್ರಜೆಗಳ ಕಷ್ಟಸುಖ ವಿಚಾರಿಸುತ್ತಿದ್ದ. ತನಗೆ ಬರುವ ಪಿಂಚಣಿಯಲ್ಲಿ ಬಡವರಿಗೆ ಹಂಚುತ್ತಿದ್ದ. ದಿವಾನ ಅಶ್ವತ್ಥನಾರಾಯಣನ ಸಲಹೆಯಂತೆ ಬ್ರಿಟಿಷರಿಗೆ ಸ್ಥಿರಾಸ್ತಿ ತೆಗೆದುಕೊಂಡು ಚರಾಸ್ತಿ ಕೊಡಿರಿ ಎಂದು ಕೇಳಿದಾಗ ಕೋರ್ಟ್‌ಗೆ ಹೋಗಿ ತೆಗೆದು ಕೊಳ್ಳಲು ಕಂಪನಿ ಸರಕಾರ ಹೇಳುತ್ತದೆ. ಆದರೆ ಕೋರ್ಟಿನಲ್ಲಿ ಈತನ ವಿರುದ್ಧ ತೀರ್ಪು ನೀಡುತ್ತಾರೆ. ರಾಜ ಬೀದಿಗೆ ಬೀಳುತ್ತಾನೆ. ನಂತರ ಆತನ ಕೊಲೆ ಮಾಡಿಸಲು ಕಂಪನಿ ಸರ್ಕಾರದಿಂದ ನಿಯೋಜನೆಗೊಂಡ ಕ್ಯಾಪ್ಟನ್ ಸಿದ್ಧಲಿಂಗ ಸಂಚು ರೂಪಿಸುತ್ತಾನೆ.

ಹೀಗೆ ಈ ಸ್ವಾತಂತ್ರ್ಯಪೂರ್ವದಲ್ಲಿ ಪಾಳೇಗಾರರ ಬದುಕಿನ ಬವಣೆಯನ್ನು ಕಾದಂಬರಿಯ ಮೂಲಕ ಪರಿಚಯಿಸುವ ಕುಂ.ವೀ. ಅವರು ನಮಗೆ ಅನೇಕ ವಿಚಾರಗಳನ್ನು ತಿಳಿಸುತ್ತಾ ಹೋಗುತ್ತಾರೆ. ನಂತರ ಈ ಪಾಳೇಗಾರರ ಸ್ವಾಮಿ ಭಕ್ತರು ಹೇಗೆ ಬ್ರಿಟಿಷರ ವಿರುದ್ಧ ತಿರುಗಿ ಬೀಳುತ್ತಾರೆ. ಹೇಗೆ ಸ್ವಾತಂತ್ರ್ಯ ಹೋರಾಟದ ಪ್ರಾರಂಭಿಕರ ಹೆಜ್ಜೆ ಗುರುತುಗಳು ಮೂಡುತ್ತವೆ ಎಂಬುದನ್ನು ಅತ್ಯಂತ ನೈಜ ಚಿತ್ರಣದ ಮೂಲಕ ಕಟ್ಟಿಕೊಟ್ಟಿದ್ದಾರೆ.

**ಕ್ಯಾಪ್ಟನ್ ಸಿದ್ದಲಿಂಗ**

ಕ್ಯಾಪ್ಟನ್ ಸಿದ್ದಲಿಂಗ ಈ ಕಾದಂಬರಿಯ ನಾಯಕ 'ನಿಜಲಿಂಗ'ನ ತಂದೆಯಾಗಿರುತ್ತಾನೆ. ಬ್ರಿಟಿಷ್ ಸರಕಾರದಲ್ಲಿ ತುರುವೇಕೆರೆ ಸಂಸ್ಥಾನಕ್ಕೆ ಕ್ಯಾಪ್ಟನ್ನಾಗಿ ನಿಯೋಜನೆಗೊಂಡಿರುತ್ತಾನೆ.

ಅಲ್ಲಿನ ರಾಜನನ್ನು ಕಂಪನಿಯು ಅರಮನೆಯ ಪ್ರವೇಶಕ್ಕೆ ನಿಷೇಧಿಸಿದ್ದರಿಂದ ಈ ಕ್ಯಾಪ್ಟನ್ನನೇ ರಾಜನಂತೆ ವರ್ತಿಸುತ್ತಾನೆ ಮತ್ತು ಅಲ್ಲಿನ ಪಾಳೇಗಾರನನ್ನು ಕೊಲ್ಲಲು ಸಂಚು ರೂಪಿಸುತ್ತಾನೆ. ಇಂಥ ಒಂದು ಸಂದರ್ಭದಲ್ಲಿ ಉದ್ಧರೇತಪೇಶ್ವರ ಸಾಮಿಯ ರಥೋತ್ಸವದ ಪ್ರಯುಕ್ತ ಕುಸ್ತಿ ಪಂದ್ಯಕ್ಕೆ ಮುಖ್ಯ ಅತಿಥಿಯಾಗಿ ಕ್ಯಾಪ್ಟನ್‌ನನ್ನು ಕರೆಯಲು ಲಿಂಗದಹಳ್ಳಿಯ ಗೌಡರು ಬರುತ್ತಾರೆ. ಆದರೆ ಕ್ಯಾಪ್ಟನ್ ಸಿದ್ದಲಿಂಗನು ತಾನೇ ಸ್ವತಃ ಕುಸ್ತಿ ಪಂದ್ಯದಲ್ಲಿ ಸ್ಪರ್ಧಿಸುವುದಾಗಿ ತಿಳಿಸುತ್ತಾನೆ. ಆದರೆ ಲಿಂಗೇಗೌಡರು ಧೈರ್ಯ ಮಾಡಿ ಆತನಿಗೆ ಹೇಳುತ್ತಾರೆ. ಅಕಸ್ಮಾತ್ ನೀವು ಸೋತರೆ ನಮ್ಮ ತುರುವೇಕೆರೆ ರಾಜನನ್ನು ಮಾಫ್ ಮಾಡಬೇಕು ಎಂದು ಕೇಳಿಕೊಳ್ಳುತ್ತಾನೆ. ಈ ಚಿತ್ರಣವಂತೂ ನಮಗೆ ಹಿಂದಿ ಸಿನಿಮಾದ ಸ್ವತಂತ್ರಪೂರ್ವ ಕಾಲಘಟ್ಟದ ಚಿತ್ರಣವಿರುವ 'ಲಗಾನ್' ಚಲನ ಚಿತ್ರವನ್ನು ನೆನಪಿಸುತ್ತದೆ. ಅಲ್ಲಿ ಹಳ್ಳಿಯ ಕ್ರಿಕೆಟ್ ತಂಡಕ್ಕೂ ಬ್ರಿಟಿಷ್ ಅಧಿಕಾರಿಗಳಿಗೂ ಕ್ರಿಕೆಟ್ ಸ್ಪರ್ಧೆ ನಡೆಯುತ್ತದೆ. ಈ ಪಂದ್ಯದಲ್ಲಿ ಹಳ್ಳಿಜನ ಗೆದ್ದರೆ ಅವರಿಗೆ ತೆರಿಗೆಯಿಂದ ಮುಕ್ತಿ ಕೊಡಬೇಕು ಎಂಬುದು ಷರತ್ತು. ಹಾಗೆಯೇ ಇಲ್ಲಿ ಕುಸ್ತಿ ಪಂದ್ಯದಲ್ಲಿ ಹಳ್ಳಿಜನ ಗೆದ್ದರೆ ರಾಜನನ್ನು ಕ್ಷಮಿಸಬೇಕು ಎಂಬುದು ಷರತ್ತು. ಪ್ರಸ್ತುತ ಈ ಪಂದ್ಯವನ್ನು ಲೇಖಕರು ರನ್ನನ ಗದಾಯುದ್ಧದಂತೆ ಚಿತ್ರಿಸಿದ್ದಾರೆ.

ಈ ಕುಸ್ತಿ ಪಂದ್ಯವನ್ನು ವೀಕ್ಷಿಸಲು ಸಂಪ್ರದಾಯಬದ್ಧ ಬ್ರಾಹ್ಮಣ ಕುಟುಂಬದ ಇಬ್ಬರು ಹುಡುಗಿಯರು ಪುರುಷವೇಷದಲ್ಲಿ ಬಂದು ಪುರುಷರ ನಡುವೆ ಕುಳಿತು ಪಂದ್ಯ ವೀಕ್ಷಿಸಿದ್ದು ಈ ಭಾಗದಲ್ಲಿ ಅತ್ಯಂತ ಸ್ವಾರಸ್ಯಕರ ಘಟನೆ. ನಂತರ ಅಚಾನಕ್ಕಾಗಿ ಆ ಸ್ತ್ರೀಯರು ಸಂತೋಷದಿಂದ ಸಿಳ್ಳೆ ಕೇಕೆ ಹೊಡೆಯುವಾಗ ಅವರ ರುಮಾಲು ಜಾರಿಬಿದ್ದು ಸ್ತ್ರೀಯರೆಂದು ಸಾಬಿತಾಗುತ್ತದೆ. ಅವರಲ್ಲಿ ಸತ್ಯಭಾಮೆ ಎಂಬ ಹುಡುಗಿಯನ್ನು ಕ್ಯಾಪ್ಟನ್ ಇಷ್ಟಪಟ್ಟು ಪ್ರೀತಿಸಿ ನಂತರ ಆಕೆ ಮನೆ ಬಿಟ್ಟು ಮಂಗಳೂರಿಗೆ ಹೋಗಿ ಮತಾಂತರವಾಗಿ ಕ್ಯಾಪ್ಟನ್‌ನ್ನು ಮದುವೆಯಾಗಿ ಪೌಲಿನ್ ಎಂಬ ನಾಮಾಂಕಿತಳಾಗಿ ಜೀವನ ಮುಂದುವರಿಸುತ್ತಾಳೆ. ಅನಂತರ ಆಕೆ ಗರ್ಭವತಿಯಾದ ಸಂದರ್ಭದಲ್ಲಿ ಪ್ರಜಾಪೀಡಕನಾದ ಕ್ಯಾಪ್ಟನ್ ಸಿದ್ದಲಿಂಗನ ಕೊಲೆಯಾಗುತ್ತದೆ.

**ಶಂಭುಲಿಂಗನ ಅಜ್ಜಿಯ ಕಥೆ**

ಈ ಶಂಭುಲಿಂಗನ ಅಜ್ಜಿಯು 'ನಿಜಲಿಂಗ'ನ ತಾಯಿ 'ಸತ್ಯಭಾಮೆ'. ಈಕೆ ಕ್ಯಾಪ್ಟನ್ ಸಿದ್ದಲಿಂಗನನ್ನು ಮದುವೆಯಾಗಿ 'ಪೌಲಿನ್' ಆಗಿ ಮತಾಂತರ ಹೊಂದುತ್ತಾಳೆ. ಪ್ರಜಾಪೀಡಕನಾದ ಕ್ಯಾಪ್ಟನ್ ಸಿದ್ಧಲಿಂಗನ ಕೊಲೆಯ ನಂತರ ತುಂಬು ಗರ್ಭಿಣಿಯಾಗಿದ್ದ ಈಕೆ ಮಂಗಳೂರನ್ನು ಬಿಟ್ಟು ಅಲೆಮಾರಿಯಾಗಿ ಲಿಂಗದಹಳ್ಳಿಗೆ ಬರುತ್ತಾಳೆ. ನಂತರ ಈಗ ತನ್ನ ಗತಜೀವನದ 'ಪೌಲಿನ್' ಬದುಕನ್ನು ಮರೆತು ಅನಂತರಮ್ಮನಾಗಿ ಹೆಸರನ್ನು ಇಟ್ಟುಕೊಂಡು ಅತ್ಯಂತ

ಸ್ವಾಭಿಮಾನಿ ಮತ್ತು ಆದರ್ಶ ಸ್ತ್ರೀಯಾಗಿ ಕಷ್ಟಜೀವಿಯಾಗಿ ಕೂಲಿ-ನಾಲಿ ಮಾಡುತ್ತಾ ಜೀವನ ಸಾಗಿಸುತ್ತಾಳೆ. ಸಾಧ್ವಿಯೂ ಸ್ವಾಭಿಮಾನಿಯೂ ಆದ ಈಕೆ ಬ್ರಿಟಿಷ್ ಸರಕಾರ ನೀಡಿದ ಧನಸಹಾಯವನ್ನು ತಿರಸ್ಕರಿಸಿ ರಸ್ತೆ ಕೆಲಸ, ಕಲ್ಲು ಹೊಡೆಯುವ ಕೆಲಸ ಮುಂತಾದ ಕಠಿಣ ಪರಿಶ್ರಮದ ಕೆಲಸ ಮಾಡುತ್ತಾ ತನ್ನ ಬದುಕನ್ನು ಸವೆಸುತ್ತಿದ್ದ ಸಂದರ್ಭದಲ್ಲಿ ಆಕೆಯ ಬದುಕು ಮುಳಗುಲೀಯದ ಗುಂಡು ತೇಲಲೀಯದ ಬೆಂಡಿನಂತೆ ಸಾಗುತ್ತದೆ. ಒಂಟಿ ಮಹಿಳೆಗೆ ಅನೇಕ ಪುಂಡರು ಕಿರುಕುಳ ಕೊಡುವುದನ್ನು ತಪ್ಪಿಸಲು ನಿಂಗೇಗೌಡರು ಪೊನ್ನುಸ್ವಾಮಿ ಎಂಬ ಇನ್ಸ್‌ಪೆಕ್ಟರ್‌ನನ್ನು ನೇಮಿಸುತ್ತಾರೆ. ಆದರೆ ಆತ ಅತ್ಯಾಚಾರಕ್ಕೆ ಪ್ರಯತ್ನಿಸಿ ಆಕೆಯಿಂದ ಕೊಲೆಯಾಗಿ ಹೋಗುತ್ತಾನೆ. ಸತ್ಯವತಿಯಾದ ಆಕೆ ನಿಜಸ್ಥಿತಿ ತಿಳಿಸಿ ಮಗುವನ್ನು ಅಲ್ಲೇ ಬಿಟ್ಟು ಜೈಲಿಗೆ ಹೋಗುವುದರ ಮೂಲಕ ಈ ಪಾತ್ರ ಅಂತಿಮವಾಗುತ್ತದೆ.

**ನಿಜಲಿಂಗನ ಬದುಕಿನ ಚಿತ್ರಣ**

ತಾಯಿ ಅನಂತರಮ್ಮ ಜೈಲು ಸೇರಿದ ನಂತರ ಈ ಮಗುವನ್ನು ಕಳ್ಳರ ನಾಯಕ ತೆಗೆದುಕೊಂಡು ಹೋಗಿ ಸಾಕುವುದರ ಜೊತೆಗೆ ಕ್ಯಾಪ್ಟನ್ ಸಿದ್ದಲಿಂಗನ ಮೇಲಿನ ಸೇಡಿನಿಂದ ಅವನನ್ನು ಗಜದೊಂಗನನ್ನು ಮಾಡುತ್ತೇನೆ ಎಂದು ಮನದಲ್ಲಿ ನಿಶ್ಚಯಿಸಿ ಕಳ್ಳಸಮುದಾಯದ ತನ್ನ ಹಟ್ಟಿಯಲ್ಲಿ ಮಗುವನ್ನು ಬೆಳೆಸುತ್ತಾನೆ. ಈ ಹಟ್ಟಿ ಅಂದರೆ ಯಲ್ಲಾಪ್ರಾ ಎಂಬ ಹಳ್ಳಿಗೆ ತನ್ನದೇ ಆದ ಒಂದು ಭಯಂಕರ ಪೂರ್ವ ಇತಿಹಾಸವಿದೆ. ಅದೇನೆಂದರೆ ಆ ಹಳ್ಳಿಯ ಆ ಸಮುದಾಯದ ಎಲ್ಲರ ವೃತ್ತಿ ಕಳ್ಳತನ. ಬೇರೆ ಜೀವನವೇ ಅವರಿಗೆ ಗೊತ್ತಿಲ್ಲ. ಬ್ರಿಟಿಷ್ ಅಧಿಕಾರಿ ಆ ಹಳ್ಳಿಗರ ಬೆನ್ನಮೇಲೆ ಅಪರಾಧಿಗಳು ಎಂಬ ಮುದ್ರೆ ಒತ್ತಿದ್ದಾನೆ. ಸ್ವಾತಂತ್ರ್ಯ ಪೂರ್ವದಲ್ಲಿ ಆ ಹಳ್ಳಿ ಹೇಗಿತ್ತೋ ಇವತ್ತು ಹಾಗೇ ಇದೆ.

ಪ್ರಸ್ತುತ ಕಾದಂಬರಿಯಲ್ಲಿ 'ನಿಜಲಿಂಗ' ಪಾತ್ರವನ್ನು ನಿರೂಪಕರು. ಪವಾಡ ಪುರುಷನಂತೆ ಚಿತ್ರಿಸಿದ್ದಾರೆ. ನಿಜಲಿಂಗ ಆಡಿದ್ದೆ ಆಟ ಮುಟ್ಟಿದ್ದೆಲ್ಲ ಚಿನ್ನವೆನ್ನುವಂತೆ ಅವನ ಪ್ರಭಾವ ಆ ಜನಗಳಿಗೆ ಆಯಿತು.

'ಅದು ತಮ್ಮ ಪಾಲಿನ ಅದೃಷ್ಟದ ಕೂಸು ಎನ್ನುವುದಕ್ಕೆ ಪುರಾವೆಗಳು ಹಲವಿದ್ದರೂ ನಿಜಲಿಂಗನನ್ನು ಎತ್ತಿ ಇಳಿಸಿದ ವೃದ್ಧರು ಪವಾಜ್ಜ ಎಲುಗೆಜ್ಜ ತಿಂದೆಜ್ಜ ಉಮೇದಿನಿಂದ ಕಳ್ಳತನಕ್ಕೆ ಹೋಗುತ್ತಾರೆ. ಸಿರಿವಂತರ ಮನೆಗಳಿಗೆ ಕನ್ನ ಕೊರೆದರು. ಛಾವಿಯಿಂದ ತಿಜೋರಿ ಕಬ್ಬಿಣದ ಪೆಟಾರಿಗಳನ್ನು ತೆರೆದರು. ಅದು ಸಲೀಸಾಗಿ ತೆರೆಯಿತು. ಮುದುಕ ಮುದುಕಿಯರು ಅವನನ್ನು ಎತ್ತಿ ಆಡಿಸಿದ ಪರಿಣಾಮವಾಗಿ ಕಾಮವಾಂಛೆ ಕೆರಳಿ ರತಿಕ್ರೀಡಾಪಟುಗಳೆನಿಸಿದರು. ಮದುವೆ ಒಲ್ಲೆ ಎಂದು ಪಟ್ಟು ಹಿಡಿದಿದ್ದ ಹುಡುಗಿಯರು ಮದುವೆಯಾಗುವೆವು ಎಂದು

ಕೇಳತೊಡಗಿದರು. ತಾವು ಸಹ ತಾಯಂದಿರಾಗುವೆವು ಎಂದು ವಿವಾಹಿತೆಯರು ಭರವಸೆ ತಿಳಿದರು. ಎಷ್ಟೋ ಗೊಡ್ಡುಗಳು ಹಯನವಾದವು. ಸೇರುಗಟ್ಟಲೇ ಕರೆಯಲಾರಂಭಿಸಿದವು. ಇನ್ನು ತಮ್ಮ ಸಾಕು ಪ್ರಾಣಿಗಳು ತಮ್ಮನ್ನು ಹಿಂಬಾಲಿಸಿದವರಿಗೆ ತೊಂದರೆ ಕೊಡುತ್ತಿದ್ದವು. ಆದರೆ 'ನಿಜಲಿಂಗ' ಮೈಗೆ ಸೋಂಕಿದ ಗಾಳಿ ತಮ್ಮ ಮೈಗೆ ಸೋಂಕಿದೊಡೆ ಅವು ಬದಲಾದವು. ತಮ್ಮನ್ನು ಕಡಿದು ತಿನ್ನಿರಿ ಎಂದು ಅವೆ ಇವರ ಕೈಗೆ ಸಿಕ್ಕವು. ಇಂಥ ಬದಲಾವಣೆಗೆ ಕಾರಣ ನಿಜಲಿಂಗ ಎಂದು ಯಲ್ಲಾಪ್ರದ ಜನ ತ್ರಿಕರ್ಣಪೂರ್ವಕವಾಗಿ ನಂಬಿ ಆ ರೀತಿ ನಡೆದುಕೊಂಡರು'.

**ಯಲ್ಲಾಪ್ರದಲ್ಲಿ ಮತಾಂತರ ಪ್ರಕ್ರಿಯೆ**

ಈ ಸಮುದಾಯದ ಜನರು ಚರ್ಚಿನ ಸನಿಹದಲ್ಲಿ ಇದ್ದುದರಿಂದ ಇವರು ಸುಲಭವಾಗಿ ಮತಾಂತರಿಗೆ ತುತ್ತಾದರು. 'ಕಳ್ಳ ರಾಮಣ್ಣ ಮತ್ತು ಆತನ ಮುದುಕಿ ಕಿರುಸ್ಥಾನಕ್ಕೆ ಮತಾಂತರ ಗೊಂಡಿದ್ದರು. ರಾಮಣ್ಣ ಅಲೆಗ್ಜಾಂಡರ್! ಮುದುಕಿ ಹೆಲೆನ್! ತಮ್ಮ ಮೊಮ್ಮಗ ಪಿಲಿಸ್! ಹಟ್ಟಿಯ ಹಲವರು ಸಹ ತಮ್ಮಂತೆ ಕಿರಿಸ್ತಾನರ ಧರ್ಮ ಸೇರಿರಬಹುದು. ಹೆಸರು ಬದಲಾಯಿಸಿಕೊಂಡಿರ ಬಹುದು! ಈ ಅಂಗ್ರೇಜಿಯ ಗೋಪ್ಯ ಹೆಸರು ಎಷ್ಟೋ ಜನರಿಗೆ ತಿಳಿದಿರುವವೊ! ಯಲ್ಲಾಪ್ರಾ ಸೇರಿದಂತೆ ಯಾಲ್ಪಿ, ಕಗಲ್ ಸಿರವಾರ, ಬಲಕುಂದಿ ಬಡೆಲಡುಕುಗಳಲ್ಲಿನ ಆದಿವಾಸಿ ಬುಡಕಟ್ಟು ಸಮುದಾಯಗಳಲ್ಲಿ ಹಲವಾರು ಜನ ಮತಾಂತರವಾಗಿದ್ದಾರೆ.[೧೭] ಅಲ್ಲಿಗ ಪಾದ್ರಿ ಹೇಳುವಂತೆ ಇನ್ನು ಮೇಲೆ ನೀನೆಲ್ಲ ಏಸುವಿನ ಮಕ್ಕಳು ನಮ್ಮ ಮೇರಿಯಮ್ಮ ನಿಮ್ಮ ತುಳುಜಾ ಭವಾನಿಗಿಂತ ಸರ್ವಶಕ್ತಳು ಎಂದು ನಂಬಿಸಲು ಪ್ರಯತ್ನಿಸಿದ್ದರು."[೧೮]

ಇಂತಹ ಅದೆಷ್ಟೋ ವಿಚಾರಗಳು ಸ್ವಾತಂತ್ರ್ಯಪೂರ್ವದಲ್ಲಿ ಹೇಗೆ ಬುಡಕಟ್ಟು ಜನರನ್ನು ಶೋಷಿತರನ್ನಾಗಿ ಮಾಡುತ್ತಾ ತಮ್ಮ ಧರ್ಮ ಪ್ರಚಾರ ನಡೆಸಿದ್ದರು ಎನ್ನುವುದನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

**ನಿಜಲಿಂಗನ ಚೋರಕಲೆಯ ಅದ್ಭುತ ರಮ್ಯ ಕಥೆಗಳು**

ತ್ರಿಕಾಲಜ್ಞಾನಿ ಎಂದೇ ಕರೆಸಿಕೊಳ್ಳುವ ತಿರುಮಲ ಆಲಿಯಾಸ್ ಬ್ಲೇಡ್ ರಾಜನಿಗೆ ಸಂತೆ ಪರಿಶೆಗಳು ಚಿರಪರಿಚಿತವಾಗಿದ್ದವು. ಯಾವ್ಯಾವ ಥಿಯಾಟ್ಟರಿನಲ್ಲಿ ಯಾವ್ಯಾವ ಸಿನಿಮಾ ಇದೆ, ಎಲ್ಲಿ ಅಭಿಮಾನಿಗಳ ಸಂಖ್ಯೆ ಜಾಸ್ತಿ ಇರುವುದು ಎನ್ನುವುದಲ್ಲಿ ಅವನು ನಿಪುಣನಾಗಿದ್ದ. ಹದಿಹರೆಯದ ನಿಜಲಿಂಗ ಅವನ ಸಾನಿಧ್ಯ ಮಾತ್ರದಿಂದಲೇ ಅವನ ಬ್ಲೇಡಿನ ಅಭಿಮಾನಿಯಾಗಿದ್ದ. ಬ್ಲೇಡ್‌ರಾಜ ಒಂದೇ ಸುತ್ತಿನಲ್ಲಿ ಹನ್ನೆರಡು ಜನ ಅಭಿಮಾನಿಗಳ ಜೇಬು ಕತ್ತರಿಸಿದ. ಅವುಗಳಲ್ಲಿ ದಫೇದಾರ್ ಜಿಂದಾವಲಿಯ ಪರ್ಸು ಸಹ ಇತ್ತು. ಏನನ್ನಿಸಿತೇನೊ ಮತ್ತೆ ಅವನ ಮನೆಗೆ ಹೋಗಿ ಪರ್ಸನ್ನು ಕಿಟಕಿಯಲ್ಲಿ ಬಿಸಾಕಿ ಬಂದಿದ್ದ. ಎಷ್ಟೋ ಪೋಲೀಸರಿಗೆ ಅವರ ಕಷ್ಟ

ತಿಳಿದು ಸಹಾಯ ಮಾಡುವ ಗುಣ ಈ ತಿರುಮಲನಿಗೆ ಇದ್ದದು ವಿಶೇಷವಾಗಿತ್ತು. ಇಂಥ ಗುರು ಒಂದೇ ದಿನ ಜಾತ್ರೆಯಲ್ಲಿ ನೂರು ಪರ್ಸ್ ಕದ್ದು, ಸಂತ ಮಹಿಳೆಯ ಸರಗಳನ್ನು ಕದ್ದು ಜೈಲಿಗೆ ಹೋಗಿ ಬಂದಾಗ ಅವನ ಹತ್ತಿರ ಹಣವಿರಲಿಲ್ಲ. ಆಗ ನಿಜಲಿಂಗ ಈ ವೃತ್ತಿಗೆ ಕೈ ಹಾಕಿದ. ಅವನಂತೆ ಇವನೂ ಸಹ ಜೇಬು ಕತ್ತರಿಸಲು ಶುರುಮಾಡಿದ. 'ನಿನ್ನವಸ್ತೇನ ನೋಡ್ಲಿಕ್ಕಾಗದೇ ಬ್ಲೇಡನ್ನು ಕೈಗೆತ್ತಿಕೊಂಡೆ ಕಣಣ್ಣಾ ತಪ್ಪಾಗಿದ್ರೆ ಹೊಟ್ಟೇಲಿ ಹಾಕಿಕೊಂಡುಬಿಡು."

"ಪ್ರಧಾನಿ ಜೇಬಿಗೆ ಕತ್ತರಿ ಹಾಕಿದ್ದು" ಪ್ರೌಢಾವಸ್ಥೆಯಲ್ಲಿಯೇ. ಇವರ ಜೇಬಿಗೆ ಕತ್ತರಿ ಹಾಕಿ ಪರ್ಸು ಅಪಹರಿಸಿದು. ಪ್ರಧಾನಿ ಲದ್ದಾಗೆ ಚಿಂತೆಯಾಗಿದ್ದು, ಅದರಲ್ಲಿ ವಿರೋಧಪಕ್ಷದ ನಾಯಕ ದಿಲ್ದಾರ್ ಸಿಂಗ್‌ರ ಧರ್ಮಪತ್ನಿಯ ಭಾವಚಿತ್ರವನ್ನು ತಾವು ಪರ್ಸ್‌ನಲ್ಲಿ ಇಟ್ಟುಕೊಂಡಿದ್ದು ಅದು ಕಳುವಾಗಿದೆ. ಅಕಸ್ಮಾತ್ತದು ಮಾಧ್ಯಮದವರ ಕೈಗೆ ಸಿಕ್ಕರೆ ಹೇಗೆ ಎಂದು ತಿಳಿದು ಅವರು ದೇಶದಲ್ಲೆ ಕಿಸೆಗಳ್ಳರ ಮೂಲೋಚ್ಚಾಟನೆ ಮಾಡಲು ಕರೆ ಕೊಡುತ್ತಾರೆ. ಇದರ ನಿಮಿತ್ತ ಅನೇಕ ಕಾರ್ಯಕ್ರಮ ಹಾಕಿಕೊಳ್ಳುತ್ತಾರೆ. "ಪೋಲೀಸರು ಮತ್ತು ಜೇಬುಗಳ್ಳರು" ಎಂಬ ವಿಚಾರ ಸಂಕಿರಣ ಏರ್ಪಡಿಸುತ್ತಾರೆ. ಈ ಸಂದರ್ಭದಲ್ಲಿ ಎಸ್ಪಿ ದುರ್ಭಿಕ್ಷಮೂರ್ತಿ ಐ.ಪಿ.ಎಸ್. ಇವರು ಹೇಳುತ್ತಾರೆ. ಉದಯೋನ್ಮುಖ ಕಿಶೋರ ಪ್ರತಿಭಾವಂತ ಕಿಸೆ ಕಳ್ಳರನ್ನು ಪತ್ತೆ ಹಚ್ಚುವುದು ಬಹಳ ಕಷ್ಟದ ಕೆಲಸ ಎಂದು ಹೇಳುತ್ತಾರೆ.

ಡಾ. ದುರ್ಭಿಕ್ಷಮೂರ್ತಿ ಕಳ್ಳತನದ ಎಲ್ಲಾ ಫ್ಯಾಕಲ್ಟಿಗಳನ್ನು ಕೂಲಂಕಷ ಅಧ್ಯಯನ ಮಾಡಿದ್ದರು. ಹೆಸರಾಂತ ಕಳ್ಳರೊಡನೆ ಒಡನಾಡಿದ್ದರು ಎಂದು ಲೇಖಕರು ಅಭಿಪ್ರಾಯಪಡುತ್ತಾರೆ. ಅರಿಭಯಂಕರ ರಾಮುಡನ ಪರ್ಸನ್ನು ಲಪ್ಟಾಯಿಸಿದ ಬಳಿಕ ನಿಜಲಿಂಗ ಹೀರೋ ಆಗಿದ್ದು. ಫ್ರಿನ್ಸು, ರೇನ್‌ಬೋ, ಸೆವೆನ್ ಓ ಕ್ಲಾಕ್ ಇವುಗಳ ಜೊತೆಗೆ ಅತ್ಯುತ್ಕೃಷ್ಟ ರೇಡಿಯಂ ಬ್ಲೇಡ್‌ಗಳನ್ನು ಹೇಗೆ ಉಪಯೋಗಿಸಬೇಕು ಎನ್ನು ಜ್ಞಾನ ಆತನ ಅಘಾಥವಾಗಿತ್ತು. ಲೇಖಕರು ವಿಶೇಷವಾಗಿ ಹೇಳುವಂತೆ 'ನಿಜಲಿಂಗ' ಡಾ. ದುರ್ಭಿಕ್ಷಮೂರ್ತಿ ಅವರ ಸಂಶೋಧನೆ ಪ್ರಬಂಧವಾದ 'ಕಿಸೆಗಳ್ಳತನ ಒಂದು ಅಧ್ಯಯನ' ಎಂಬ ಪುಸ್ತಕವನ್ನು ಅಂಕಿತ ಪುಸ್ತಕ ಮಳಿಗೆಯಿಂದ ತೆಗೆದುಕೊಂಡು ಓದಿದ್ದನಂತೆ.

**ತಮಾಶ ಕಲಾವಿದನಾಗಿ ರೂಪಾಂತರ:** ನಿಜಲಿಂಗ ಅಭಿಜಾತ ಪ್ರತಿಭಾವಂತನಾಗಿದ್ದ. ತನ್ನ ತಾಯಿಯಿಂದ ಅವನಿಗೆ ಹಾಡುವುದು ಹಾಗೂ ತಂದೆಯಿಂದ ಚಿತ್ರಕಲೆ ಅವನಿಗೆ ಹುಟ್ಟಿನಿಂದಲೇ ಬಂದಿತ್ತು. ಅಕಸ್ಮಾತ್ತಾಗಿ ನಿಜಲಿಂಗನು ಪೆನ್ಸಿಲ್‌ನಿಂದ ತಮಾಶಾ ಕಲಾವಿದೆಯಾದ ಶ್ರೀಮತಿ ಚೌಗಲೇ ಚಿತ್ರವನ್ನು ಬರೆದು ತೋರಿಸಿದ. ಇದರಿಂದ ಆಕರ್ಷಿತಳಾದ ಆಕೆ ಆತನನ್ನು ತನ್ನ ಜೊತೆ ಕರೆದುಕೊಂಡು ಹೋದಳು. ಎಷ್ಟೋ ದಿನಗಳ ಕಾಲ ನಿಜಲಿಂಗ ತಮಾಶಾ ತಂಡದಲ್ಲಿ ಮರಾಠಿ ಪ್ರದೇಶದಲ್ಲಿ ಸೇರಿಕೊಂಡಿದ್ದನು.

ನಿಜಲಿಂಗ ಚಿತ್ರತಂಡಕ್ಕೆ ಚೋರಕಲೆಯನ್ನು ಕಲಿಸಿದ್ದು, ಸಿನಿಮಾ ತೆಗೆಯಲು ಅನುಕೂಲವಾಗುವಂತೆ ನಾನಾ ರೀತಿಯ ಚೋರಕಲೆಗಳನ್ನು ಆ ತಂಡದ ನಾಯಕನಿಗೆ ಕಲಿಸಿದ್ದು, ನಿಜಲಿಂಗನ ಬಾಯಲ್ಲಿ ನಿರೂಪಕರು ಹೇಳಿಸುವ ಮಾತು, ಕ್ರೀಡಾಪಟುಗಳಿಗೆ ಇರುವ ಎಲ್ಲಾ ಲಕ್ಷಣಗಳು ಕಳ್ಳನಾಗುವವನಿಗೆ ಇರಬೇಕು. ಓಡುವುದು, ನೆಗೆಯುವುದು, ಮುಳ್ಳುಕಂತೆಗಳಲ್ಲಿ ಬರಿಗಾಲಲ್ಲಿ ವೇಗವಾಗಿ ನಡೆಯುವುದು ಮುಖ್ಯ. ಕಳ್ಳರೇ ಹೇಳುವಂತೆ 'ಡಾಕುಟ್ರು ಕಲೆಕಟ್ಟರು. ದೊಡ್ಡಾಫಿಸರ್ರು ಇವೆಲ್ಲ ಆಗಬೌದು ಆದ್ರೆ ಕಳ್ಳನಾಗುವುದು ತುಂಬಾ ಕಷ್ಟ.[೧೯]

'ನಿಜಲಿಂಗ' ಕಾದಂಬರಿಯ ಬಹು ಭಾಗವನ್ನು ನಿರೂಪಕರು ನಾನಾ ರೀತಿಯ ಕಳ್ಳತನಗಳ ವರ್ಣನೆಗೆ ಮೀಸಲಿಟ್ಟಿದ್ದಾರೆ. ಕಳ್ಳರ ಕೈಚಳಕ, ಅವರ ಮಾನವೀಯತೆ, ಕಳ್ಳರ ದಡ್ಡತನ, ಜಾಣತನ ಮತ್ತು ಅವರ ಭಂಡತನ ಎಲ್ಲವನ್ನು ಅತ್ಯಂತ ನೈಜವಾಗಿ ಕಳ್ಳರ ಮನೋಸ್ಥಿತಿಯನ್ನು ಚಿತ್ರಿಸಿದ್ದಾರೆ. ಅಂತಹ ಒಂದು ಸ್ವಾರಸ್ಯಕರ ಘಟನೆ ಇಲ್ಲಿದೆ. 'ಭೋಜನಾಯಕ ತನ್ನ ಸಂಗಡಿಗರೊಂದಿಗೆ ಕಳ್ಳತನಕ್ಕೆಂದು ಆಂಧ್ರ ಸೀಮೆಗೆ ಹೋಗಿದ್ದ. ಕಲ್ಯಾಣದುರ್ಗದಲ್ಲಿ ಮನ್ರೋ ಧರ್ಮಛತ್ರದಲ್ಲಿ ವಸ್ತಿ ಮಾಡಿದ್ದ. ಅದೇ ಛತ್ರದಲ್ಲಿ ಉರುಕುಂದಿ ಸಹ ಉಳಿದಿದ್ದ. ಅವರಿಬ್ಬರೂ ಮುಖಾಮುಖಿಯಾದರು. ಮಾತಿನ ಚಕಮಕಿ ನಡೆಸಿದರು. ಕಾರಣ ಉರುಕುಂದಿ ಸಹ ಕಳ್ಳವೃತ್ತಿಯಿಂದ ಜೀವನ ನಡೆಸುತ್ತಿದ್ದ. ಆಯಾ ರಾಜ್ಯದ ಕಳ್ಳರು ಆಯಾ ರಾಜ್ಯಗಳಲ್ಲಿ ಕಳ್ಳತನ ಮಾಡಿಕೊಳ್ಳಬೇಕೆನ್ನುವುದು ಅಲಿಖಿತ ನಿಯಮ. ಈ ನಿಯಮ ಉಲ್ಲಂಘಿಸಿ ಭೋಜನಾಯಕ ಒಂದು ಮನೆಗೆ ನುಗ್ಗಿ ಕಳ್ಳತನ ಮಾಡಿದ. ಉರುಕುಂದಿ ಬೇಡವೆಂದರೂ ಕೇಳದಾದಾಗ ನಿನ್ನನ್ನು ಶಾಂಭವಿ ನೋಡಿಕೊಳ್ಳುತ್ತಾಳೆ ಎಂದು ಹೇಳಿದ. ಅದರಂತೆ ಅವರು ಕಳ್ಳತನ ಮಾಡುವಾಗಿ ಇದ್ದಕ್ಕಿದ್ದಂತೆ ವಿದ್ಯುತ್ ದೀಪಗಳು ಹತ್ತಿಕೊಳ್ಳುತ್ತವೆ. ಪೊಲೀಸರು ಆಗಮಿಸುತ್ತಾರೆ. ಅಷ್ಟರಲ್ಲಿ ನಾಯಕ ಚಿನ್ನದ ವೆಂಕಟೇಶ್ವರ ಸ್ವಾಮಿಯ ಮೂರ್ತಿಯನ್ನು ಸೊಂಟಕ್ಕೆ ಸಿಕ್ಕಿಸಿಕೊಂಡು ದೇವರ ಕೋಣೆಯಲ್ಲಿ ತೊಲೆ ನಗಾದಿಗೆ ಹಲ್ಲಿಯಂತೆ ಅಂಟಿಕೊಂಡಿರುತ್ತಾನೆ. ಇನ್ನೊಬ್ಬ ಸಹಾಯಕ ಜಲಸ್ತಂಭನ ವಿದ್ಯೆಯ ನೆರವಿನಿಂದ ನೀರಿನ ಹಂಡೆಯಲ್ಲಿ ಅಡಗಿದ್ದ. ಮತ್ತೋರ್ವ ವಶೀಕರಣ ವಿದ್ಯೆ ನೆರವಿನಿಂದ ಪ್ಯಾದೆಯನ್ನು ವಿವಸ್ತ್ರಗೊಳಿಸಿ ಆ ಸಮವಸ್ತ್ರವನ್ನು ತಾನು ಧರಿಸಿ ಆಳುಕಾಳು ಮಂದಿಯಿಂದ ಸಾರು ಸಾರು ಎಂದು ಸಂಬೋಧಿಸಿಕೊಳ್ಳುತ್ತಿದ್ದ.

ಆದರೆ ಕಳ್ಳರು ಎಷ್ಟೇ ಬುದ್ಧಿವಂತರಿದ್ದರು ಕಳ್ಳರೆ! ಉಗ್ರಾಣದ ಕೋಣೆಯಲ್ಲಿನ ದವಸದ ಕೆಳಗೆ ಅಡಗಿದ್ದ ಕಳ್ಳ ಕೆಮ್ಮಿ ಸಿಕ್ಕಿದನು. ಒದೆ ತಿಂದ ನಂತರ ಅಗೋ ಅಲ್ಲಿ ಇಗೋ ಇಲ್ಲಿ ಎಂದು ತೋರಿಸಿ ವೃತ್ತಿಧರ್ಮಕ್ಕೆ ದ್ರೋಹ ಬಗೆದ ಕಳ್ಳರನ್ನು ಹಿಡಿದು ಅಟವಾಳಿಗೆಯಲ್ಲಿದ್ದ ಕಂಬಗಳಿಗೆ ಕಟ್ಟಿದರು. ಶಿಕ್ಷಿಸಿದವರು ಸುಸ್ತಾದರೆ ವಿನಾ ಶಿಕ್ಷಿಸಿಕೊಂಡವರು ಸುಸ್ತಾಗಲಿಲ್ಲ.

ಅವರನ್ನು ಎಸ್ಸೈ ಸಾಹೇಬ ನೋಡಿ ಮಸ್ರೋ ನಮ್ಮ ಎಮ್ಮೆಲ್ಲೆ ಸಾಹೇಬರ ಮನೆಗೆ ಕನ್ನ ಹಾಕಿರುವಿರಿರಲ್ಲೊ"[೨೦] ಎಂದು ಉದ್ಗರಿಸಿದ. ಜೊತೆಗಾರರಿಂದ ಮೋಸಕ್ಕೆ ಒಳಗಾದ ನಿಜಲಿಂಗ. ಅವನನ್ನು ಆತನ ಸ್ನೇಹಿತರು ಮತ್ತು ಬರುವ ಚೌಪದಿ ಕುಡಿಸಿ ರೈಲಿನಲ್ಲಿ ಮಲಗಿಸಿರುತ್ತಾರೆ. ನಂತರ ಅವನಿಗೆ ಎಚ್ಚರವಾದಾಗ ಕರ್ಮೇಶ್ವರ ಸ್ವಾಮಿಯ ದೇವಸ್ಥಾನದ ಹತ್ತಿರವಿರುತ್ತಾನೆ. ಆತನಲ್ಲಿನ ಕಿಸೆಗಳ್ಳ ಕ್ರಿಯಾಶೀಲವಾದ. ಕೆಲವು ಕ್ಷಣಗಳಲ್ಲಿ ಫಲಾನುಭವಿಗಳು ಕೂಗಿಕೊಂಡರು. ನಿಜಲಿಂಗನೇ ಕಿಸೆಗಳ್ಳರನ್ನು ಹುಡುಕುವ ನೆಪದಲ್ಲಿ ಅವರಿಂದ ಅನುಕಂಪ ಪಡೆದುಕೊಂಡ. ಕಳೆದುಕೊಂಡವರಿಗೆ ತನ್ನ ಸ್ವಂತ ಖರ್ಚಿನಲ್ಲಿ ಹಸಿವೆ ತೀರಿಸಿದ. ಇನ್ನೂ ಕೆಲವರಿಗೆ ಊರಿಗೆ ಹೋಗಲು ಟಿಕೇಟು ತೆಗೆಸಿದ. ದೇವರ ಹುಂಡಿಯಿಂದ ಹಣ ಕದ್ದು ಅದೇ ದೇವರಿಗೆ ಅಭಿಷೇಕ ಅರ್ಚನೆಗಳನ್ನು ಮಾಡಿಸಿದ. ಆದ್ದರಿಂದ ಪ್ರಸನ್ನರಾದ ಪ್ರಧಾನ ಅರ್ಚಕರಾದ ವೇದಾಂತಿ ದೇಶಿಕಾಚಾರ್ಯರು ಆತನಿಗೆ ಆಸ್ತಿಕ ಶಿರೋಮಣಿ ಎಂಬ ಬಿರುದು ನೀಡಿ ಗೌರವಿಸಿದರು. ಇದು ಸಮಾಜ ವಿಡಂಬನೆಗೆ ಅತ್ಯಂತ ನೈಜ ದೃಷ್ಟಾಂತವಾಗಿದೆ. ಕಸಾಪುರ ಕ್ಷೇತ್ರದಲ್ಲಿ ಈತನನ್ನು ಮುಟ್ಟಲು ಹೆಣ್ಣುಮಕ್ಕಳು ಕಾತರರಾಗಿದ್ದರು. ಆ ಪ್ರಾಂತದ ಭೌಗೋಳಿಕ ಲಕ್ಷಣವೆಂದರೆ ಬೊಜ್ಜು ಪ್ರತಿ ಮನೆಯಲ್ಲೂ ಜನಪ್ರಿಯವಾಗಿತು. ಅಲ್ಲಿ ಎಲ್ಲರೂ ಮಟಕಾ ಆಡುತ್ತಿದ್ದರು. ಇಲ್ಲಿ ನಿಜಲಿಂಗ ಪ್ರಸಿದ್ಧಿ ಹೊಂದಿದ ಸ್ವಾಮಿಯಾಗಿದ್ದ. ಜನರು ಆತನಿಗೆ ಮಟಕಾ ನಂಬರು ಕೇಳಲು ಹಾತೊರೆಯುತ್ತಿದ್ದರು. ನಿಜಲಿಂಗನೋ ಮಟಕಾ ನಂಬರನ್ನು ಮೈಲಾರಲಿಂಗನ ಕಾರಣಿಕದಂತೆ ಹೇಳಿಬಿಡುತಿದ್ದ. 'ಮೂರು ಆರಾದೀತ ಆರು ಮೂರಾದಿತಲೇ ಪರಾಕು ಎಂದು ಹೇಳಿಬಿಡುತ್ತಿದ್ದ.'

ಮತ್ತೊಂದು ಚೋರ ಘಟನೆಯು ಒಂದು ರೀತಿಯ ಸ್ವಾರಸ್ಯಕರ ಘಟನೆಯಾಗಿವೆ. ಸನ್ಮಾನ್ಯ ಮುಖ್ಯಮಂತ್ರಿ ಏಕಾಂಬರ್ ಚೌರಾಸ್ತ್ ರಾಮಗಿರಿಯಲ್ಲಿ ಗ್ರಾಮವಾಸ್ತವ್ಯ ಮಾಡುವವೆಂದು ವಿಧಾನಸಭೆಯಲ್ಲಿ ಘೋಷಿಸಿದ್ದು ಆರು ದಿವಸಗಳ ಹಿಂದೆ ಅದು ಜೇಬುಗಳ್ಳನ ಮನೆಯಲ್ಲಿ! ಕಿಸೆಗಳ್ಳತನ ವೃತ್ತಿಯನ್ನು ಅವಲಂಬಿಸಿದ ಐದಾರು ಕುಟುಂಬಗಳಿದ್ದವು. ಇನ್ನುಳಿದ ಕುಟುಂಬಗಳು ಕಳ್ಳತನದ ಇನ್ನಿತರ ವಿಭಾಗಗಳನ್ನು ಶ್ರೀಮಂತಗೊಳಿಸಿದ್ದವು. ಆದರೆ ಆ ಊರಲ್ಲಿ ರುಕ್ಕೋಜಿ ಹಂಸಪಕ್ಷಿಯಂತೆ ಶೋಭಿಸುತ್ತಿದ್ದ. ವಿರೋಧಪಕ್ಷದ ಸದಸ್ಯರು ಸಿ.ಎಂ. ಹೇಳಿಕೆಯಿಂದ ಕೆರಳಿದರು. ರೈತರ ಕೃಷಿಕಾರ್ಮಿಕರ ಮನೆಯಲ್ಲಿ ವಾಸ್ತವ್ಯ ಹೂಡುವುದು ಬಿಟ್ಟು ಯಃಕಶ್ಚಿತ್ ಜೇಬುಗಳ್ಳನ ಮನೆಯಲ್ಲಿ? ಅದಕ್ಕೆ ಸಿ.ಎಂ. ಸಾಹೇಬರು ವಿರೋಧಪಕ್ಷದ ನಾಯಕನನ್ನುದ್ದೇಶಿಸಿ 'ರೀ ಜಂತಾನ್ ಕಳ್ಳತನ ಕನಿಷ್ಟವೆಂದು ಭಾವಿಸಬೇಡಿ. ಅರವತ್ನಾಲ್ಕು ವಿದ್ಯೆಗಳಲ್ಲಿ ಅದೂ ಒಂದು. ಜೇಬುಗಳ್ಳರನ್ನು ಅಂಡರೆಸ್ಟಿಮೇಟ್ ಮಾಡಬೇಡಿ. ಅವರಿಗಿರುವ ಜಾಣ್ಮೆ ಕೌಶಲ್ಯ ನಮ್ಮ ಐ.ಎ.ಎಸ್. ಆಫೀಸರ್‌ಗಳಿಗೂ ಇಲ್ಲ. ನಾನವರ ಮನೆಯಲ್ಲಿ ವಾಸ್ತವ್ಯ ಮಾಡುತ್ತಿರುವ ಘನ

ಉದ್ದೇಶ ಅವರನ್ನು ಪ್ರಧಾನಮಂತ್ರಿಗೆ ತರುವುದಾಗಿದೆ ಕಣ್ರಿ"[೨೧] ಎಂದು ಹೇಳಿದೊಡನೆ ಎಲ್ಲಾ ಸದಸ್ಯರು ಕಿವಿಗಡಚಿಕ್ಕುವಂತೆ ಕರತಾಡನ ಮಾಡಿದರು.

ಈ ಭಾಗದಲ್ಲಿ ನಾಯಕ ನಿಜಲಿಂಗನಿಗೆ ಸೀಝುರ್ ಎನ್ನುವ ಕಳ್ಳ ಒಂದು ಸವಾಲಾಕುತ್ತಾನೆ. ಅದೇನೆಂದರೆ ಮುಖ್ಯಮಂತ್ರಿಗಳ ಕೈಯಲ್ಲಿರುವ ವಜ್ರದುಂಗುರ ಕದಿಯುವ ಸವಾಲು. ಆದರೆ ಕೆಲವರು ಇದನ್ನು ತಿರಸ್ಕರಿಸುತ್ತಾರೆ. ಆದರೆ ಜಗದ್ವಿಖ್ಯಾತನಾದ ನಿಜಲಿಂಗ ಈ ಕಾರ್ಯವನ್ನು ಮಾಡುತ್ತಾನೆ. ಅದು ಸುಂದರವಾದ ಸ್ತ್ರೀ ರೂಪಧರಿಸಿ ಸೌಂದರ್ಯ ಎನ್ನುವ ಹೆಣ್ಣಿನ ರೂಪ ದಲ್ಲಿ ಮುಖ್ಯಮಂತ್ರಿ ಸನಿಹಕ್ಕೆ ಹೋಗಿ ಅವರನ್ನು ಮತ್ತು ಅವರ ಸುತ್ತಲೂ ಇದ್ದ ಅಧಿಕಾರಿಗಳನ್ನು ಮರುಳುಮಾಡಿ ಆ ವಜ್ರದುಂಗುರವನ್ನು ಕದ್ದು ನಂತರ ಎಲ್ಲರೂ ಆಶ್ಚರ್ಯ ಪಡುವಂತೆ ವಾಪಾಸು ಮಾಡುತ್ತಾನೆ. ಹೀಗೆ ಚೋರಕಲೆಯನ್ನು ಪ್ರಸ್ತುತ ಕಾದಂಬರಿಯು ಸ್ವಾರಸ್ಯ ಪೂರ್ಣವಾಗಿ ವಿವರಿಸಿ ಓದುಗರನ್ನು ರಂಜಿಸುತ್ತದೆ.

ನಿಜಲಿಂಗನ ಪಾತ್ರಚಿತ್ರಣ ಕೊಡುತ್ತಾ ನಿರೂಪಕರು ತಾವು ಸಾಮಾನ್ಯ ಕಥೆಗಾರರಲ್ಲ ಎನ್ನುವುದನ್ನು ಕಥೆಯೊಳಗಿನ ನಿರೂಪಕರ ಬಾಯಲ್ಲಿ ತಮ್ಮ ಸ್ವಭಾವವನ್ನು ತಿಳಿಸುವುದು. 'ಕೇವಲ ದಂಡಪಾಣಿಯಲ್ಲ, ಕೋದಂಡಪಾಣಿ, ಕೇವಲ ಚಕ್ರಪಾಣಿಯಲ್ಲ, ವಿಷ್ಣು ಚಕ್ರಪಾಣಿ, ಕೇವಲ ಶೂಲಪಾಣಿಯಲ್ಲ. ಫ್ರಶೂಲಪಾಣಿ! ಈ ಮುವ್ವರು ನಿಸ್ಸಂದೇಹವಾಗಿ ಅಭಿಜಾತ ಪ್ರತಿಭಾವಂತರು. ಗ್ರಹಿಸುವುದರಲ್ಲಿ ಅನುಭವಗಳನ್ನು ಅರಗಿಸಿಕೊಳ್ಳುವುದರಲ್ಲಿ, ಅರಗಿಸಿಕೊಂಡ ಅನುಭವಕ್ಕೆ ಕಥೆಯಾಕಾರ ಕೊಡುವುದರಲ್ಲಿ ಅವರು ಅದ್ವಿತೀಯರು. ಈ ಮುವ್ವರ ಕಥೆಗಳಿದಾಂಚೆ ನಿಜಲಿಂಗ ಯಾವ ರೀತಿ ಬಾಳಿ ಬದುಕಿದ? ತಮಾಷಾ ಕಲಾವಿದರ ತಂಡದ ಸಂಗಡ ಅಲೆಯುತ್ತಾ ಬೆಳೆದು ದೊಡ್ಡವನಾದನೆ? ಶೆಟ್ಟಿಯ ಮನೆಯಲ್ಲಿದ್ದು ಬೆಳೆದು ದೊಡ್ಡವನಾದನೆ? ಪಕೋಡಿಯಾ ಮನೆಯಲ್ಲಿದ್ದು ಬೆಳೆದು ದೊಡ್ಡವನಾದನೆ ಅಥವಾ ಮೇಲ್ಕಾಣಿಸಿದ ಮುವ್ವರ ವಿನಾ ನಾಲ್ಕನೇ ವ್ಯಕ್ತಿ ಏನಾದರೂ ಆತನ ಅಪೂರ್ಣ ಕಥೆಯನ್ನು ಸೃಜನಶೀಲವಾಗಿ ಮುಂದುವರಿಸಿದನೇ? ಇವೆಲ್ಲವು ಇಂದಿಗೂ ನಿಗೂಢವೇ. ಹೀಗೆ ನಿರೂಪಕರು ನಿಜಲಿಂಗ ಕಥೆ ತಮ್ಮೊಳಗೆ ಹೇಗೆ ಮಂಥನವಾಗಿ ನಿಜಲಿಂಗವೆಂಬ ಕಥೆಯಾಗಿ ಮೂಡಿತು, ತಾವು ಎಂಥ ಅದ್ಭುತಗಾರ ಎನ್ನುವುದನ್ನು ಸೂಚಿಸುತ್ತಾರೆ.

**ನಿಜಲಿಂಗ ಮತ್ತು ಕನ್ನಡಿ ಸಂಬಂಧ**

ನಿಜಲಿಂಗನಿಗೆ ತನ್ನ ಸುತ್ತ ನಡೆಯುವ ವಿದ್ಯಮಾನ ಮತ್ತು ತಾನು ಅವುಗಳ ಒಳಗೆ ಬಂಧಿಯಾಗುವ ಪರಿ ಇದರಿಂದ ಅವನ ಮನಸ್ಸಿಗೆ ಬೇಸರವಾಗಿತ್ತು. "ತನ್ನನ್ನು ದಂಡಿಸದ ಎಸ್ಸೈ ಬಗ್ಗೆ, ಶಿಕ್ಷೆ ವಿಧಿಸದ ನ್ಯಾಯಾಧೀಶರ ಬಗ್ಗೆ ತನ್ನಲ್ಲಿ ತಿರಸ್ಕಾರ ಮೂಡಿತು. ತನ್ನ ರೂಪ

ತನಗೆ ತಿಳಿಯದು. ತನ್ನನ್ನು ತಾನು ತಿಳಿದಲ್ಲಿ ಎಸ್ಸೈ ಥರದ ಅಧಿಕಾರಿಗಳು, ಜಡ್ಜ್ ನ್ಯಾಯ ವಿತರಕರು. ಅರ್ಥವಾಗುವವರು, ಹೆಜ್ಜೆ ಹೆಜ್ಜೆಗೆ ಕರಗುತ್ತಿರುವ ಸಂಬಂಧಗಳು ಅರ್ಥವಾಗುವುವು. ಅದಕ್ಕೆ ತುರ್ತಾಗಿ ತನ್ನನ್ನು ತಾನು ನೋಡಿಕೊಳ್ಳಲು ಕನ್ನಡಿಯ ಅಗತ್ಯವಿರುವುದು. ಎಂಥ ವಿಚಿತ್ರ ನನಗೆ ಕನ್ನಡಿಗಳ ಪರಿಚಯವೇ ಇಲ್ಲ. ಅದರಲ್ಲಿ ತಾನು ಇದುವರೆಗೂ ನೋಡಿಕೊಂಡಿಲ್ಲ. ಇನ್ನು ಮುಂದೆ ತಾನು ಯಾರಿಂದ ಕನ್ನಡಿಗಳ ಅಂಗಡಿಯನ್ನು ಪ್ರವೇಶಿಸಬೇಕು. ತಾನು ಕನ್ನಡಿಗರಲ್ಲಿ ಏಕಕಾಲಕ್ಕೆ ಕಾಣಿಸಿಕೊಳ್ಳಬೇಕು. ಎಸ್ಸೈ ರಾಠೋಡ್ ಹಿತವಾದವನ್ನು ಧಿಕ್ಕರಿಸಿ ಅಲ್ಲಿನ ಪುಟ್ಟ ಕನ್ನಡಿಯನ್ನು ಕದಿಯಬೇಕು' ಕನ್ನಡಿಯನ್ನು ನೋಡಿಕೊಳ್ಳುವುದು ಸ್ವಸಂತೋಷಕ್ಕೆ, ತಮ್ಮಲ್ಲಿ ಆತ್ಮವಿಶ್ವಾಸ ಹೆಚ್ಚಿಸಿಕೊಳ್ಳುವುದಕ್ಕೆ. ವಾಗ್ವಾದದಿಂದ ತಿಳಿದ ಸಂಗತಿ ಎಂದರೆ ಯಲ್ಲಾ ಹಟ್ಟಿಯ ಯಾರ ಮನೆಯಲ್ಲೂ ಕನ್ನಡಿ ಇರಲಿಲ್ಲ. ಅಲ್ಲದೆ ಅಲ್ಲಿನ ಯಾರೂ ಕನ್ನಡಿಯಲ್ಲಿ ತಮ್ಮ ಪ್ರತಿಬಿಂಬಗಳನ್ನು ನೋಡಿಕೊಳ್ಳುತ್ತಿರಲಿಲ್ಲ. ಪಾಂಡುವಿನ ತಲೆಯಲ್ಲಿ ಅನುಮಾನ ಪ್ರವೇಶಿಸಿತು. "ಕಳ್ಳತನವನ್ನು ಕಾರಣಿಕ ಮಾತುಗಳಿಂದ ಪ್ರೋತ್ಸಾಹಿಸುವ ಬಂಡೋಬನಾಗಲಿ, ಆತನ ಸಂತಾನವಾಗಲಿ ಕಳ್ಳತನದ ಉಸಾಬರಿಯಿಂದ ದೂರವಿರುವರು. ಊರು ಸುಟ್ಟರೂ ಹನುಮಪ್ಪ ಹೊರಗೆ ಎಂಬ ನಾಣ್ನುಡಿಯಂತೆ ಆತನಿಗೆ ಯಾರೂ ಲುಕ್ಸಾನು ಮಾಡುವುದಿಲ್ಲ. ಹಟ್ಟಿಯಲ್ಲಿಯೇ ಸುಖವಾಗಿರುವ ಏಕೈಕ ವ್ಯಕ್ತಿಯಾದ ಅವನು ಕಳ್ಳತನ ಪಾಪವೆಂದು ಹೇಳುವ ಎಲ್ಲರಿಗೂ ನಿಕಟವರ್ತಿಯಾಗಿರುವನು. ಅಂದರೆ ಕನ್ನಡಿಯಲ್ಲಿ ನೋಡಿಕೊಳ್ಳುವವರ ಪಂಗಡ ಒಡನಾಡುತ್ತಿರುವನೆಂದರ್ಥ. ತನ್ನನ್ನು ಹೊರತುಪಡಿಸಿ ಹಟ್ಟಿ ನಿವಾಸಿಗಳ ಯಾರು ಸಹ ಕನ್ನಡಿಯಲ್ಲಿ ನೋಡಿಕೊಳ್ಳಬಾರದು ಎಂಬ ನಿಲುವು. ಈ ಸಮುದಾಯಗಳನ್ನು ಕತ್ತಲಿನಲ್ಲಿಟ್ಟು ಮೆರೆಯುವ ಪುರೋಹಿತಶಾಹಿಯ ನಡವಳಿಕೆಯನ್ನು ಈ ಕನ್ನಡಿ ಬಿಂಬಿಸುತ್ತದೆ."[೨೨]

ಹೀಗೆ ನಿಜಲಿಂಗ ಮೊಟ್ಟ ಮೊದಲಿಗೆ ಕನ್ನಡ ನೋಡಿಕೊಂಡಾಗ ತಾನು ಸುಂದರವಾದ ಯುವಕ ಎಂಬುದನ್ನು ಕನ್ನಡಿ ಸಾಬೀತು ಮಾಡಿತು. ತೀರ್ಥರೂಪ ತನ್ನ ಕಣ್ಣುಗಳಿಂದ ನಿರ್ಗಮಿಸಿದರು. ತಕ್ಷಣ ಈತನಿಗೆ ಅನಿರ್ವಚನೀಯವಾದ ಅನುಭವ. ಒಟ್ಟಿನಲ್ಲಿ ಈ ಕನ್ನಡಿಯು ನಿಜಲಿಂಗನ ಮೂಲಕ ಯಲ್ಲಾಪ್ರ ಹಟ್ಟಿಯನ್ನು ಪ್ರವೇಶಿಸಿ ಅದುವರೆಗೂ ಆಗದ ಬದಲಾವಣೆ ಆ ಜನಗಳಲ್ಲಿ ಕಾಣಿಸಿತು. ನಿಧಾನವಾಗಿ ಯಲ್ಲಾಪ್ರದ ಆಧುನಿಕತೆ ಪಲ್ಲಟವನ್ನು ಕನ್ನಡಿಯ ಮೂಲಕ ಲೇಖಕರು ಚಿತ್ರಿಸಿದ್ದಾರೆ.

**ಸ್ವಾತಂತ್ರ್ಯೋತ್ತರ ರಾಜಕಾರಣ**

ಪ್ರಸ್ತುತ ಕಾದಂಬರಿಯಲ್ಲಿ ಸ್ವಾತಂತ್ರ್ಯೋತ್ತರ ಕಾಲದಲ್ಲಿ ಭಾರತದ ರಾಜಕೀಯ ಚಿತ್ರಣವನ್ನು ಕೊಡುತ್ತಾರೆ. ಇದು ಕಾದಂಬರಿಯ ಮೂರನೇ ಆಯಮವಾಗಿದೆ. ಇಲ್ಲಿ ರಾಜಕಾರಣವನ್ನು ಅತ್ಯಂತ ವಿಡಂಬನಾತ್ಮಕವಾಗಿ ಚಿತ್ರಿಸಲಾಗಿದೆ. ಇಲ್ಲಿ ಬರುವ ಸಿ.ಎಂ. ಗ್ರಾಮವಾಸ್ತವ್ಯ. ಅದೂ

ಕಳ್ಳನ ಮನೆಯಲ್ಲಿ. ಇದಂತೂ ಅತ್ಯಂತ ಹಾಸ್ಯಮಯ ಸನ್ನಿವೇಶ ಹಾಗೂ ರಾಜಕಾರಣದ ದುರಂತವೆಂದೇ ಹೇಳಬಹುದು. ಕಳ್ಳನ ಮನೆಯಲ್ಲಿ ಗ್ರಾಮವಾಸ್ತವ್ಯ ಮಾಡುವ ಮುಖ್ಯಮಂತ್ರಿ ಹೇಳುವ ಮಾತೆಂದರೆ ನಿರ್ಲಕ್ಷಿತ ಕಳ್ಳರ ಸಮುದಾಯಗಳು ಯಾತ್ರವು, ಅವುಗಳನ್ನು ಯಾವ ರೀತಿ ಓಲೈಯಿಸಿದರೆ ಎಷ್ಟು ಮತಗಳು ತಮ್ಮ ಪಕ್ಷದ ಕಡೆ ವಾಲಬಹುದು, ಇದರಿಂದ ಮತ್ತೆ ತಮ್ಮ ಪಕ್ಷವನ್ನು ಅಧಿಕಾರಕ್ಕೆ ತರಬಹುದು ಎಂದು ಲೆಕ್ಕಾಚಾರ ಮಾಡುವುದು ಪ್ರಸ್ತುತ ರಾಜಕಾರಣಕ್ಕೆ ಹಿಡಿದ ಕನ್ನಡಿಯಾಗಿದೆ. ಹೀಗೆ ಹೇಳುವ ಮುಖ್ಯಮಂತ್ರಿಯು ತನ್ನ ರಾಜಕಾರಣದ ಪ್ರಾರಂಭದ ದಿನಗಳಲ್ಲಿ ಕಳ್ಳನಾಗಿದ್ದ ಎಂಬುದನ್ನು ಲೇಖಕ ಪರೋಕ್ಷವಾಗಿ ಹೇಳುತ್ತಾರೆ.

ರಾಮಗಿರಿ ಎಂಬ ಗ್ರಾಮಕ್ಕೆ ಗ್ರಾಮವಾಸ್ತವ್ಯಕ್ಕೆ ಬಂದ ಮುಖ್ಯಮಂತ್ರಿಗಳು ಕಳ್ಳತನ ವಿದ್ಯೆ ಕೀಳಲ್ಲ ಎಂದು ಭಾಷಣ ಮಾಡಿದರು ಹಾಗೂ ಕಳ್ಳಕಳ್ಳರೆಂದೇಕೆ ಬೀಳುಗಳೆಯುವಿರಿ ಕಣ್ಣು ಕಾಣದ ಗಾವಿಲರು ಎಂದೇ ಭಾಷಣ ಪ್ರಾರಂಭಿಸಿದರು. ಅನೇಕ ಕಳ್ಳರು ತಮ್ಮ ಕಷ್ಟ ಹೇಳಿ ಕೊಂಡರು. ಕಳ್ಳರಿಗೆ ಸ್ಮರಣ ಸಂಚಿಕೆ ಕೊಟ್ಟಿದ್ದು ಅತ್ಯಂತ ವಿಡಂಬನೆಯ ಪರಾಕಾಷ್ಠತೆ ಎಂದರೆ ತಪ್ಪಾಗಲಿಕ್ಕಿಲ್ಲ.

**ಮಂಗಳಮುಖಿಯರ ಸಮಾಜ ಸೇವೆ**

ಕಮಲಾಪುರಕ್ಕೆ ಬಂದ ಮಂಗಳಮುಖಿಯರು ಊರ ಹೊರಗಿನ ಬೇವಿನ ಮರದ ಕೆಳಗೆ ಆಶ್ರಯ ಪಡುತ್ತಾರೆ. ಈ ಮಂಗಳ ಮುಖಿಯರು ಕಮಲಾಪುರಕ್ಕೆ ಬರುವ ಮೂಲಕ ಇಡೀ ಹಳ್ಳಿಗೆ ಆಧುನಿಕ ರೂಪ ಕೊಡುತ್ತಾರೆ.

ಅದುವರೆಗೂ ಶಾಪಗ್ರಸ್ತ ನಾಡಿನಂತೆ ಇರುವ ಈ ಹಳ್ಳಿಗೆ ಅವರ ಮೂಲಕ ಆಧುನಿಕತೆ ಮತ್ತು ಬದುಕಿನ ಜ್ಞಾನ ಎರಡೂ ಒಟ್ಟಿಗೆ ಪ್ರವೇಶಿಸುತ್ತವೆ. ಜನ ತಮ್ಮ ಕಾಯಿಲೆಗೆ, ಅಲಂಕಾರಕ್ಕೆ, ಅಕ್ಷರಕ್ಕೆ ಪ್ರತಿಯೊಂದಕ್ಕೂ ಆ ಮೂರುಜನ ಮಂಗಳಮುಖಿಯರಾದ ಸಾಧನಾ, ಮದುಬಾಲ ಹಾಗೂ ಬಬೀತ ಇವರನ್ನು ಅವಲಂಬಿಸುತ್ತಾರೆ. ಅವರು ಆ ಹಳ್ಳಿಯಲ್ಲಿ ಕ್ರಾಂತಿಯನ್ನೇ ಉಂಟು ಮಾಡುತ್ತಾರೆ. ಅಲ್ಲಿನ ಜನರಲ್ಲಿ ಆರೋಗ್ಯದ ಬಗ್ಗೆ ಅಲಂಕಾರದ ಬಗ್ಗೆ, ಅರಿವು ಮೂಡಿಸುವುದರ ಜೊತೆಗೆ ಆ ಗ್ರಾಮವನ್ನು ಆಧುನಿಕ ಮಾದರಿ ಗ್ರಾಮವನ್ನಾಗಿ ಮಾರ್ಪಡಿ ಸುತ್ತಾರೆ. ಅಂದರೆ ಮಂಗಳಮುಖಿಯರು ಮನಸ್ಸು ಮಾಡಿದರೆ ಸಮಾಜದಲ್ಲಿ ಪರಿವರ್ತನೆ ತರಲು ಸಾಧ್ಯ ಎನ್ನುವುದನ್ನು ಈ ಪಾತ್ರಗಳ ಮೂಲಕ ಅರಿವು ಮೂಡಿಸುವ ಜಾಣ್ಮೆಯನ್ನು ನಿರೂಪಕರು ತೋರಿಸಿದ್ದಾರೆ.

**ನಿಜಲಿಂಗನ ರಹಸ್ಯ**

ಕಮಲಾಪುರದಲ್ಲಿ ಆಧುನಿಕತೆಯ ಬಿರುಗಾಳಿ ಬೀಸುತ್ತಿರುವುದು ಭವ್ಯ ಬಂಗಲೆಯಲ್ಲಿರುವ ಸಿ.ಎಂ. ಮಗಳು ಉಷಾಗೂ ತಲುಪುತ್ತದೆ. ಆಕೆ ತನ್ನ ಕೇಶಾಲಂಕಾರಕ್ಕೆ ಮತ್ತು ಆಧುನಿಕ

ರೀತಿಯಲ್ಲಿ ಅಲಂಕರಿಸುವುದಕ್ಕೆ ಬಬೀತಾಳನ್ನು ತನ್ನ ಬಂಗಲೆಗೆ ಕರೆಯಿಸಿಕೊಳ್ಳುತ್ತಾಳೆ. ಆ ಮೂಲಕ ಅವರ ಪ್ರೇಮ ಬೆಳೆಯುತ್ತಾ ಹೋಗುತ್ತದೆ. ಕಳ್ಳತನಕ್ಕೆ ಬಂದ ಕಳ್ಳ ತನ್ನ ಪಕ್ಕದಲ್ಲಿ ರಾತ್ರಿ ಬಂದು ಮಲಗಿದ್ದವನು ಇವನೇ ಎಂದು ತಿಳಿದು ಆಕೆಯಲ್ಲಿ ಪ್ರೇಮ ಮೂಡುತ್ತದೆ. ಗ್ರಾಮದ ಎಲ್ಲರ ಮನಸ್ಸನ್ನು ಗೆದ್ದ ಬಬೀತ ಒಂದು ದಿನ ಉಷಾಳ ಮದುವೆಯ ಸಂದರ್ಭದಲ್ಲಿ ತನ್ನ ನಿಜರೂಪವನ್ನು ತೋರಿಸಿ ತಾನು ಬಬೀತಳಲ್ಲ 'ನಿಜಲಿಂಗ' ಎಂಬ ರಹಸ್ಯವನ್ನು ಬಿಚ್ಚಿಡುತ್ತಾನೆ ಮತ್ತು ಎಲ್ಲರ ಅನುಮತಿ ಪಡೆದು ತಾನು ಮೆಚ್ಚಿದ ಉಷಾಳನ್ನು ಮದುವೆ ಯಾಗುತ್ತಾನೆ. ಇದೊಂದು ನಮ್ಮ ಹಿಂದಿನ ಮಹಾಕಾವ್ಯ ಉಷಾ ಪರಿಣಯವನ್ನು ನೆನಪಿಗೆ ತರುವಂತಹದ್ದು. ಘಟನಾವಳಿಗಳನ್ನು ನಿರೂಪಕನು ಅತ್ಯಂತ ಸಮರ್ಥವಾಗಿ ನಿರ್ವಹಿಸಿ ಹೊಸ ಆಧುನಿಕತೆಯ ಹಿನ್ನೆಲೆಯಲ್ಲಿ ಸ್ವಯಂವರ ನೆರವೇರಿಸುತ್ತಾರೆ.

ಈ ಕಾದಂಬರಿಯಲ್ಲಿ ಇದೊಂದು ರಮಣೀಯವಾದ ಪ್ರಸಂಗವಾಗಿದೆ. ಒಟ್ಟಿನಲ್ಲಿ ಕುಂ.ವೀ. ಅವರ ಈ ಕಾದಂಬರಿಯು ಅನೇಕ ವಿಷಯಗಳಲ್ಲಿ ವೈಶಿಷ್ಟ್ಯಪೂರ್ಣವಾದ ಕಾದಂಬರಿಯಾಗಿದೆ. ಈ ಕಾದಂಬರಿಯ ಗದ್ಯವು ಇದುವರೆಗಿನ ಕುಂ.ವೀ. ಕಥೆಗಳ ಗದ್ಯಕ್ಕಿಂತ ಭಿನ್ನವಾಗಿದೆ. ಗದ್ಯದ ಬರವಣಿಗೆ ವೈನೋದಿಕ ಶೈಲಿಯಿಂದ ಗಂಭೀರತೆಯ ಕಡೆಗೆ ಸಾಗಿದೆ. ಗ್ರಾಮಕ್ಕಿಂತ ನಗರ ಭಾಷೆಯನ್ನು ಇಲ್ಲಿ ಹೆಚ್ಚಾಗಿ ಕಾಣಬಹುದಾಗಿದೆ. ಕಥೆಯ ದೃಷ್ಟಿಯಿಂದ ಇದೊಂದು ಮೂರು ತಲೆಮಾರುಗಳ ಕಥೆಯಾಗಿದೆ. ಕಥೆಯ ಕೊನೆಯಲ್ಲಿ ತೃತೀಯ ಲಿಂಗಗಳಾದ ನಿಜಲಿಂಗ ಚತುರ ಮಾನವೀಯ ಕರುಣಾಮಯಿ ರಾಬಿನ್ ಹುಡ್‌ನಂಥ ನಾಯಕ. ಈತನು ತೃತೀಯ ಲಿಂಗಿಯ ವೇಷಧಾರಣೆ ಮಾಡಿ ಉಷಾಳನ್ನು ಮದುವೆಯಾಗುತ್ತಾನೆ. ಹಾ ಸಿದ್ದಲಿಂಗ ಕ್ರೂರಿ ದಮನಕಾರಿ ಮತ್ತು ಶಂಭುಲಿಂಗ ತನ್ನ ಮೂಲ ಅರಸಿ ಹೊರಟವನು. ಹೀಗೆ ಅನೇಕ ವಿಶೇಷತೆ ಪ್ರಯೋಗಗಳ ಮೂಲಕ ಇದೊಂದು ಅದ್ಭುತ ರಮ್ಯಕತೆಯಾಗಿದೆ.

**೪.೨. ಕುಂ.ವೀರಭದ್ರಪ್ಪ ಅವರ ಸಾಹಿತ್ಯ ಸ್ವರೂಪ**

**೪.೨.೧. ಕವನಸಂಕಲನಗಳು**

ಕುಂ.ವೀ. ಅವರು ಬಹಳ ದೊಡ್ಡ ಗದ್ಯಲೇಖಕರಾದರೂ, ಕವಿತೆಯ ಮೂಲಕ ಅವರ ಬರಹ ಪ್ರಾರಂಭವಾಗುತ್ತದೆ. ಪ್ರಾರಂಭದಲ್ಲಿ ಇವರು ಕವಿತೆಗಳನ್ನು ಬರೆಯುತ್ತಿದ್ದರು. ಹಿರಿಯ ಕವಿಗಳ ಕವಿತೆಯನ್ನು ಓದುವುದು ಅವರಂತೆ ಬರೆಯಲು ಪ್ರಯತ್ನಿಸುವುದು; ಇದನ್ನು ಒಂದು ವ್ರತದಂತೆ ಪಾಲಿಸಿಗೊಂಡು ಬಂದರು. ಉತ್ತಮ ಅಧ್ಯಯನಶೀಲರಾದ ಕುಂ.ವೀ. ಅವರು ಮೌಲಿಕ ಕೃತಿಗಳ ಅಧ್ಯಯನದಿಂದ ತಮ್ಮ ಬರವಣಿಗೆಯ ಜ್ಞಾನವನ್ನು ವೃದ್ಧಿಸಿಕೊಂಡವರು. ಪ್ರಾರಂಭದ ಅವರ ಕವನಸಂಕಲನಗಳು ಹೀಗಿವೆ.

**ದೀವಿ ಸೀಮೆಯ ಹಾಡು**

೧೯೭೭ರಲ್ಲಿ ಪ್ರಕಟವಾದ ಇದು ಇವರ ಮೊದಲ ಪ್ರಕಟಿತ ಕವನ ಸಂಕಲನವಾಗಿದೆ. ಈ ಕವನ ಸಂಕಲನದಲ್ಲಿ ೨೭ ಕವನಗಳಿವೆ. ಇವುಗಳಲ್ಲಿ ಹೆಚ್ಚಾಗಿ ಸಮಾಜದಲ್ಲಿನ ಅಸಮಾನತೆ, ಅನ್ಯಾಯ, ಅವ್ಯವಸ್ಥೆ, ಶೋಷಣೆ ಕುರಿತಾದ ವಿಚಾರವನ್ನು ಒಳಗೊಂಡಂತೆ ರಾಜಕೀಯ ವಿಡಂಬನೆಯನ್ನು ಕಾಣಬಹುದಾಗಿದೆ. 'ಸ್ವಾತಂತ್ರ್ಯೋತ್ಸವ', 'ಆಗಸ್ಟ್ ೧೫', 'ದೀವಿ ಸೀಮೆಯ ಹಾಡು' ಕವನಗಳು ಗಮನಾರ್ಹವಾಗಿವೆ. ಯೌವನ ಸಹಜವಾದ ಸಿಟ್ಟು, ಅಸಹನೆ ಇಲ್ಲಿನ ಕವನಗಳಲ್ಲಿ ವ್ಯವಸ್ಥೆಯ ವಿರುದ್ಧ ಪ್ರಕಟವಾಗುತ್ತವೆ.

**ನೀನಿಲ್ಲದ ಮನೆ**

ಇದು ೧೯೯೩ರಲ್ಲಿ ಪ್ರಕಟವಾದ ಎರಡನೆಯ ಕವನಸಂಕಲನವಾಗಿದೆ. ಈ ಕವನ ಸಂಕಲನದಲ್ಲಿ ನೊಂದ ಜನರ ದಾರುಣ ಬದುಕಿನ ಚಿತ್ರಣವಿದೆ. ಯಜಮಾನ ಸಂಸ್ಕೃತಿಯಲ್ಲಿ ಸಾಮಾನ್ಯ ಬಡ ಮತ್ತು ಕೆಳವರ್ಗದ ಜನರು ಹೇಗೆ ಶೋಷಣೆಗೆ ಒಳಗಾಗುತ್ತಾರೆ ಎಂಬುದರ ಚಿತ್ರಣವನ್ನು ಪ್ರತಿಯೊಂದು ಕವಿತೆಗಳೂ ಕಟ್ಟಿಕೊಡುತ್ತವೆ.

ಕುಂ.ವೀ. ಅವರಿಗೆ ಕಾವ್ಯಕ್ಕಿಂತ ಗದ್ಯದೆಡೆಗೆ ಹೆಚ್ಚು ಒಲವಿರುವಂತೆ ತೋರುತ್ತದೆ. "ನಾನು ಮೊದಲು ಕಾವ್ಯ ಬರೆದೆ. ಕ್ರಮೇಣ ಗೊತ್ತಾಯ್ತು ಕಾವ್ಯದ ಮೂಲಕ ಒಂದು ಹಿಡಿ ಬರಹಗಾರರನ್ನು ಮುಟ್ಟಬಲ್ಲನೇ ಹೊರತು ಜನಸಾಮಾನ್ಯರ ಎದೆಯನ್ನು ಕಲಕಲಾರೆ ಅಂತ. ಆದ್ದರಿಂದಾಗಿ ಕಾವ್ಯ ಕೃಷಿ ಕಡಿಮೆ ಮಾಡಿ ಕಥೆ ಬರೆಯಲು ಶುರು ಮಾಡಿದೆ. ನಂತರ ಕಾಂದಂಬರಿಗಳನ್ನು ಬರೆದೆ."[೨೩]

ಹೀಗೆ ಕಾವ್ಯದ ಮೂಲಕ ಪ್ರಾರಂಭವಾದ ಅವರ ಬರಹ ಗದ್ಯದೆಡೆಗೆ ಹೊರಳಿ ಗಟ್ಟಿಯಾಗಿ ನೆಲೆ ನಿಂತು ಬಳ್ಳಾರಿಯ ಜಿಲ್ಲೆಯ ಭಾಷಾಪ್ರಭೇದದ ಬಳಕೆಯ ಮೂಲಕ ಕನ್ನಡ ಸಾಹಿತ್ಯದ ಒಬ್ಬ ಮುಖ್ಯ ಗದ್ಯಬರಹಗಾರರಾಗಿ ಪ್ರಸಿದ್ಧಿಯನ್ನು ಪಡೆದಿದ್ದಾರೆ.

**೪.೨.೨. ಕಥಾಸಂಕಲನಗಳು**

ಕುಂ.ವೀ. ಅವರು ತಮ್ಮ ಕಥೆಗಳ ಮೂಲಕ ಜನಸಾಮಾನ್ಯರ ಎದೆಯನ್ನು ತಟ್ಟಿದ್ದು ಗದ್ಯದ ಮೂಲಕ. ಇವರು ಬರೆದ ಮೊದಲ ಕಥೆ 'ಕೂಳು'. ಇದು ೧೯೭೫ರಲ್ಲಿ ಮಯೂರ ಪತ್ರಿಕೆಯಲ್ಲಿ ಮೊದಲಬಾರಿಗೆ ಪ್ರಕಟವಾಗಿದೆ. ನಂತರ ಇವರು ಅನೇಕ ಸಣ್ಣಕಥೆಗಳನ್ನು ಬರೆದು ಪುಸ್ತಕ ರೂಪದಲ್ಲಿ ಪ್ರಕಟಿಸಿದ್ದಾರೆ. ಇವರ ಕಥಾಸಂಕಲನಗಳು ಈ ರೀತಿಯಲ್ಲಿವೆ:

೧. ಇನ್ನಾದರೂ ಸಾಯಬೇಕು(೧೯೮೨)

೨. ಡೋಮ ಮತ್ತಿತರ ಕಥೆಗಳು(೧೯೮೫)

೩. ಭಗವತಿ ಕಾಡು(೧೯೮೧)

೪. ನಿಜಲಿಂಗ(೧೯೯೪)

೫. ಅಪೂರ್ವ ಚಿಂತಾಮಣಿ ಕಥೆ(೧೯೯೪)

೬. ಸುಶೀಲ ಎಂಬ ನಾಯಿಯೂ ವಾಗಿಲಿ ಎಂಬ ಗ್ರಾಮವೂ(೧೯೯೫)

೭. ಭಳಾರೆ ವಿಚಿತ್ರಂ(೨೦೦೨)

೮. ಬರಿ ಕಥೆಯಲ್ಲೋ ಅಣ್ಣ(ಸಮಗ್ರ ಕಥಾಸಂಕಲನ) (೨೦೦೪)

ಈ ಎಲ್ಲಾ ಕಥಾಸಂಕಲನಗಳಿಂದ ವಿವಿಧ ಕಥೆಗಳನ್ನು ಆಯ್ದುಕೊಂಡು ಬೇರೆ ಬೇರೆ ವಿಶ್ವವಿದ್ಯಾಲಯಗಳಲ್ಲಿ ೧೯೮೭ರಲ್ಲಿ ಪದವಿ ತರಗತಿಗಳಿಗೆ ಪಠ್ಯವನ್ನಾಗಿ ನಿಗದಿಪಡಿಸಿತ್ತು. ನಂತರ ಗುಲ್ಬರ್ಗಾ ವಿಶ್ವವಿದ್ಯಾಲಯದಲ್ಲಿ ಪದವಿ ತರಗತಿಗೆ ೧೯೮೯ರಲ್ಲಿ "ಕುಂ.ವೀ. ಆಯ್ದ ಕಥೆಗಳು" ಪುಸ್ತಕವನ್ನು ಪಠ್ಯವನ್ನಾಗಿ ನಿಗದಿಪಡಿಸಿತ್ತು. ನಂತರ ಮೈಸೂರು ವಿಶ್ವವಿದ್ಯಾನಿಲಯವು ೧೯೯೪ರಲ್ಲಿ "ಕುಂ.ವೀ. ಕಥೆಗಳು" ಎಂಬ ಶೀರ್ಷಿಕೆಯೊಂದಿಗೆ ಪಠ್ಯವನ್ನಾಗಿ ನಿಯಮಿಸಿದ್ದನ್ನು ಕಾಣುತ್ತೇವೆ. ನಂತರ ಕುಂ.ವೀ. ಅವರು ೧೯೯೯ರಲ್ಲಿ 'ಕನಕಾಂಗಿ ಕಲ್ಯಾಣ'ವೆಂಬ ನೀಳ್ಗತೆಯನ್ನು ಪ್ರಕಟಿಸಿದ್ದಾರೆ. ಈ ಎಲ್ಲಾ ಕಥಾಸಂಕಲನಗಳಲ್ಲಿ ಕುಂ.ವೀ. ಅವರು ಬಡತನದ ದಾರುಣ ಚಿತ್ರಣವನ್ನು ಕೊಡುವುದರ ಜೊತೆಗೆ ಜಮೀನ್ದಾರರ ಕ್ರೌರ್ಯ, ದಬ್ಬಾಳಿಕೆ, ಜಾತಿಸಂಘರ್ಷ ಹಾಗೂ ಪ್ರಾಣಿ ಬಲಿ ಎಂಬ ಮೌಢ್ಯಗಳ ಚಿತ್ರಣ, ಹೆಣ್ಣಿನ ಮೇಲಿನ ದೌರ್ಜನ್ಯ, ಅಧಿಕಾರಶಾಹಿ ದಬ್ಬಾಳಿಕೆ, ಪೊಲೀಸ್ ಇಲಾಖೆಯಲ್ಲಿ ನಡೆಯುವ ದೌರ್ಜನ್ಯಗಳು, ನೌಕರಶಾಹಿ ವರ್ಗದ ಭ್ರಷ್ಟತೆ, ಕರ್ತವ್ಯಹೀನ ಪ್ರವೃತ್ತಿ, ಜಮೀನ್ದಾರರು ಬಡವರ ಭೂಮಿಯನ್ನು ತಮ್ಮ ಹಣಬಲದಿಂದ ಕಸಿದುಕೊಳ್ಳುವ ಪ್ರವೃತ್ತಿ, ವಿಶ್ವವಿದ್ಯಾಲಯಗಳಲ್ಲಿ ನಡೆಯುವ ಅಕಾಡೆಮಿಕ್ ರಾಜಕಾರಣ ಹೀಗೆ ವೈವಿಧ್ಯಮಯವಾದ ವಿಷಯಗಳನ್ನು ಇವರ ಕಥೆಗಳು ಒಳಗೊಂಡಿವೆ. ಹೀಗೆ ಸಮಾಜದ ನಾನಾ ವರ್ಗಗಳ ಶೋಷಿತರ ಜೀವನಚಿತ್ರಣ ಕೊಡುವುದರ ಮೂಲಕ ಸಮಾಜದಲ್ಲಿ ನಡೆಯುವ ದೌರ್ಜನ್ಯಗಳ ಒಂದೊಂದು ಮಾದರಿಯನ್ನು ಒಂದೊಂದು ಕಥೆಗಳಲ್ಲಿ ಕಟ್ಟಿಕೊಟ್ಟಿದ್ದಾರೆ. ಯಾವುದನ್ನು ಸಮಾಜ ಕೀಳು, ಅಸಹ್ಯವೆಂದು ಹೇಳುತ್ತದೋ ಅದನ್ನು ಬಹಳ ಪ್ರೀತಿಯಿಂದ ಕಂಡು ಅಪ್ಪಿಕೊಳ್ಳುವ ರೀತಿಯಲ್ಲಿ ಆಫ್ರಿಕಾದ 'ಕಪ್ಪುಸಾಹಿತ್ಯ'ದಿಂದ ಪ್ರೇರಿತರಾಗಿ ಪ್ರತಿಯೊಂದು ಬದುಕಲು ಅರ್ಹ ಎಂಬಂತೆ ಚಿತ್ರಿಸಿದ್ದಾರೆ. ಉದಾಹರಣೆಗೆ "ಎಲುಗನೆಂಬ ಕೊರಚನು ಚೌಡನೆಂಬ ಹಂದಿಯು" ಎಂಬ ಕಥೆಯಲ್ಲಿ ಹಂದಿ ಹಾಕುವ ಹಿಕ್ಕೆಯನ್ನು ಆಕಾಶದಲ್ಲಿ ನಕ್ಷತ್ರಕ್ಕೆ ಹೋಲಿಸಿ, ಅದು ಕೂಡ ಪ್ರೀತಿಗೆ ಒಂದು ವಸ್ತುವಾಗಬಲ್ಲದು ಎಂಬುದನ್ನು ಚೌಡ ಮತ್ತು ಅವನ ಹಂದಿ ಪ್ರೀತಿಯ ಬಗ್ಗೆ ಕಥೆಯಲ್ಲಿ ತೋರಿಸಿಕೊಟ್ಟಿದ್ದಾರೆ. ಮುಂದಿನ ಅಧ್ಯಾಯಗಳಲ್ಲಿ ಇವರ ಕಥೆಗಳ ವಸ್ತು, ಭಾಷೆ, ಶೈಲಿ ಮುಂತಾದ ವಿಷಯಗಳ ಬಗ್ಗೆ ಚರ್ಚಿಸಲಾಗುವುದು.

### ೪.೨.೩. ಕಾದಂಬರಿಗಳು

ಕುಂ.ವೀ. ಅವರು ಸಣ್ಣಕಥೆಗಳನ್ನು ಬರೆಯುವುದರ ಜೊತೆಗೆ ಕೆಲವು ಸಣ್ಣಕಥೆಗಳನ್ನು ಮುಂದುವರಿಸಿ ಕಾದಂಬರಿಯ ರೂಪಗಳನ್ನು ಕೊಟ್ಟಿದ್ದಾರೆ. ಹಾಗೆಯೇ ಕಾದಂಬರಿ ಪ್ರಕಾರವೂ ಕೂಡ ಇವರಿಗೆ ಇಷ್ಟವಾದ ಇನ್ನೊಂದು ಸಾಹಿತ್ಯ ಪ್ರಕಾರವಾಗಿದೆ. ಇದರಲ್ಲಿ ಶ್ರೀಯುತರು ಸಾಕಷ್ಟು ಮೌಲಿಕವಾದ ಕಾದಂಬರಿಗಳನ್ನು ಕನ್ನಡದ ಸಾರಸ್ವತಲೋಕಕ್ಕೆ ಕಾಣಿಕೆಯಾಗಿ ನೀಡಿದ್ದಾರೆ. ಕರ್ನಾಟಕ ಮತ್ತು ಆಂಧ್ರದ ಗಡಿಭಾಗದಲ್ಲಿ ತಮ್ಮ ವೃತ್ತಿಜೀವನವನ್ನು ನಡೆಸಿದ ಕುಂ.ವೀ. ಅವರು ಅಲ್ಲಿಯ ಜಮೀನ್ದಾರಿ ಕ್ರೌರ್ಯ, ನಕ್ಸಲೈಟ್ ಹೋರಾಟದ ವಸ್ತುಗಳನ್ನು ತಮ್ಮ ಕಾದಂಬರಿಯಲ್ಲಿ ವಾಸ್ತವಮಾರ್ಗದಲ್ಲಿ ಚಿತ್ರಿಸಿದ್ದಾರೆ. ಅವರ ಕಾದಂಬರಿಗಳು:

೧. ಕಪ್ಪು(೧೯೮೧)

೨. ಆಸ್ತಿ(೧೯೮೩)

೩. ಬೇಲಿ ಮತ್ತು ಹೊಲ(೧೯೮೩)

೪. ಕೆಂಡದ ಮಳೆ(೧೯೮೬)

೫. ಮನಮೆಚ್ಚಿದ ಹುಡುಗಿ(ಬೇಟೆ)(೧೯೮೭)

೬. ಬೇಲಿಯ ಹೂಗಳು(೧೯೮೭)

೭. ಪಕ್ಷಿಗಳು(೧೯೮೯)

೮. ಪ್ರತಿದ್ವಂದ್ವಿ(೧೯೮೯)

೯. ಪ್ರೇಮವೆಂಬ ಹೊನ್ನುಡಿ(೧೯೮೯)

೧೦. ಕೊಟ್ರ ಹೈಸ್ಕೂಲಿಗೆ ಸೇರಿದ್ದು(೧೯೯೩)

೧೧. ಹನುಮ(೧೯೯೬)

೧೨. ಶಾಮಣ್ಣ(೧೯೯೮)

೧೩. ಯಾಪಿಲ್ಲು(೨೦೦೧)

೧೪. ಅರಮನೆ(೨೦೦೬)

೧೫. ಹೇಮರೆಡ್ಡಿ ಮಲ್ಲಮ್ಮನ ಕಥೆಯು(೨೦೧೨)

೧೬. ನಿಜಲಿಂಗ(೨೦೧೬)

**ಕಪ್ಪು**

ಈ ಕಾದಂಬರಿಯು ೧೯೮೩ರಲ್ಲಿ 'ಕರ್ನಾಟಕ ಸಾಹಿತ್ಯ ಅಕಾಡೆಮಿ' ಪ್ರಶಸ್ತಿಯನ್ನು ಪಡೆದು ಕೊಂಡಿದೆ. ಕೆಳವರ್ಗದ ಭರಮಜ್ಜ ಮತ್ತವರ ಕುಟುಂಬವು ಎರಡು ದೈತ್ಯಶಕ್ತಿಗಳಾದ ಕರಿಗೌಡ ಮತ್ತು ಸಣ್ರುದ್ರರ ದೌರ್ಜನ್ಯಕ್ಕೆ ಬಲಿಯಾಗಿ ಒಂದು ಮುಗ್ಧಜೀವ ಹೇಗೆ ದೇವರ ಹೆಸರಿನಲ್ಲಿ ನಲುಗಿ ಹೋಗುತ್ತದೆ ಎಂಬ ದಾರುಣವಾದ ಕಥೆಯನ್ನು ಬಳ್ಳಾರಿ ಜಿಲ್ಲೆಯ ಪ್ರಾದೇಶಿಕ ಭಾಷೆಯ ಸೊಗಡಿನಿಂದ ಅತ್ಯಂತ ನೈಜವಾಗಿ ಚಿತ್ರಿಸಿದ್ದಾರೆ. ಜೊತೆಗೆ ಈ ಕಾದಂಬರಿ ಅತಿಯಾದ ಲೈಂಗಿಕ ವಿವರಣೆಯಿಂದ ಕೂಡಿದೆ. ಪ್ರಸ್ತುತ ಈ ಕಥೆಯು ಮೈಕೋ ಚಂದ್ರು ಅವರ ನಿರ್ದೇಶನದಲ್ಲಿ ನಾಟಕ ರೂಪದಲ್ಲಿ ರವೀಂದ್ರ ಕಲಾಕ್ಷೇತ್ರದಲ್ಲಿ ಪ್ರದರ್ಶನಗೊಂಡು ಅಪಾರ ಜನಮೆಚ್ಚಿಗೆಯನ್ನು ಗಳಿಸಿಕೊಂಡ ಕಾದಂಬರಿ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.

**ಆಸ್ತಿ**

ಇದು ಕುಂ.ವೀ. ಅವರ ಎರಡನೇ ಕಾದಂಬರಿ. ಈ ಕಾದಂಬರಿಯಲ್ಲಿ ಜಿಪುಣನೊಬ್ಬನ ದುರಂತ ಬದುಕಿನ ಚಿತ್ರಣವನ್ನು ಕಾಣಬಹುದಾಗಿದೆ. ಎಷ್ಟೇ ಗಳಿಸಿದರೂ, ಅದನ್ನು ಅನುಭವಿಸದೆ ಲೋಭಿಯಾಗಿ ಸತ್ತು ಹೋಗುತ್ತಾನೆ. ಈ ಕಾದಂಬರಿಯು ತಂತ್ರದ ದೃಷ್ಟಿಯಿಂದಲೂ ನಿರೂಪಣೆಯ ದೃಷ್ಟಿಯಿಂದಲೂ ವಿಶೇಷವಾದದ್ದಲ್ಲ. ಕಾದಂಬರಿಯು ವಸ್ತು ಕೂಡ ಜಿಪುಣರ ಸಾಮಾನ್ಯ ಜೀವನಕ್ರಮವನ್ನು ಹೇಳುತ್ತದೆ. ಈ ಕಾದಂಬರಿಯಲ್ಲಿ ಯಾವ ವಿಶೇಷತೆಯೂ ಕಾಣಿಸುವುದಿಲ್ಲ. ಇದೊಂದು ಸಾಮಾನ್ಯ ಕಥಾಹಂದರವನ್ನು ಹೊಂದಿದ ಕಾದಂಬರಿಯಾಗಿದೆ.

**ಬೇಲಿ ಮತ್ತು ಹೊಲ**

ಈ ಕಾದಂಬರಿಯು ೧೯೮೭ರಲ್ಲಿ 'ವರ್ಧಮಾನ ಉದಯೋನ್ಮುಖ' ಪ್ರಶಸ್ತಿಯನ್ನು ಪಡೆದು ಕೊಂಡಿದೆ. ಬಾಗಲ್ಪುರ ಊರಲ್ಲಿ ನಡೆದ ಪೊಲೀಸ್ ದೌರ್ಜನ್ಯದ ವಿವಿಧ ಮುಖಗಳನ್ನು ಈ ಕಾದಂಬರಿ ಪರಿಚಯಿಸುತ್ತದೆ.

ಬೇಲಿಯೇ ಎದ್ದು ಹೊಲದ ಬೆಳೆ ಮೇಯ್ದರೆ ಇದಕ್ಕೆ ಯಾರನ್ನು ಹೊಣೆ ಮಾಡಲಿಕ್ಕಾಗುತ್ತದೆ. ರಕ್ಷಕರೇ ಭಕ್ಷಕರಾದ ಕಥೆ ಜನಸಾಮಾನ್ಯರನ್ನು ಕಾಯ್ದೆ ಕಾನೂನುಗಳನ್ನು ಮುಂದಿಟ್ಟುಕೊಂಡು ಹೇಗೆ ಶೋಷಣೆ ಮಾಡುತ್ತಾರೆ ಎಂಬುದರ ಚಿತ್ರಣವನ್ನು ಕಟ್ಟಿಕೊಡುತ್ತದೆ. ಸ್ವಾತಂತ್ರ್ಯ ಬಂದ ನಂತರ ನಮ್ಮ ಪೊಲೀಸ್ ಅಧಿಕಾರಶಾಹಿ ಹೇಗೆ ಜನರನ್ನು, ಧ್ವನಿ ಎತ್ತಿದವರನ್ನು ಹತ್ತಿಕ್ಕಲು ಪ್ರಯತ್ನಿಸುತ್ತದೆ ಎಂಬುದರ ವಿವರಣೆ ಕೊಡುತ್ತದೆ. ಈ ಕಾದಂಬರಿಯನ್ನು ಸಿ.ಜಿ.ಕೆ., ಶ್ರೀನಿವಾಸ ಪ್ರಭು ಮತ್ತು ಜಿ.ಹೆಚ್. ರಾಘವೇಂದ್ರ ಅವರು ನಾಟಕರೂಪದಲ್ಲಿ ಅಳವಡಿಸಿ, ನಿರ್ದೇಶಿಸಿ ಕರ್ನಾಟಕದ ಪ್ರಮುಖ ಕೇಂದ್ರಗಳಲ್ಲಿ ಪ್ರದರ್ಶಿಸಿದ್ದಾರೆ. ವಾಯವ್ಯ ರಸ್ತೆ ಸಾರಿಗೆ ಸಂಸ್ಥೆ

೨೦೦೩ರಲ್ಲಿ ಹುಬ್ಬಳ್ಳಿಯಲ್ಲಿ ಇದರ ಪ್ರದರ್ಶನವನ್ನು ಏರ್ಪಡಿಸಿತ್ತು. ಈ ನಾಟಕವು ಐದು ಶ್ರೇಷ್ಠ ಪ್ರಶಸ್ತಿಗಳನ್ನು ಗೆದ್ದುಕೊಂಡಿದೆ.

**ಕೆಂಡದ ಮಳೆ**

೧೯೮೯ರಲ್ಲಿ ಪ್ರಕಟವಾದ ಇವರ ನಾಲ್ಕನೇ ಕಾದಂಬರಿ ಇದಾಗಿದೆ. ಇದು "ಕೆಂಡದ ಮಳೆ ಕರೆಯುವಲ್ಲಿ ಉದಕವಾದವರ ಕಥೆ"ಯ ಮುಂದುವರಿದ ಕಾದಂಬರಿಯಾಗಿದೆ. ಈ ಕಾದಂಬರಿಯಲ್ಲಿ ಹಿಂದು ಮತ್ತು ಮುಸ್ಲಿಂ ಧರ್ಮಗಳ ಸಂಘರ್ಷವನ್ನು ಕಾಣಬಹುದಾಗಿದೆ. ಮುಸ್ಲಿಮರ ಶವವನ್ನು ಹಿಂದೂ ವೀರಶೈವ ರುದ್ರಭೂಮಿಯಲ್ಲಿ ಹೂಳಿದಾಗ ಆಗುವ ಜಾತಿಕಲಹವನ್ನು ಅತ್ಯಂತ ನೈಜವಾಗಿ ಕಟ್ಟಿಕೊಟ್ಟಿದ್ದಾರೆ. ಈ ಮೂಲಕ ಎರಡೂ ಸಮುದಾಯಕ್ಕೆ ಕೋಮುಸಾಮರಸ್ಯ ಸಾರುವುದು ಒಳಿತು ಎಂಬ ಸಂದೇಶವನ್ನು ಪರೋಕ್ಷವಾಗಿ ಹೇಳುತ್ತಾ, ಸಮಾಜದಲ್ಲಿ ನಡೆಯುವ ಅನ್ಯಾಯವನ್ನು ಮನ ಮುಟ್ಟುವಂತೆ ತೋರಿಸಿದ್ದಾರೆ.

**ಮನಮೆಚ್ಚಿದ ಹುಡುಗಿ**

'ಬೇಟೆ' ಕಥೆಯ ಮುಂದುವರಿದ ಭಾಗವೇ ಈ ಕಾದಂಬರಿಯಾಗಿದೆ. ಈ ಕಾದಂಬರಿಯಲ್ಲಿ ಬಡತನ ಮತ್ತು ಸಿರಿತನದಿಂದ ಎರಡು ಮುಗ್ಧಜೀವಗಳು ಪ್ರೇಮಿಸಿ ಶ್ರೀಮಂತ ಗೌಡನ ದರ್ಪಕ್ಕೆ ಬಲಿಯಾಗಿ ಹೇಗೆ ದಾರುಣವಾದ ಸಾವನ್ನು ಕಾಣುತ್ತವೆ ಎಂಬುದನ್ನು ಸಾಂಕೇತಿಕವಾಗಿ ಕಾಣಿಸಲಾಗಿದೆ. ಊರಿನ ಜನರಿಗೆ ಕಾಟ ಕೊಡುವ ಚಿರತೆಯನ್ನು ಬೇಟೆಯ ಮೂಲಕ ಕೊನೆಗಾಣಿಸಿದ ನಾಯಕ ತಾನೇ ಗೌಡನ ಸ್ವಾರ್ಥಕ್ಕೆ ಬಲಿಯಾಗಿ ಅಂತ್ಯವನ್ನು ಕಾಣುತ್ತಾನೆ. ಇದು ಚಲನಚಿತ್ರವಾಗಿಯೂ ಸಹ ಜನರ ಮೆಚ್ಚಿಗೆಗೆ ಪಾತ್ರವಾದ ಕಾದಂಬರಿಯಾಗಿದೆ.

**ಪಕ್ಷಿಗಳು**

ಈ ಕಾದಂಬರಿಯಲ್ಲಿ ಲೇಖಕರು ತಮ್ಮ ನಿಸರ್ಗಪ್ರೇಮವನ್ನು ತೋರಿಸುವುದರ ಜೊತೆಗೆ ಪತ್ತೇದಾರಿ ಕಾದಂಬರಿಕಾರ ಎನ್ನುವ ರೀತಿಯಲ್ಲಿ ಈ ಕಾದಂಬರಿಯನ್ನು ಬರೆದಿದ್ದಾರೆ. ಹೀಗೆ ಪುರೋಹಿತಶಾಹಿಗಳು, ಮಠಾಧೀಶರು, ರಾಜಕಾರಣಿಗಳು ಪ್ರಕೃತಿಸಂಪತ್ತನ್ನು ಹಾಳುಮಾಡುತ್ತಾರೆ. ಈ ಮೂಲಕ ಪ್ರಾಣಿ ಪಕ್ಷಿ ಸಮೂಹವನ್ನು ಸರ್ವನಾಶ ಮಾಡುತ್ತಾರೆ ಎಂಬುದನ್ನು ಅತ್ಯಂತ ನೈಜವಾಗಿ ಚಿತ್ರಿಸಲಾಗಿದೆ. ಪತ್ತೇದಾರಿ ಕಾದಂಬರಿಯ ರೀತಿಯಲ್ಲಿ ಪ್ರತಿಕ್ಷಣಕ್ಕೂ ಓದುಗರ ಕುತೂಹಲ ಕೆರಳುವಂತೆ ಕಾದಂಬರಿಯು ಮುಂದುವರಿಯುತ್ತದೆ. ಇದರ ಜೊತೆಗೆ ಕಾದಂಬರಿಕಾರನ ಪಕ್ಷಿಗಳ ಬಗೆಗಿನ ಕಾಳಜಿ ಪಕ್ಷಿಗಳ ಬಗೆಗಿನ ಅಧ್ಯಯನ ಜ್ಞಾನವನ್ನು ತೋರಿಸಿಕೊಡುತ್ತದೆ.

**ಬೇಲಿಯ ಹೂಗಳು**

ಇದು ಇವರ ಏಳನೆಯ ಕಾದಂಬರಿಯಾಗಿದೆ. ಇದು 'ದೊರೆ' ಎಂಬ ಚಲನಚಿತ್ರವಾಗಿ ಪ್ರೇಕ್ಷಕರ ಮನ ಗೆದ್ದಿದೆ. ಜಮೀನ್ದಾರಿ ಪದ್ಧತಿಯಲ್ಲಿ ಹೇಗೆ ಜೀತಕ್ಕಿದ್ದ ವ್ಯಕ್ತಿಗಳು ದೌರ್ಜನ್ಯಕ್ಕೆ

ಒಳಗಾಗುತ್ತಾರೆ ಎಂಬುದರ ಚಿತ್ರಣದ ಜೊತೆಗೆ ಅವರು ಹೇಗೆ ಗುಲಾಮಗಿರಿ ವಿರುದ್ಧ ಯಜಮಾನ ಸಂಸ್ಕೃತಿ ವಿರುದ್ಧ ಹೋರಾಟ ಮಾಡುತ್ತಾರೆ ಎಂಬುದರ ಬಂಡಾಯದ ನೆಲೆಗಳನ್ನು ತೋರಿಸಿಕೊಡುತ್ತಾರೆ. ಇದರ ಜೊತೆಗೆ ಗಂಡು ಮತ್ತು ಹೆಣ್ಣಿನ ನಡುವಿನ ಪ್ರೇಮವನ್ನು ಸಹ ಇಲ್ಲಿ ಲೇಖಕರು ಭಾವನಾತ್ಮಕವಾಗಿ ಕಟ್ಟಿಕೊಟ್ಟಿದ್ದಾರೆ. ಗಡಿಭಾಗದ ಜಮೀನ್ದಾರಿ ಪದ್ಧತಿಯಲ್ಲಿ ಕ್ರೌರ್ಯಕ್ಕೆ ಸೀಮೆಯೇ ಇಲ್ಲದ ಅದು ಭಯಾನಕ ಸ್ವರೂಪ ತಾಳಿರುವುದನ್ನು ಧ್ವನಿಸುತ್ತದೆ.

**ಪ್ರತಿದ್ವಂದಿ**

ಬಡತನದ ಮತ್ತು ಶ್ರೀಮಂತಿಕೆಯ ನಡುವಿನ ಪ್ರೇಮದ ಹಂದರವನ್ನು ಉಳ್ಳಂತಹ ಕಥೆ ಇದು. ಇವರ ಹಿಂದಿನ 'ಮನಮೆಚ್ಚಿದ ಹುಡುಗಿ' ಕಾದಂಬರಿಯಲ್ಲಿ ಜಮೀನ್ದಾರಿ ಕ್ರೌರ್ಯಕ್ಕೆ ಪ್ರೇಮಿಗಳು ಬಲಿಯಾದರೆ ಇಲ್ಲಿ ಬಡತನದಿಂದ ನಲುಗಿದ ಪ್ರೇಮಿಗಳು ಕೊನೆಗೆ ಒಂದಾಗಿ ಸುಖಾಂತವಾಗುವ ರೀತಿಯಲ್ಲಿ ಚಿತ್ರಿಸಲಾಗಿದೆ. ಈ ಕಾದಂಬರಿಯ ಪಾತ್ರಗಳಾದ ಕೋದಂಡ ಮತ್ತು ತ್ರಿಪುರ ಸುಂದರಿಯ ಪ್ರೇಮ ಭಗ್ನವಾಗುತ್ತಾ ಬಂದರೂ ಕೊನೆಗೆ ಇವು ಬದುಕೆಂಬ ಅಗ್ನಿಕುಂಡದಲ್ಲಿ ಬೆಂದು ಕೊನೆಗೆ ಸುಖಾಂತವಾಗುವ ರೀತಿಯಲ್ಲಿ ಕಾದಂಬರಿಯು ಮುಕ್ತಾಯ ವಾಗುತ್ತದೆ.

**ಪ್ರೇಮವೆಂಬ ಹೊನ್ನುಡಿ**

ಈ ಕಾದಂಬರಿಯು ಸಹ ಹೆಸರೇ ಹೇಳುವಂತೆ ಪ್ರೀತಿ, ಪ್ರೇಮದ ವಸ್ತುವನ್ನು ಉಳ್ಳಂತಹ ಕಾದಂಬರಿಯಾಗಿದೆ. ಪ್ರತಿದ್ವಂದ್ವಿ ಕಾದಂಬರಿಯಂತೆ ಸುಖಾಂತವಾಗದೆ ಇಲ್ಲಿಯ ಪ್ರೇಮಿಗಳಾದ ಆನಂದ ಮತ್ತು ಸುನೀತ, ಜಯದೇವಪ್ಪ ಮತ್ತು ನಾಗಪ್ಪರ ಕ್ರೌರ್ಯಕ್ಕೆ ಬಲಿಯಾಗಿ ಸಾವಿನಲ್ಲಿ ಒಂದಾಗುವ ರೀತಿಯಲ್ಲಿ ಚಿತ್ರಿಸಿದ್ದಾರೆ. ಸಾಮಾನ್ಯವಾದ ನಿರೂಪಣೆಯ ಕಥಾವಸ್ತುವಿನಿಂದ ಕೂಡಿದ ಕಾದಂಬರಿ ಇದಾಗಿದೆ.

**ಕೊಟ್ರ ಹೈಸ್ಕೂಲಿಗೆ ಸೇರಿದ್ದು**

ಈ ಕಥೆಯು ದಲಿತರ ಹುಡಗನ ಅಕ್ಷರಪ್ರೀತಿಯನ್ನು, ವಿದ್ಯೆಯ ಹಂಬಲವನ್ನು ಅಭಿವ್ಯಕ್ತಿಸುವ ಒಂದು ಸಾಕ್ಷರತಾ ಹೋರಾಟದ ಕಥೆಯಾಗಿದೆ. ಈ ದಲಿತ ಹುಡುಗ ಹೈಸ್ಕೂಲು ಸೇರಲು ಉಪವಾಸ ವ್ರತ ಕೈಕೊಂಡು, ಮಂತ್ರಿಗಳವರೆಗೆ ಅವನ ಈ ಹೋರಾಟ ತಲುಪಿ, ಕೊನೆಗೆ ಶಾಲೆ ಸೇರುತ್ತಾನೆ. ಇದನ್ನು ನಾಗತಿಹಳ್ಳಿ ಚಂದ್ರಶೇಖರ ಅವರು "ಕೊಟ್ರೇಶಿ ಕನಸು" ಎಂಬ ಸುಂದರ ಚಲನಚಿತ್ರವನ್ನಾಗಿ ನಿರ್ದೇಶಿಸಿದರು. ಅತ್ಯುತ್ತಮ ಪ್ರಶಸ್ತಿಯಾದ ರಾಷ್ಟ್ರಪ್ರಶಸ್ತಿಯನ್ನು ಜೊತೆಗೆ ಹಲವಾರು ಪ್ರಶಸ್ತಿಗಳನ್ನು ಇದು ಪಡೆದಿದೆ. 'ರತ್ನಾಕರ, ಮುದ್ದಣ' ಪ್ರಶಸ್ತಿಯನ್ನು ೧೯೯೩ರಲ್ಲಿ ಪಡೆದುಕೊಳ್ಳುವುದರ ಜೊತೆಗೆ ಯಶಸ್ವಿ ಕಾದಂಬರಿಯಾಗಿ ಹಾಗೂ ಚಲನಚಿತ್ರವಾಗಿ ಮೆಚ್ಚಿಗೆಗೆ ಪಾತ್ರವಾಗಿದೆ.

**ಹನುಮ**

ಈ ಕಾದಂಬರಿಯು ತೆಲುಗು ಚಲನಚಿತ್ರಗಳಿಂದ ಪ್ರೇರೇಪಿತರಾಗಿ ಬರೆದಂತಹ ಕಾದಂಬರಿಯಾಗಿದೆ. ಈ ಕಾದಂಬರಿಯನ್ನು ಓದಿದರೆ ತೆಲುಗು ಜಮೀನ್ದಾರಿ ಚಿತ್ರವನ್ನು ನೋಡಿದ ಅನುಭವವಾಗುತ್ತದೆ. ಕಾದಂಬರಿಯ ನಾಯಕನಾದ ಹನುಮನು ಯಜಮಾನ ಸಂಸ್ಕೃತಿಗೆ ಬಲಿಯಾಗಿ, ನಂತರ ಅವರ ವಿರುದ್ಧ ಸಿಡಿದು ನಿಂತು ಅನೇಕ ಜಮೀನ್ದಾರರನ್ನು ಸರ್ವನಾಶ ಮಾಡಿ, ಕೊನೆಗೆ ತಾನೊಬ್ಬ ಅತ್ಯಂತ ಅಂತಃಕರಣ ವ್ಯಕ್ತಿಯಾಗಿ ಬದಲಾದ ನಾಯಕನಾಗುವುದು. ಸಿನಿಮೀಯ ರೀತಿಯ ಕಥೆಯ ಓಟ, ಕಾದಂಬರಿಯ ಕಥಾವಸ್ತು ಎಲ್ಲವೂ ಅತ್ಯಂತ ನಾಟಕೀಯವಾಗಿ ಕಂಡು ಬರುತ್ತವೆ.

**ಶಾಮಣ್ಣ**

ಈ ಕಾದಂಬರಿಯು ಕುಂ.ವೀ. ಅವರ ಈವರೆಗಿನ ಎಲ್ಲಾ ಕಾದಂಬರಿಗಳನ್ನು ಮೀರಿಸಿ ಶ್ರೇಷ್ಠವಾದ ಕನ್ನಡದ ಕಾದಂಬರಿಗಳ ಸಾಲಿನಲ್ಲಿ ನಿಲ್ಲುವ ಕಾದಂಬರಿಯಾಗಿದೆ. ಈ ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಬಹುಮಾನವೂ ಬಂದಿದೆ. ಈ ಕಾದಂಬರಿಯನ್ನು ಈ ಅಧ್ಯಯನದಲ್ಲಿ ಮುಂದೆ ವಿಶ್ಲೇಷಣೆಗೆ ಎತ್ತಿಕೊಳ್ಳಲಾಗುವುದು.

**೨.೧೦.೧೩. ಯಾಪಿಲ್ಲು**

ಈ ಕಾದಂಬರಿಯು ಭಾರತದಲ್ಲಿ ಬ್ರಿಟಿಷ್ ವಸಾಹತುಶಾಹಿ ಆಡಳಿತ ನಂತರ ಅವರ ಪ್ರಭಾವಕ್ಕೆ ಸಿಕ್ಕು ಮೂಲಭೂತ ಸೌಕರ್ಯಗಳಿಲ್ಲದ ಹಳ್ಳಿಯಲ್ಲೂ ಜಾಗತೀಕರಣದ ಪ್ರಭಾವಕ್ಕೆ ಸಿಕ್ಕು 'ಇಂಗ್ಲಿಷ್' ಎಂಬ ಭಾಷೆ ಭಾರತದ ವಿದ್ಯಾಭ್ಯಾಸದಲ್ಲಿ ಸೇರಿಕೊಂಡರೆ ಎಂಥಾ ಅನಾಹುತಗಳಾಗುತ್ತವೆ ಎಂಬುದನ್ನು ದಲಿತ ಹುಡುಗಿ ಶಾಲೆ ಸೇರಿ ಇಂಗ್ಲಿಷ್ ಕಲಿಯಲು ಪ್ರಾರಂಭಿಸಿದಾಗ ಆಗುವ ಸಾಂಸ್ಕೃತಿಕ ಹೋರಾಟವನ್ನು ಅತ್ಯಂತ ಜತನದಿಂದ ಕೈಗೊಂಡಿದೆ. ಈ ಕಾದಂಬರಿಯನ್ನು ಕುರಿತು ಬಾಳಾಸಾಹೇಬ ಲೋಕಾಪುರ ಅವರು ಹೀಗೆ ಹೇಳಿದ್ದಾರೆ: "ಯಾಪಿಲ್ಲು ಕನ್ನಡ, ಹಳೆಗನ್ನಡ, ಸಂಸ್ಕೃತ, ತೆಲುಗು, ಇಂಗ್ಲಿಷ್ ಅತಿಶಯೋಕ್ತಿ ಕವಿಸಮಯಗಳ ಅತಿರಂಚಿತ ನಿರೂಪಣಾ ಶೈಲಿಯಲ್ಲಿ ನಾಡಬಾಂಬುಗಳನ್ನು ಮಾಡುವಂತಹ ಜನರಿರುವ ವಾಗಿಲಿಯಲ್ಲಿ ಇಂಗ್ಲಿಷ್ ಪ್ರವೇಶಿಸಿದರೆ ಆಗುವ ಸಾಂಸ್ಕೃತಿಕ ಅನಾಹುತಗಳ ಕಾಮಿಕ್ ಕಥನಕವೇ "ಯಾಪಿಲ್ಲು."[೨೩]

**ಅರಮನೆ**

ಕುಂ.ವೀ. ಅವರ ಉತ್ತಮ ಕಾದಂಬರಿ ಇದಾಗಿದೆ. ಇದು ಹದಿನೆಂಟನೆಯ ಶತಮಾತದ ಬ್ರಿಟಿಷ್ ಆಡಳಿತದ ಸಂದರ್ಭದಲ್ಲಿ ಮಾನವತಾವಾದಿಯಾದ ಸರ್. ಥಾಮಸ್ ಮನ್ರೋನ ಜನಪರವಾದ ಆಡಳಿತ ಹಾಗೂ ಪಾಳೇಗಾರರ ಆಡಳಿತ ನಂತರ ದಿನಗಳಲ್ಲಿ ಪಾಳೇಗಾರರು

ಹೇಗೆ ಬ್ರಿಟಿಷರ ಹಿಡಿತಕ್ಕೆ ಸಿಕ್ಕು ತಮ್ಮ ಅಧಿಕಾರ ಕಳೆದುಕೊಂಡರು, ಹೇಗೆ ಬದುಕಿ ಬಾಳಿದರು ಎಂಬುದರ ವಾಸ್ತವದ ವಿವರಣೆಗಳಿಂದ ಕೂಡಿದ ಕಥಾನಕವೇ ಈ ಅರಮನೆ. ಮುಂದೆ ಈ ಕಾದಂಬರಿಯನ್ನು ವಿವರವಾಗಿ ವಿಶ್ಲೇಷಣೆಗೆ ಒಳಪಡಿಸಲಾಗುವುದು.

**ಹೇಮರೆಡ್ಡಿ ಮಲ್ಲಮ್ಮನ ಕಥೆಯು**

ಈ ಕಾದಂಬರಿಯನ್ನು ಓ.ಎಲ್.ನಾಗಭೂಷಣಸ್ವಾಮಿಯವರು 'ದುಸ್ವಪ್ನಗಳ ಪರಿಶೆ' ಎಂದು ಕರೆದಿದ್ದಾರೆ. ಭೂಪಟಕ್ಕೂ ತನ್ನ ಅಸ್ತಿತ್ವದ ಸುಳಿವು ನೀಡದಿರುವ ವಾಗಿಲಿಯಲ್ಲಿ ನಡೆಯುವ ಹೇಮರೆಡ್ಡಿ ಮಲ್ಲಮ್ಮ ನಾಟಕ ಮತ್ತು ಅದರ ಶತದಿನೋತ್ಸವ ಕಥೆಯ ಬೀಜ ಅದು ಬೆಳೆದು ಮಹಾವೃಕ್ಷವಲ್ಲ ಹಲವು ಕತೆಗಳ ತರುರಾಜಿಯಾಗಿ ವಿಸ್ತರಿಸಿಕೊಂಡಿದೆ. ವಾಗಿಲಿಗೆ ಬರುವ ನಾಟಕ ದುತ್ತು ನಟಿ ಪದ್ಮಾವತಿಯರು ನೆಪವಾಗಿ ಇಡೀ ವಾಗಿಲಿಗೆ ದಣಿಗಳ, ಕೊಲೆಗಡುಗರ, ರಾಜಕೀಯದ, ಜನಸಾಮಾನ್ಯರ ಬದುಕು ತೆರೆದುಕೊಳ್ಳುತ್ತದೆ. 'ವಾಗಿಲಿ' ಎಂಬ ತ್ರಿಕೋನಾಕೃತಿಯ ಮೂರು ಮೂಲೆಯಲ್ಲಿ ಪ್ರೇಮ, ಹಿಂಸೆ, ತ್ಯಾಗ ಅದರ ಒಳ ಆವರಣದಲ್ಲಿ ಮೃಗೀಯ ಗ್ರಾಮೀಣ ಬದುಕು ತಮ್ಮ ಹೆಸರು ಗೊತ್ತಿರಬಹುದಾದ ಆದರೆ ಈ ದೇಶದ ಹೆಸರು ತಿಳಿದಿಲ್ಲದ ಸದಾ 'ಸಾಮಾಜಿಕ ಅವಗಡಕ್ಕೆ ಗುರಿಯಾಗುತ್ತಲೇ ಇರುವ' ಶಿಕ್ಷಣವಂಚಿತ ಪ್ರಜೆಗಳ ಗುಂಪನ್ನು ಮಲ್ಲಮ್ಮ ಕಲಕಿದ ಪರಿಯನ್ನು ವಾಗಿಲಿಯ ಶಿಕ್ಷಕ ನಿರೂಪಕ ತನ್ನ ಗೆಳೆಯ ತೆಲುಗಿನ ಕತೆಗಾರ ಬರೆದ ಕಾದಂಬರಿಯ ಮೂಲಕ ಕಡೆದಿಡುತ್ತಾನೆ."೨೪

ಹೀಗೆ ಕುಂ.ವೀ. ಅವರು ದಲಿತ ಬಂಡಾಯ ಸಾಹಿತ್ಯಕ್ಕೆ ಕಥೆ ವಸ್ತು, ಭಾಷೆ, ಅಭಿವ್ಯಕ್ತಿಯಲ್ಲಿ ಕನ್ನಡ ಭಾಷೆಗೆ ಮಹತ್ತರವಾದ ಕೊಡುಗೆ ನೀಡಿದ್ದಾರೆ. ಇವರು ಸೃಜನಶೀಲ ಬರಹಗಳಲ್ಲಿ ಗ್ರಾಮೀಣ ಭಾರತದ ಶೋಷಣೆ, ದೌರ್ಜನ್ಯ, ಹಸಿವು, ಸಂಕಟ, ಅವರ ಹೋರಾಟಗಳು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಹಸಿವಿನ ಹೋರಾಟದ ಕಥನಗಳಲ್ಲಿ ಹೃದಯಕ್ಕೆ ತಟ್ಟುವಂತೆ, ಮನ ಕಲಕುವಂತೆ ಹಸಿವಿನ ಘೋರ ಚಿತ್ರಣವನ್ನು ನೀಡಿದ್ದಾರೆ.

**ನಿಜಲಿಂಗ: ಅದ್ಭುತ-ರಮ್ಯ ಕಥಾನಕ**

ವಸ್ತು ಸಮಕಾಲೀನ, ಭಾಷಾಶೈಲಿ ಹಳೆಯ ಕಾವ್ಯಗಳ, ಕಾದಂಬರಿಗಳ, ಕಥಾನಕಗಳ ಮಾದರಿಯದು. ಮೂರು ತಲೆಮಾರಿನ ಕಥೆ. ಎಲ್ಲಾ ಜಾತಿ, ವರ್ಗ, ಸಮುದಾಯಗಳ ಪಾತ್ರಗಳಿವೆ. ಇದೊಂದು ಅದ್ಭುತ ರಮ್ಯ ಕಥಾನಕವಾಗಿ ಮೂಡಿಬಂದಿದೆ. ತಾಯಿಗರ್ಭದಲ್ಲೇ ಇದ್ದಾಗ ತಂದೆ ಕಳೆದುಕೊಂಡು ಹುಟ್ಟಿದ ಮೇಲೆ ತಾಯಿಯಿಂದಲೂ ತಿರಸ್ಕಾರಕ್ಕೆ ಒಳಗಾಗಿ ಅನಂತರ ಒಬ್ಬಳನ್ನು ಪ್ರೀತಿಸಿ ಮದುವೆಯಾಗುವ ನಿಜಲಿಂಗನ ಸಾಹಸದ ಕಥೆ. ಸಮಕಾಲೀನ ಮಿಶ್ರಭಾಷೆಗಳಿಂದ ಅಲ್ಲಲ್ಲಿ ಹಾಸ್ಯ ತರುತ್ತಾರೆ.

### ೪.೨.೪. ವಿಮರ್ಶೆ ಹಾಗೂ ವೈಚಾರಿಕ ಲೇಖನಗಳು

ಕುಂ.ವೀ. ಅವರ ಸೃಜನೇತರ ಸಾಹಿತ್ಯದಲ್ಲಿ ವಿಮರ್ಶಾ ಪ್ರಬಂಧಗಳು, ಜೀವನಚರಿತ್ರೆ ಮತ್ತು ಇತರ ಅನುವಾದ ಸಾಹಿತ್ಯವನ್ನು ಕಾಣಬಹುದಾಗಿದೆ.

ಕುಂ.ವೀ. ಅವರು ಸಂಕ್ರಮಣ ಪತ್ರಿಕೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಹಂಪಿ ಕನ್ನಡ ವಿಶ್ವವಿದ್ಯಾಲಯ ಪ್ರಕಟಣೆ ಮುಂತಾದವುಗಳಲ್ಲಿ ಇವರ ವಿಮರ್ಶಾ ಲೇಖನಗಳು ಪ್ರಕಟಗೊಂಡಿವೆ. ಇವರು ತಮ್ಮ 'ನಾನು ಮತ್ತು ನನ್ನ ಕಥಾಸಾಹಿತ್ಯ' ಎಂಬ ಲೇಖನದಲ್ಲಿ ಕುಂ.ವೀ. ಅವರು ತಮ್ಮ ಕಥಾಸಾಹಿತ್ಯಕ್ಕೆ ಎಲ್ಲಿಂದ ಪ್ರೇರಣೆ ಪಡೆದೆ. ತಮ್ಮ ಮೇಲೆ ಪ್ರಭಾವ ಬೀರಿದ ವ್ಯಕ್ತಿಗಳು, ಪರಿಸರ ಹಾಗೂ ಸಮಾಜದಲ್ಲಿ ನಡೆಯುವ ಅನ್ಯಾಯ, ಖಂಡಿಸುವುದರ ಜೊತೆಗೆ ಹಳ್ಳಿಯ ಬಗೆಗೆಗಿನ ಕಳಕಳಿ, ಹಳ್ಳಿ ಹಳ್ಳಿಗೂ ಮೂಲಭೂತ ಅವಶ್ಯಕತೆಗಳಾದ ನೀರು ಕೊಡಲಾಗದ ಸರಕಾರ ಪ್ರತಿಹಳ್ಳಿಗೂ ಸಾರಾಯಿ ಸಿಗುವಂತೆ ಮಾಡಿರುವುದನ್ನು ಅತ್ಯಂತ ವ್ಯಂಗ್ಯವಾಗಿ ವಿಶ್ಲೇಷಿಸಿದ್ದಾರೆ. ಅಸಂಘಟಿತ ಕಾರ್ಮಿಕರ ಮೇಲಾಗುವ ದೌರ್ಜನ್ಯಗಳು, ಇದರಿಂದ ಅವರಲ್ಲಿ ಬೆಳೆಯುತ್ತಿರುವ ಗೂಂಡಾ ಪ್ರವೃತ್ತಿ ಹಾಗೂ ಕಾರ್ಮಿಕ ವಲಯದಲ್ಲಿ ಮೇಲಧಿಕಾರಿಗಳು ಹೆಣ್ಣುಮಕ್ಕಳ ಮೇಲೆ ನಡೆಸುವ ದಬ್ಬಾಳಿಕೆ, ಅವರನ್ನು ತಮ್ಮ ದಾಹಕ್ಕೆ ಬಳಸಿಕೊಳ್ಳುವ ರೀತಿ ಇವುಗಳನ್ನೆಲ್ಲಾ ಬಹಳ ವಾಸ್ತವಿಕವಾಗಿ ತಮ್ಮ ಲೇಖನದಲ್ಲಿ ವ್ಯಕ್ತಪಡಿಸಿದ್ದಾರೆ.

### ಆಧುನಿಕ ತೆಲುಗು ಸಾಹಿತ್ಯದಲ್ಲಿ ಜನಪರ ಆಶಯ

ಬಳ್ಳಾರಿಯ ಗಡಿಭಾಗದ ಹಳ್ಳಿ ಹಿರೇಹಾಳು ಹಾಗೂ ಆಂಧ್ರದಲ್ಲಿ ಶಾಲಾಶಿಕ್ಷಕರಾಗಿ ಕರ್ತವ್ಯ ನಿರ್ವಹಿಸಿದ ಲೇಖಕರು, ಅಲ್ಲಿಯ ಪರಿಸರದಿಂದ ಸಾಕಷ್ಟು ಪ್ರಭಾವಿತರಾಗಿದ್ದಾರೆ. ತೆಲುಗಿನ 'ಅಭ್ಯುದಯ ಸಾಹಿತ್ಯ' ಹಾಗೂ ಆಧುನಿಕ ಸಾಹಿತ್ಯವನ್ನು ಆಳವಾಗಿ ಅಧ್ಯಯನ ಮಾಡಿದ್ದಾರೆ. ಅಲ್ಲಿಯ ನಕ್ಸಲ್ಬರಿ ಹೋರಾಟಗಳಿಂದ ಪ್ರಭಾವಿತರಾಗಿ ಅಲ್ಲಿನ ಫ್ಯೂಡಲ್ ವ್ಯವಸ್ಥೆಯ ವಿರುದ್ಧ ಅನೇಕ ಕಥೆಗಳನ್ನು ವಿಮರ್ಶಾ ಕೃತಿಗಳನ್ನು ಬರೆದಿದ್ದಾರೆ. ತೆಲುಗು ದಿಗಂಬರ ಸಾಹಿತ್ಯ, ವಿಪ್ಲವ ಸಾಹಿತ್ಯಕ್ಕೆ ಅಲ್ಲಿಯ ಹೋರಾಟಗಳೇ ಕಾರಣ. ಕವಿಗಳು ಒಂದು ಕಾಲನ್ನು ಸೆರೆಮನೆಯಲ್ಲಿಟ್ಟು ಅವರು ಹೋರಾಟದಲ್ಲಿ ತೊಡಗಿಕೊಂಡೇ ಸಾಹಿತ್ಯವನ್ನು ಸೃಷ್ಟಿ ಮಾಡಿಸಿದ್ದಾರೆ. ತೆಲುಗಿನ ಸಾಹಿತ್ಯಕ್ಕೆ ಇಂತಹ ಬಲವಾದ ಹಿನ್ನೆಲೆ ಇದೆ. ಮಾರ್ಕ್ಸ್ ಮತ್ತು ಮಾವೋರಂತಹವರ ವಿಚಾರಗಳು ಮತ್ತು ಅಂತಹ ವಿಚಾರಗಳಿಂದ ಜಮೀನ್ದಾರಿ ವಿರೋಧಿ ಹೋರಾಟದ ನಿಲುವುಗಳಿಂದ ಪ್ರೇರಣೆ ಪಡೆದು ತೆಲುಗು ಸಾಹಿತ್ಯ ಬೆಳವಣಿಗೆ ಹೊಂದಿರುವುದನ್ನು ಈ ಲೇಖನಗಳಲ್ಲಿ ಗುರುತಿಸಲಾಗಿದೆ.

**ಜಮೀನ್ದಾರಿ ವ್ಯವಸ್ಥೆ ಮತ್ತು ತೆಲುಗು ಸಾಹಿತ್ಯ**

ಕುಂ.ವೀ. ಅವರ ಈ ವಿಮರ್ಶಾಕೃತಿಯಲ್ಲಿ ಯಜಮಾನ ಸಂಸ್ಕೃತಿಯ ಅನಾವರಣವನ್ನು ಕಾಣಬಹು ದಾಗಿದೆ. ಹೇಗೆ ಶೋಷಕರು ಮತ್ತು ಶೋಷಿತರ ನಡುವೆ ಹೆಜಮನಿ ಹೇಗೆ ಕೆಲಸ ಮಾಡುತ್ತದೆ ಎಂಬುದನ್ನು ವಿವರಿಸಲಾಗಿದೆ. ಕುಂ.ವೀ. ಅವರೇ ಹೇಳುವಂತೆ "ಸಮಾಜದಲ್ಲಿ ಎರಡು ರೀತಿಯ ವರ್ಗಗಳನ್ನು ಮತ್ತು ಎರಡು ರೀತಿಯ ಸಾಹಿತ್ಯವನ್ನು ಕಾಣುತ್ತೇವೆ. ಒಂದು ಆಳುವ ವರ್ಗ; ಇದು ಅಧಿಕಾರಶಾಹಿಯ ಆಡಳಿತವನ್ನು ತಿಳಿಸುತ್ತದೆ. ಇನ್ನೊಂದು ಶ್ರಮಿಕವರ್ಗ; ಇದು ಅಧಿಕಾರಿ ಶಾಹಿಯ ಅಧೀನಕ್ಕೆ ಒಳಗಾಗಿ ಕಾರ್ಯ ನಿರ್ವಹಿಸುತ್ತದೆ. ಅಧಿಕಾರವರ್ಗದ ಸಾಹಿತ್ಯದಲ್ಲಿ ಪುರಾಣ, ಉಪನಿಷತ್ತು ಮುಖ್ಯವಾಗಿ ಕಾಣಿಸುತ್ತದೆ. ಆದರೆ ದುಡಿಯುವ ವರ್ಗದ ಸಾಹಿತ್ಯದಲ್ಲಿ ಮಾರ್ಕ್ಸ್, ಲೆನಿನ್, ಮಾವೋ ಸಿದ್ಧಾಂತಗಳು ಮುಖ್ಯವಾಗಿ ಕಾಣಿಸುತ್ತವೆ"[೨೫] ಎಂದು ಅವರು ಅಭಿಪ್ರಾಯ ಪಡುತ್ತಾರೆ. ಜಮೀನ್ದಾರಿ ವ್ಯವಸ್ಥೆಯಲ್ಲಿ ರೈತರು ಭೂಮಿಗಾಗಿ ಹೋರಾಟ ಮಾಡುವ 'ಪೋಡು ಸಾಗುವಳಿ ಪದ್ಧತಿ', 'ಬಿಟ್ಟಿಚಾಕರಿ' ಮುಂತಾದವುಗಳನ್ನು ಈ ಲೇಖನದಲ್ಲಿ ಗಹನವಾಗಿ ಚರ್ಚಿಸಿದ್ದಾರೆ. ಈ ಎಲ್ಲಾ ವಿಷಯಗಳು ಅವರ ಕಥೆಗಳ ಹಿನ್ನೆಲೆಯಲ್ಲಿದ್ದು ಅವರನ್ನು ಒಬ್ಬ ವಿಭಿನ್ನ ಲೇಖಕನನ್ನಾಗಿ ರೂಪಿಸಿದೆ.

**ನವ್ಯರನ್ನು ಕುರಿತು ನವ್ಯೋತ್ತರದ ನನ್ನ ಅನಿಸಿಕೆಗಳು**

ಈ ಲೇಖನದಲ್ಲಿ ಕುಂ.ವೀ. ಅವರು ತಮ್ಮ ಕಥೆಗಳ ಬಗ್ಗೆ ಮತ್ತು ಇತರರ ಕಥೆಗಳ ಬಗ್ಗೆ ಈ ರೀತಿ ಹೇಳುತ್ತಾರೆ. ಕಥೆಯಲ್ಲಿ ವಸ್ತು, ಭಾಷೆ ಮತ್ತು ತಂತ್ರಕ್ಕಿಂತ ಕೃತಿ ಸಮಾಜಕ್ಕೆ ಏನು ಹೇಳುತ್ತದೆ ಎನ್ನುವುದು ಮುಖ್ಯವಾಗುತ್ತದೆ. ಕೃತಿಯನ್ನು ಅದರ ವಸ್ತುವಿನ ಪರಿಣಾಮದ ಹಿನ್ನೆಲೆಯಲ್ಲಿ ಚರ್ಚಿಸಬೇಕೇ ಹೊರತು, ಪೂರ್ವಗ್ರಹಪೀಡಿತರಾಗಿ ವಿಮರ್ಶಿಸಬಾರದು ಎಂದು ಹೇಳಿದ್ದಾರೆ. ಕನ್ನಡದ ವಿಮರ್ಶೆಯ ಬಗ್ಗೆ ಅವರಿಗೆ ಸಮಾಧಾನವಿಲ್ಲ.

**ವಡ್ಡಾರಾಧನೆ-ನನ್ನ ಓದು**

ಕನ್ನಡದ ಮೊಟ್ಟ ಮೊದಲ ಗದ್ಯಕೃತಿಯಾದ 'ವಡ್ಡಾರಾಧನೆಯ' ಕರ್ತೃ ಕೊಟ್ಟೂರಿನ ಸಮೀಪ ಅಂದರೆ ೧೪ ಕಿ.ಮೀ. ಇರುವ ಕೋಗಳಿ(ಕೋಗಿಲೆ) ಎನ್ನುವ ಊರಿನವನು. ಕುಂ.ವೀ. ಅವರು ಬಹು ಅಭಿಮಾನದಿಂದಲೂ ಪ್ರೀತಿಯಿಂದಲೂ ಈ ಕೃತಿಯ ಅಧ್ಯಯನವನ್ನು ಮಾಡಿದ್ದಾರೆ. ಈ ವಡ್ಡಾರಾಧನೆಯ ಕಥೆಗಳು ಜೈನಧರ್ಮ ಪ್ರಚಾರಕ್ಕೆ ಸೃಷ್ಟಿಗೊಂಡಂತವುಗಳಾಗಿವೆ ಎಂದು ತಿಳಿಸುತ್ತಾ ಜೊತೆಗೆ ಈ ಕೃತಿಯು ಸಾಹಿತ್ಯ ಮತ್ತು ಕಲೆಗಳನ್ನು ತಿಳಿಸುವುದರ ಜೊತೆಗೆ ಧಾರ್ಮಿಕ ಕೇಂದ್ರಗಳ ಊಳಿಗಮಾನ್ಯ ವ್ಯವಸ್ಥೆಗೆ ಪೂರಕವಾಗಿ ದುಡಿದಿರುವುದನ್ನು ಕಾಣುತ್ತೇವೆ ಎಂಬ ಅಭಿಪ್ರಾಯವನ್ನು ಸೂಚಿಸುತ್ತಾರೆ. ಈ ಕೃತಿಯು ಅದ್ಭುತ ಕತೆಗಳ

ಕಣಜವಾಗಿದೆ; ಸಾರ್ವಕಾಲಿಕ ಮೌಲ್ಯಗಳನ್ನು ಕೃತಿಯು ಪ್ರಕಟಿಸುತ್ತದೆ ಎಂದೂ ಅಭಿಪ್ರಾಯ ಪಟ್ಟಿದ್ದಾರೆ.

**ನನ್ನನ್ನು ಲೇಖಕನನ್ನಾಗಿ ರೂಪಿಸಿದ ಪರಿಸರ**

ಕುಂ.ವೀ. ಅವರು ಹೇಳುವಂತೆ ತಮ್ಮನ್ನು ಕಥೆಗಾರನನ್ನಾಗಿ ರೂಪಿಸಿದ್ದು ತಾವು ಬಾಳಿ ಬದುಕಿದ ಪರಿಸರ ಕೊಟ್ಟೂರು. ಸುತ್ತಮುತ್ತಲ ಹಳ್ಳಿ, ಅಲ್ಲಿಯ ಜನರ ಬಡತನ, ನಿರುದ್ಯೋಗ, ಹಸಿವು, ಜಾತಿ, ವರ್ಗಕಲಹಗಳು ಹಾಗೂ ಕರ್ನಾಟಕ ಆಂಧ್ರದ ಗಡಿಭಾಗದ ಹಳ್ಳಿಗಳು, ಅಲ್ಲಿಯ ಜನರ ಅಸಹಾಯಕತೆ, ಜಮೀನ್ದಾರರ ಕ್ರೌರ್ಯ, ದೌರ್ಜನ್ಯ, ದಬ್ಬಾಳಿಕೆ ಎನ್ನುತ್ತಾರೆ. ಈ ಎಲ್ಲ ವಿವರಗಳನ್ನು ಅವರು ತಮ್ಮ ಕತೆಗಳಲ್ಲಿ ಕಾಣಿಸುತ್ತಾರೆ. ವಾಸ್ತವಕ್ಕೂ ಕಥೆಗೂ ವ್ಯತ್ಯಾಸವಿಲ್ಲದಷ್ಟು ಅವರ ಕಥೆಗಳು ಜೀವನಕ್ಕೆ ಹತ್ತಿರವಾಗಿವೆ. ವರ್ತಮಾನದ ಭೀಕರ ವಾಸ್ತವದೊಂದಿಗೆ ರಾಜಿ ಮಾಡಿಕೊಂಡಂತೆ ಬದುಕುವುದು ಲೇಖಕರಿಗೆ ಮುಖ್ಯವೆನಿಸುತ್ತದೆ. ಬಹಳ ಹತ್ತಿರದಿಂದ ಜಮೀನ್ದಾರರ ಜೀವನವನ್ನು ಕಂಡು ಅದರ ಒಳಹೊರಗನ್ನು ಸೂಕ್ಷ್ಮವಾಗಿ ಗ್ರಹಿಸಿ ತಮ್ಮ ಕೃತಿಗಳಲ್ಲಿ ಕಾಣಿಸಿದ್ದಾರೆ. ಲೇಖಕರ ಕ್ರಿಯಾಶೀಲತೆಯ ಬಗ್ಗೆ ನಂಬಿಕೆ ಇರುವ ಕುಂ.ವೀ. ಸಮಾಜದ ವರ್ತಮಾನದ ದುಸ್ಥಿತಿಯನ್ನು ಚಿತ್ರಿಸುವುದು, ಅದಕ್ಕೆ ಮಿಡಿಯದೆ ಇರುವ ಲೇಖಕರ ಬಗ್ಗೆ ವಿಷಾದ ಪಡುವುದು ಬಂಡಾಯ ಸಾಹಿತ್ಯ ದೃಷ್ಟಿಯಿಂದ ಸಹಜವಾಗಿದೆ. ಆದರೆ ಸಾಹಿತ್ಯ ಮತ್ತು ಸಮಾಜ ಬದಲಾವಣೆಯ ವಿಷಯದಲ್ಲಿ ಅನೇಕ ಭಾವುಕ ಹೇಳಿಕೆಗಳು ಈ ಲೇಖನದಲ್ಲಿ ಕಂಡುಬರುತ್ತವೆ.

**೪.೨.೫. ಜೀವನಚರಿತ್ರೆಗಳು**

ಕುಂ.ವಿ. ಅವರು ಅತ್ಯಂತ ಪ್ರೀತಿಯಿಂದ ಗಣ್ಯವ್ಯಕ್ತಿಗಳ ಜೀವನಚರಿತ್ರೆಯನ್ನು ರಚಿಸಿದ್ದಾರೆ. ಇವರಿಗೆ ಅತ್ಯಂತ ಪ್ರಿಯವಾದ ವ್ಯಕ್ತಿ ಚಾರ್ಲಿ ಚಾಪ್ಲಿನ್. ಈತನ ಜೀವನಚರಿತ್ರೆ ಸರಳ ಮತ್ತು ನೈಜ ಬದುಕಿನ ಕೃತಿಯಾಗಿದೆ. ಹಾಗೆಯೇ ಸುಭದ್ರಮ್ಮ ಮನ್ಸೂರು, ಸುಭಾಷ್ಚಂದ್ರಭೋಸ್, ರಾಹುಲ್ ಸಾಂಕೃತ್ಯಾಯನ, ಶ್ರೀಕೃಷ್ಣದೇವರಾಯ ವ್ಯಕ್ತಿಗಳ ಜೀವನಚರಿತ್ರೆಗಳನ್ನು ರಚಿಸಿದ್ದಾರೆ.

**ಚಾಪ್ಲಿನ್**

ಕುಂ.ವೀರಭದ್ರಪ್ಪನವರು ಜಗತ್ತಿನ ಸರ್ವಶ್ರೇಷ್ಠ ಮಹಾನ್ ಹಾಸ್ಯ ನಟ ಚಾರ್ಲಿ ಚಾಪ್ಲಿನ್ ಜೀವನ ಮತ್ತು ಸಾಧನೆಯನ್ನು ಕುರಿತು ಚಾಪ್ಲಿನ್ ಎಂಬ ಮಹಾ ಕೃತಿಯನ್ನು ಕನ್ನಡ ಸಾಹಿತ್ಯ ಲೋಕಕ್ಕೆ ಪರಿಚಯಿಸುವುದರ ಮೂಲಕ ಚಾಪ್ಲಿನ್ ಎಲ್ಲರಿಗೂ ಸೇರಿದವ ಎಂಬ ಸಂದೇಶವನ್ನು ಕೊಟ್ಟಿದ್ದಾರೆ. ಜಾಗತಿಕ ಸಮಾಜವನ್ನು ಶತಶತಮಾನಗಳ ಕಾಲ ಚಲನಚಿತ್ರಗಳ ಮೂಲಕ ಆಳುವ ಏಕಮಾತ್ರ ಸಾಮ್ರಾಟ ಯಾರು ಎಂದು ಪ್ರಪಂಚದ ಯಾವುದೇ ಜೀವನಶೈಲಿಯ

ಯಾವುದೇ ವ್ಯಕ್ತಿಯನ್ನು ಕೇಳಿದರೆ ಅವನು ಯೋಚಿಸಿದೆ ಹೇಳುತ್ತಾನೆ 'ಚಾರ್ಲಿ ಚಾಪ್ಲಿನ್' ಎಂದು ಐದು ವರ್ಷದ ಮಗು ಹೇಳುತ್ತೆ ತೊಂಬತ್ತು ವರ್ಷದ ವೃದ್ಧರೂ ಹೇಳುತ್ತಾರೆ. 'ಚಾರ್ಲಿ ಚಾಪ್ಲಿನ್' ಬಗ್ಗೆ ಆ ಮಹಾನ್ ಕಲಾವಿದನ ಆ ಮಾನವಪ್ರೇಮಿಯನ್ನು ಆಬಾಲವೃದ್ಧರಾಗಿ ಎಲ್ಲರೂ ಇಷ್ಟಪಡುವ ಶ್ರೇಷ್ಠನಟ 'ಮೇಕಿಂಗ್ ಎ ಲಿವಿಂಗ್' ಎಂಬ ಒಂದು ರೀತಿಯ ಕಿರುಚಿತ್ರದಿಂದ ಹಿಡಿದು 'ಎ ಕೌಂಟೀಸ್ ಫ್ರಮ್ ಹಾಂಕಾಂಗ್'ವರೆಗೆ ಯಾವ ಚಿತ್ರ ನೋಡಿದರೂ ಅದು ಪ್ರೇಕ್ಷಕನ ಅಂತಃಕರಣವನ್ನು ಅನನ್ಯ ರೀತಿಯಲ್ಲಿ ಕಲಕುತ್ತದೆ. ಸಂತೋಷ, ವಿಷಾದ, ಕಸಿವಿಸಿ, ನಿಟ್ಟುಸಿರು, ಬಿಸಿಯುಸಿರು ಇವೆಲ್ಲವನ್ನು ಪ್ರೇಕ್ಷಕ ಅನುಭವಿಸುತ್ತಲೇ ಹೋಗುತ್ತಾನೆ. ಶಾಟ್‌ನಿಂದ ಶಾಟ್‌ಗೆ ಚಾಪ್ಲಿನ್ ಅಂತರಂಗದ ಆಳಕ್ಕೆ ಇಳಿಯುತ್ತಲೇ ಹೋಗುತ್ತಾನೆ. ಅಲ್ಲಿ ಅವನು ಹುಟ್ಟು ಹಾಕುವ ತಳಮಳ ಅಸಾಧಾರಣವಾದುದು. ಚಲನಚಿತ್ರ ಮಾಧ್ಯಮಕ್ಕೆ ಸುವರ್ಣಚೌಕಟ್ಟು ಹಾಕಿ ಮಾನವೀಯತೆಯ ಹೊಸ ಹೊಸ ಭಾಷ್ಯ ಬರೆದ ಚಾಪ್ಲಿನ್‌ನ ವ್ಯಕ್ತಿತ್ವವೇ ನಿಗೂಢ. ಅವನು ಅನುಕಂಪದ, ಅಂತಃಕರಣದ ಮಾನವೀಯತೆಯ ನಿಘಂಟು. ಭಾಷೆ, ಕಾಲಮಾನ, ವಯೋಮಾನಗಳ ಎಲ್ಲೆ ಮೀರಿ ತಣ್ಣಗೆ ಆವರಿಸಿ ಬಿಡುವ ಆ ಟ್ರಾಂಪ್‌ನೊಳಗೆ ತತ್ವಜ್ಞಾನಿ ಇದ್ದಾನೆ. ಸಮಾಜಶಾಸ್ತ್ರಜ್ಞ ಇದ್ದಾನೆ. ಸಮಾಜ ಸುಧಾರಕನಿದ್ದಾನೆ. ಅಲ್ಲದೆ ನಮ್ಮೆಲ್ಲರ ಅಣ್ಣ, ತಮ್ಮ, ಅಪ್ಪ, ಅಮ್ಮ, ಅಕ್ಕಪಕ್ಕದ ಮನೆಯವರು, ಹಿಂದಿನ, ಮುಂದಿನ ಮನೆಯವರು ಎಲ್ಲರೂ ಇದ್ದಾರೆ. ಆತನೊಂದಿಗೆ ಆಯಾ ಚಿತ್ರದ ಪೋಷಕ ಪಾತ್ರಗಳು ನಮ್ಮೊಳಗೆ ತ್ರಿಕಾಲಸತ್ಯದ ಮತ್ತು ಮನುಷ್ಯತ್ವದ ನೀಲಿ ನಕ್ಷೆಯನ್ನು ಬಿಡಿಸುತ್ತ ಹೋಗುತ್ತವೆ. ನಮ್ಮೊಳಗಿನ ಕೋಡಂಗಿತನವನ್ನು ಅನಾವರಣಗೊಳಿಸುತ್ತವೆ; ಶತಮಾನಗಳಿಂದ ಮಾನವ ಸಂಕುಲದೊಳಗೆ ನಿಗೂಢವಾಗಿ ಬೆಳೆದು ಬಂದಿರುವ ಶಾಖೋಪಶಾಖಾ ಭಾವನೆಗಳನ್ನು ಚಾಪ್ಲಿನ್ ಬಳಸಿಕೊಂಡಿದ್ದು ಮತ್ತು ಸಾರ್ವಜನಿಕಗೊಳಿಸಿದ್ದು ಅಸಾಧಾರಣ ಸಂಗತಿಯಾಗಿದೆ. ಚಲನಚಿತ್ರ ಆವಿಷ್ಕಾರವಾಗಿದ್ದ ತನಗಾಗಿಯೇ ಎಂಬಂತೆ ಅದನ್ನು ದಶಕಗಳ ಕಾಲ ದುಡಿಸಿಕೊಂಡ ಕಚಗುಳಿ ಮತ್ತು ಮಾನವೀಯತೆಯ ಮೂರ್ತಿಯಾಗಿದ್ದ ಚಾಪ್ಲಿನ್ ಚಲನಚಿತ್ರದ ಪ್ರತಿಯೊಂದು ಫ್ರೇಂನಲ್ಲಿ ಮಾನವತಾವಾದವನ್ನು ಮೆರೆದ ಮತ್ತು ಅಭಿವ್ಯಕ್ತಿಸಿದ. ಸಾಮೂಹಿಕ ಮನೋರಂಜನೆ ಯಿಂದ ಕೋಟಿಕೋಟಿ ಸಾಮಾನ್ಯ ಪ್ರೇಕ್ಷಕರನ್ನು ರಂಜಿಸಿದ ಅಂತಃಕರಣ ಸೂರೆಗೊಂಡ ಇಂಗ್ಲೆಂಡಿನ ವಾದಿವಿಲೆ(ಬೀದಿಗಳ ತಮಾಷಾ ನಾಟಕ)ಯಿಂದ ಅಮೆರಿಕೆ ಪ್ರವೇಶಿಸಿ ಹಾಲಿವುಡ್‌ನ ಅನಭಿಷಕ್ತ ಸಾಮ್ರಾಟನೆನಿಸಿಕೊಂಡ. ಆತ ತನ್ನ ನಟನಾ ಕೌಶಲ್ಯದಿಂದ ಪಂಡಿತ ಪಾಮರರೀರ್ವ ರಿಂದ ಅಪಾರ ಮನ್ನಣೆ ಗಳಿಸಿಕೊಂಡ. ತನ್ನ ಬದುಕಿನ ಪೂರ್ವಾರ್ಧದಲ್ಲಿ ಮೂಕಯುಗಕ್ಕೆ ಜಾಗತಿಕ ಮಟ್ಟದ ಭಾಷೆಯ ಕಿರೀಟ ಅಲಂಕರಿಸಿದ. ಚಾಪ್ಲಿನ್ ಚಲನಚಿತ್ರ ತಂತ್ರಜ್ಞಾನಕ್ಕೆ ಶಬ್ದಸಾನ್ನಿಧ್ಯ ಒದಗಿಸಿದ ನಂತರ ಅಚ್ಚಳಿಯದಂಥ ಪ್ರಭಾವಳಿ ತೊಡಿಸಿದ. ತನ್ನ ಸುಮಾರು

ಎಪ್ಪತ್ತಕ್ಕೂ ಮೇಲ್ಪಟ್ಟ ಕಲಾಕೃತಿಗಳ ಮೂಲಕ ದೇಶಕಾಲಗಳ, ವಯಸ್ಸು ಲಿಂಗಗಳ, ಜ್ಞಾನಸಂಸ್ಕೃತಿಗೆ ಭೇದವಿಲ್ಲದೆ ಮಾನವ ಕುಲವನ್ನು ಆಳಿದ ಚಾರ್ಲಿ ಚಾಪ್ಲಿನ್ ಶೇಕ್ಸ್‌ಪಿಯರ್‌ಗಿಂತಲೂ ಜನಮನ್ನಣೆ ಗಳಿಸಿದ ಅದ್ವಿತೀಯ ಕಲಾವಿದ. ತನ್ನ ವೃದ್ಧಾಪ್ಯದ ದಿನಗಳನ್ನು ಸ್ವಿಟ್ಜರ್ಲೆಂಡಿನಲ್ಲಿ ಕಳೆದು ೧೯೭೭ರ ಕ್ರಿಸ್‌ಮಸ್‌ದಂದು ಅಮರನಾದ. ಚಾರ್ಲಿ ಚಾಪ್ಲಿನ್ ಇಡೀ ಮಾನವ ಕುಲದ ಹೃದಯವನ್ನಲಂಕರಿಸಿದ್ದಾನೆ. ದೊಗಲು ಪ್ಯಾಂಟು, ಮೈಬಿಗಿವ ಕೋಟು; ಹೆಣಭಾರದ ಬೂಟುಗಳಲ್ಲಿ ತುರುಕಿಕೊಂಡ ತಿರುಚುಕಾಲುಗಳ ಫ್ರೆಂಚ್‌ಕಟ್ ಮೀಸೆಯ ಮುಖದ ಬೇವರ್ಸಿ ಚಾರ್ಲಿ ಪಾತ್ರವನ್ನು ಸೃಷ್ಟಿಸಿ ಅದನ್ನು ಅಜರಾಮ ಗೊಳಿಸಿದ್ದಾನೆ. ಅದರ ಮೂಲಕ ನಮ್ಮೊಳಗಿನ, ಸಮಾಜದೊಳಗಿನ ಬೇವರ್ಸಿತನಕ್ಕೆ ಕನ್ನಡಿ ಓಡಿದ ಚಾರ್ಲಿ ಈ ಶತಮಾನದ ಆದಿಭಾಗದ ಆಕ್ರಮಣಶೀಲ ರಾಷ್ಟ್ರಗಳ ಪೊಳ್ಳುತನವನ್ನು ಬಟ್ಟಬಯಲು ಮಾಡಿದ. ಆ ಪಾತ್ರದ ವಿಲಕ್ಷಣತೆ ನಮ್ಮನ್ನು ಸದಾ ಚಿಂತನೆಗೆ ಹಚ್ಚುವಂತಹುದು. ಚಾರ್ಲಿ ಪಾತ್ರ ಪ್ರೇಕ್ಷಕನ ಕಣ್ಣಂಚಿನಲ್ಲಿ ಬಾಷ್ಪವನ್ನು ಧುಮುಕಿಸಬೇಕೆನ್ನಿಸುವಷ್ಟರಲ್ಲಿ ಮರುಶಾಟ್‌ನಲ್ಲಿ ಹಾಗೆ ಅಂತರ್ಧಾನ ಮಾಡಿ ಬಿಡುತ್ತದೆ. ಚಾಪ್ಲಿನ್ನಿನ ನಟನೆಯ ಶ್ರೇಷ್ಠತೆ ಇರುವುದು ಅಲ್ಲಿಯೆ. ಹೀಗೆ ಇಡೀ ಜಗತ್ತನ್ನು ಹುಚ್ಚೆಬ್ಬಿಸಿ ಅಪೂರ್ವ ಜನಪ್ರಿಯತೆಯನ್ನು ಕೊಳ್ಳೆಹೊಡೆದ ಚಾರ್ಲಿ ಪಾತ್ರಕ್ಕೆ ಜಾಗತಿಕ ಚಲನಚಿತ್ರರಂಗ ಚಿರಋಣಿಯಾಗಿದೆ ಮತ್ತು ಚಿರಋಣಿಯಾಗಿರಬೇಕು ಕೂಡ. ೧೯೫೭ರ ಹೊತ್ತಿಗೆ ಚಾಪ್ಲಿನ್ "ದಿ ಕಿಂಗ್ ಇನ್ ನ್ಯೂಯಾರ್ಕ್" ಚಿತ್ರ ಮಾಡುವ ಹೊತ್ತಿಗೆ ತನ್ನ 'ಚಾರ್ಲಿ' ಪಾತ್ರಕ್ಕೆ ತಾನೇ ಬೆರಗಾದ ತನ್ನ ಬದುಕಿನಲ್ಲಿ ಕಾಣಿಸಿಕೊಂಡ ತಿರುವುಗಳಿಗೆ, ಘಟನೆಗಳಿಗೆ, ತಾನೆ ತಲ್ಲಣಗೊಂಡ, ತನ್ನ ಬದುಕಿನ ತಲ್ಲಣಗಳು ಸಮಾಜದ ತಲ್ಲಣಗಳೆಂದು ಗುರುತಿಸಿದ ಆ ತಲ್ಲಣಗಳಿಗೆ ಅಕ್ಷರದ ಅಭಿವ್ಯಕ್ತಿಕೊಡಬೇಕೆಂದು ನಿರ್ಧರಿಸಿ ಆತ್ಮಕಥೆ ಬರೆದ ಚಾಪ್ಲಿನ್ನಿನ 'ಮೈ ಆಟೋಬಯೋಗ್ರಫಿ'ಯನ್ನು ನ್ಯೂಯಾರ್ಕ್ ಪಾಕೆಟ್ ಬುಕ್ಸ್ ಪ್ರಕಾಶ ಸಂಸ್ಥೆ ೧೯೬೪ರಲ್ಲಿ ಪ್ರಕಟಿಸಿ ತನ್ನ ಗೌರವವನ್ನು ಹೆಚ್ಚಿಸಿಕೊಂಡಿತು. ಆತನ ಆತ್ಮಚರಿತೆ ಜಾಗತಿಕ ಸಾರಸ್ವತಲೋಕದ ಅಂತಃಕರಣವನ್ನು ಕಲುಕಿತು. ಬ್ರಿಟನ್ನಿನ ಪ್ರಸಿದ್ಧ ಪತ್ರಿಕೆಗಳಾದ ದಿ ಟೈಮ್ಸ್, ಡೆಲಿ ಟೆಲಿಗ್ರಾಫ್; ಸಂಡೆ ಟೈಮ್ಸ್, ಡೈಲಿಮಿರರ್ ಮುಕ್ತ ಕಂಠದಿಂದ ಪ್ರಶಂಸಿದವು. ಬದುಕಿನ ಬಗ್ಗೆ ಪ್ರೀತಿ ಶ್ರದ್ಧೆ ಇಟ್ಟುಕೊಂಡಿರುವ ಪ್ರತಿಯೊಬ್ಬ ಮನುಷ್ಯ ಓದಲೇಬೇಕಾದಂಥ ಮಹತ್ ಕೃತಿಯಾದ ಚಾರ್ಲಿಸ್ ಸ್ಪೆನ್ಸರ್ ಚಾಪ್ಲಿನ್‌ನ ಆತ್ಮಕಥೆ ಜಗತ್ತಿನ ಸರ್ವಶ್ರೇಷ್ಠ ಆತ್ಮಕಥೆಗಳ ಸಾಲಿನಲ್ಲಿ ಶಾಶ್ವತ ಸ್ಥಾನ ಪಡೆದಿರುವಂತಹುದು. ಮನುಷ್ಯ ತಾನು ಬದುಕುತ್ತ ಇನ್ನೊಬ್ಬ ಮನುಷ್ಯನನ್ನೂ ಬದುಕಿಗೆ ಹಚ್ಚಬೇಕು ಎಂದು ಸಂದೇಶ ಸಾರುವ ಚಾಪ್ಲಿನ್ ವಿಶ್ವಮಾನವ ಸ್ಥಾನ ಗಳಿಸಿರುವ ಅದ್ವಿತೀಯ ಕಲಾವಿದರಾಗಿದ್ದಾರೆ.

### ೪.೨.೬. ಆತ್ಮಕಥನ

ಗಾಂಧಿ ಕ್ಲಾಸು ಕುಂ.ವೀ. ಅವರ ಆತ್ಮಕಥನವಾಗಿದೆ. ಇವರ ಆತ್ಮಕಥೆಯೂ ಸಹ ಕಾದಂಬರಿಯಂತೆ ಅತ್ಯಂತ ರೋಚಕವಾಗಿ ಓದಿಸಿಕೊಂಡು ಹೋಗುತ್ತದೆ. ಲೇಖಕರ ಬಾಲ್ಯದ ರಂಜನೀಯ ಘಟನೆಗಳು ಬದುಕಿಗಾಗಿ ಅವರು ಪಟ್ಟ ಪರಿಶ್ರಮ, ಓದಿನ ಬಗ್ಗೆ ಅವರಿಗಿದ್ದ ಶ್ರದ್ಧೆ, ಬದುಕಿನ ಬಗೆಗೆ ಅವರಿಗಿದ್ದ ದುರ್ಯೋಧನ ಛಲ, ಕಾದಂಬರಿಯನ್ನು ಸಿದ್ಧಪಡಿಸಲು ಅವರು ಪಟ್ಟಶ್ರಮ, ದಲಿತ ಮಕ್ಕಳನ್ನು ಶಾಲೆಗೆ ಸೇರಿಸಿಕೊಳ್ಳುವಲ್ಲಿಯ ಅವರ ಪರಿಶ್ರಮ, ಮೂವತ್ತು ವರ್ಷಗಳಿಂದ ನಿರಂತರನಾಗಿ ಕಥೆ ಕಾದಂಬರಿಗಳನ್ನು ಬರೆದು ಸವೆದುಹೋದ ನಡುಬೆರಳು ಈ ಎಲ್ಲಾ ಹತ್ತಾರು ಅವರ ಜೀವನದ ಹೋರಾಟದ ಹೆಜ್ಜೆಗುರುತುಗಳು ಆಪ್ತವಾಗಿ ಚಿತ್ರಿತವಾಗಿವೆ. ನಿಜಕ್ಕೂ ಗಾಂಧೀಕ್ಲಾಸ್ ಆತ್ಮಕಥನ ರಮ್ಯ, ಅದ್ಭುತ, ರೋಚಕ ಕಥನವಾಗಿ ಹೊರಹೊಮ್ಮಿದೆ.

ಹೀಗೆ ಕುಂ.ವೀ. ಅವರು ಶಿಕ್ಷಕರಾಗಿ, ಕಥೆಗಾರರಾಗಿ, ಕಾದಂಬರಿಕಾರರಾಗಿ, ಜೀವನಚರಿತ್ರೆ ಹಾಗೂ ಆತ್ಮಕಥನಕಾರರಾಗಿ ಕನ್ನಡ ಸಾಹಿತ್ಯದಲ್ಲಿ ತಮ್ಮದೇ ಆದ ಛಾಪನ್ನು ಸ್ಥಾಪಿಸಿದ್ದಾರೆ. ಕನ್ನಡ ಮತ್ತು ತೆಲುಗು ಭಾಷೆಗಳ ಬಗ್ಗೆ ಆಳವಾದ ಜ್ಞಾನ, ವಿದ್ವತ್ತನ್ನು ಪಡೆದ ಅವರು ದ್ವಿಭಾಷಿಕವಾಗಿಯೂ ತಮ್ಮ ಪ್ರತಿಭೆಯನ್ನು ಪ್ರಕಟಿಸಿದ್ದಾರೆ.

### ೪.೩. ಕುಂ. ವೀರಭದ್ರಪ್ಪನವರ ಸಾಹಿತ್ಯ ರಚನಾಸ್ವರೂಪ

ಕುಂ.ವೀರಭದ್ರಪ್ಪನವರು ಕರ್ನಾಟಕ ಮತ್ತು ಆಂಧ್ರದ ಗಡಿಭಾಗದ ಹಳ್ಳಿಗಳಲ್ಲಿ ತಮ್ಮ ವೃತ್ತಿ ಬದುಕನ್ನು ಕಳೆದಿರುವುದರಿಂದ ಅವರ ಕಥೆಗಳ ಬಹುಪಾಲು ಕಥಾವಸ್ತುಗಳು ಆಂಧ್ರದ ಜಮೀನ್ದಾರಿ ಪದ್ಧತಿಯ ಹಿನ್ನೆಲೆಯಲ್ಲಿ ಮೂಡಿ ಬಂದಂತಹವಾಗಿವೆ. ಹೈದರಾಬಾದ್ ಕರ್ನಾಟಕದ ಊಳಿಗಮಾನ್ಯ ಪದ್ಧತಿ ನವಾಬರ ಆಳ್ವಿಕೆಯು ಸೇರಿ ನಿರ್ಮಿಸಿದ ದಯನೀಯ ಸ್ತ್ರೀಜಗತ್ತಿನ ಚಿತ್ರಣದ ಜೊತೆಗೆ ಹೆಣ್ಣನ್ನು ಜೀವಶಕ್ತಿಯ ಸೆಲೆಯಾಗಿ, ಪ್ರತಿಭಟನೆಯ ಮೂರ್ತಿಯಾಗಿ ಕಾಣಿಸಿರುವುದನ್ನು ಇವರ ಕಥೆಗಳಲ್ಲಿ ಕಾಣಬಹುದಾಗಿದೆ. ಯಾವಾಗಲೂ ಹೆಣ್ಣನ್ನು ತೋಳಗಳ ನಡುವಿನ ಕುರಿಮರಿಯಂತೆ ಕೇವಲ ಅನುಭವಿಸುವ ವಸ್ತುವಾಗಿರುವ ಸಾಮಾಜಿಕ ಮನೋಧರ್ಮದ ಬದಲಾಗಿ ಲೈಂಗಿಕ ಸ್ವಾತಂತ್ರ್ಯದ ಅಸೀಮ ಧೈರ್ಯವನ್ನು ತೋರುವ ಚಿತ್ರಣ ಪತನಮುಖಿ ಸಮಾಜವನ್ನು ತಿರಸ್ಕರಿಸಿ ಪ್ರತಿಸಂಸ್ಕೃತಿಯನ್ನು ನಿರ್ಮಾಣ ಮಾಡುವ ವಿಧಾನವಾಗಿದೆ.

ಜಾತಿ ಆಸ್ತಿಗಳ ಬಲದಿಂದ ಕೊಬ್ಬಿರುವ ವರ್ಗಗಳು, ಭೂಮಿ ಮತ್ತು ಹೆಣ್ಣುಗಳನ್ನು ಪಡೆಯಲು ನಡೆಸುವ ಪೈಪೋಟಿಯಲ್ಲಿ ನಲುಗುವ ಸಾಮಾನ್ಯರೇ ಈ ಕತೆಗಾರರ ಪ್ರೀತಿಯ ಪಾತ್ರಗಳಾಗಿವೆ. ಬದುಕನ್ನು ತುಳಿತಕ್ಕೊಳಗಾದವರ ಸಾಮಾನ್ಯರ ಕಣ್ಣಿಂದ ಕಾಣುವ ಮತ್ತು

ಅರ್ಥೈಸುವ ವಿಧಾನವೇ ಇವರ ಕತೆಗಳ ಜೀವಾಳವಾಗಿದೆ. ಆಳುವ ವರ್ಗಕ್ಕೆ ವಿರುದ್ಧವಾದ ದುಡಿಯುವ ವರ್ಗದ ದಲಿತರ ಸಾಮಾಜಿಕ ಸಾಂಸ್ಕೃತಿಕ ಜಗತ್ತನ್ನು ಕತೆಗಾರರು ತಮ್ಮ ಕೃತಿಯಲ್ಲಿ ನಿರ್ಮಿಸಿದ್ದಾರೆ. ಕುಂ.ವೀ. ಅವರು ತಮ್ಮ ಕತೆಗಳಲ್ಲಿ ದಮನಿತ ಜಗತ್ತಿನ ಚಿತ್ರಣದ ಮೂಲಕ ಪ್ರತಿ ಸಂಸ್ಕೃತಿಯನ್ನು ಬಹಳ ಆತ್ಮೀಯವಾಗಿ ಬೆಳೆಸುತ್ತಾರೆ. ಜಮೀನ್ದಾರಿ ವ್ಯವಸ್ಥೆ ಮತ್ತು ಬಡವರ್ಗದ ಆರ್ಥಿಕ ಸಂಬಂಧಗಳ ಅನ್ವೇಷಣೆ ಕುಂ.ವೀ. ಅವರಿಗೆ ಮುಖ್ಯವಾಗಿದೆ. ಕೆಳಜಾತಿಯ ಹಸಿವಿನ ನಾನಾ ಮುಖಗಳ ದರ್ಶನವನ್ನು ಕುಂ.ವೀ. ಅವರು ಕರುಳು ಮಿಡಿಯುವಂತೆ ಚಿತ್ರಿಸಿದ್ದಾರೆ. ತುತ್ತು ಅನ್ನಕ್ಕಾಗಿ ಆ ಜನಗಳು ನಡೆಸುವ ಹೋರಾಟ, ಅದರಿಂದ ಉಂಟಾದ ಸಂಘರ್ಷಗಳನ್ನು ಕುಂ.ವೀ. ಅವರು ಹೃದಯಕ್ಕೆ ತಟ್ಟುವಂತೆ ಚಿತ್ರಿಸಿದ್ದಾರೆ.

ಒಟ್ಟಾರೆ ಕುಂ.ವೀ. ಅವರ ಕಥಾಸಾಹಿತ್ಯದ ಸ್ವರೂಪವನ್ನು ಮೂರು ನೆಲೆಗಳಲ್ಲಿ ಅಧ್ಯಯನ ಮಾಡಲಾಗಿದೆ.

೧. ಭಾಷೆ, ಶೈಲಿ ಮತ್ತು ತಂತ್ರ

೨. ಕಥೆ ಮತ್ತು ಕಥಾವಸ್ತು

೩. ದೇಸಿ ಸಂವೇದನೆಯ ಸಮಗ್ರ ಗ್ರಹಿಕೆ

### ೪.೩.೧. ಭಾಷೆ, ಶೈಲಿ ಮತ್ತು ತಂತ್ರ

ಕುಂ.ವೀ. ಅವರ ಕಥೆ ಕಾದಂಬರಿಗಳನ್ನು ಕುರಿತು ಅಧ್ಯಯನ ಮಾಡುವಾಗ ಅವರ ಕಥಾ ಸಾಹಿತ್ಯದ ವಸ್ತು, ತಂತ್ರ ಮತ್ತು ಭಾಷಾಶೈಲಿಯನ್ನು ಕುರಿತು ವಿಶ್ಲೇಷಿಸಬೇಕಾದ್ದು ಅಗತ್ಯವಾಗುತ್ತದೆ. ತಂತ್ರ ಎಂದರೆ ಕಥೆ ಹೇಳುವ ರೀತಿ ಎಂದು ಅರ್ಥೈಸಬಹುದು ಈ ದೃಷ್ಟಿಯಿಂದ ಕಥನತಂತ್ರವನ್ನು ಗಮನಿಸಿದಾಗ ಕಥೆಗಾರರು ಎರಡು ರೀತಿಯಿಂದ ಕಥೆ ಹೇಳಲು ಪ್ರಯತ್ನಿಸಿದ್ದಾರೆ. ಬರವಣಿಗೆಯ ಸಂದರ್ಭದಲ್ಲಿ ತನ್ನ ವ್ಯಕ್ತಿತ್ವನ್ನು ಸಂಪೂರ್ಣವಾಗಿ ಇಲ್ಲವಾಗಿಸಿಕೊಂಡು ತನ್ನ ಕೃತಿಯ ಪಾತ್ರ, ಸನ್ನಿವೇಶ ಮತ್ತು ಭಾವನೆಗಳನ್ನು ಯಾವುದೇ ವ್ಯಾಖ್ಯಾನವಿಲ್ಲದೆ ನಿರ್ಲಿಪ್ತವಾಗಿ ಪ್ರಕಟಗೊಳಿಸಿದರೆ, ಮಿಕ್ಕಂತೆ ವಿಶೇಷ ಸಂದರ್ಭಗಳಲ್ಲಿ ಕೃತಿಯ ಚೌಕಟ್ಟಿನೊಳಗೆ ನಿರೂಪಕನಾಗಿ ಇಲ್ಲವೆ ಪ್ರಾತಿನಿಧಿಕ ಪಾತ್ರವಾಗಿ ವೈಯಕ್ತಿಕ ಅಭಿರುಚಿಗಳಿಗೆ, ಮೌಲ್ಯಗಳಿಗೆ, ಭಾವನೆಗಳಿಗೆ ಹಾಗೂ ತೀರ್ಮಾನಗಳಿಗೆ ಪ್ರಾಮುಖ್ಯತೆಯನ್ನು ಕೊಟ್ಟು ವ್ಯಕ್ತಿನಿಷ್ಠವಾಗಿ ನಿರೂಪಿಸುವುದನ್ನು ಇವರ ಕಥಾಸಾಹಿತ್ಯದಲ್ಲಿ ಕಾಣುತ್ತೇವೆ. ಎಂದರೆ ಕಥೆಗಾರ ಯಾವುದೇ ತಂತ್ರವನ್ನು ಹೊರಗಿನಿಂದ ತಂದು ಅಳವಡಿಸುವುದು ಸಾಧ್ಯವಿಲ್ಲ. ಕಥೆಗಾರನು ಆಯ್ದುಕೊಂಡ ವಸ್ತುವೇ ಒಂದು ತಂತ್ರವನ್ನು ಸೃಷ್ಟಿಸಿಕೊಳ್ಳುತ್ತದೆ. ಅಂದರೆ ಕಥೆಗಾರ ಕಥೆ ಹೇಳುತ್ತಿರಲಿ

ಅಥವಾ ತಾನೇ ನಿರೂಪಕನ ಪಾತ್ರವಾಗಿರಲಿ ಕಥೆಗಾರನ ವ್ಯಕ್ತಿತ್ವ ಮಾತ್ರ ಒಂದಲ್ಲ ಒಂದು ಸ್ತರದಲ್ಲಿ ಅವನ ಕಥೆಗಳಲ್ಲಿ ಅಭಿವ್ಯಕ್ತಿ ಪಡೆಯುತ್ತದೆ. ಆದ್ದರಿಂದ ವಸ್ತು ಮತ್ತು ಧೋರಣೆಗಳಿಂದ ತಂತ್ರವನ್ನು ಬೇರ್ಪಡಿಸುವುದು ಸಾಧ್ಯವಿಲ್ಲ. ಸಾಹಿತ್ಯದಲ್ಲಿ ತಂತ್ರವೆಂದರೆ ಕೃತಿಗಾರನು ಹೇಳುವ ರೀತಿ ಮತ್ತು ಕ್ರಮಕ್ಕೆ ಸಂಬಂಧಪಟ್ಟಂತೆ ಆತನ ಧೋರಣೆ ಮತ್ತು ಜೀವನದೃಷ್ಟಿಯನ್ನು ಒಳಗೊಂಡಿರುತ್ತದೆ. ವಿಶೇಷವಾಗಿ ಕುಂ.ವೀ. ಅವರ ಕತೆಗಳನ್ನು ಹೆಣೆಯುವಾಗ ನಿರೂಪಕನ ಪಾತ್ರವನ್ನು ಒಂದು ತಂತ್ರವಾಗಿ ಬಹುಮಟ್ಟಿಗೆ ಯಶಸ್ವಿಯಾಗಿ ಬಳಸಿಕೊಂಡಿದ್ದಾರೆ.

"ಒಂದು ದಿನ ಮನೆಗೆ ಬಂದ ಕೂಡಲೆ ಅಜ್ಜಿ ಒಂದು ಕವರು ಕೊಟ್ಟಿತು. ಛೇರ್ಮನು ಕೊಟ್ಟುಕಳಿಸಿದ್ರಪ್ಪ ಅಂತ. ತೆಗೆದು ನೋಡಿದೆ. ಎರಡು ಸಾವಿರದಷ್ಟು ಹಣ ಇತ್ತು. ನನಗೆ ಏನೂ ಅನ್ನಿಸಲಿಲ್ಲ. ಆ ಹಣದೊಂದಿಗೆ ಸೀದಾ ಅವರ ಮನೆ ಹತ್ತಿರ ಹೋದೆ. ನನ್ನ ಪುಣ್ಯಕ್ಕೆ ಅವರು ಒಬ್ರೆ ಇದ್ದರು. ನಮಸ್ಕಾರ ಸಾರ್ ಅಂದೆ. ಕೂತಲ್ಲಿಂದ ಓಡಿ ಬಂದು ನನ್ನನ್ನು ಕೋಣೆಯೊಳಗೆ ಕರೆದೊಯ್ದರು. ಹಣ ಮರಳಿಸುತ್ತ 'ಸಾರ್ ಇನ್ನೊಮ್ಮೆ ಈ ರೀತಿ ಹಣ ಕಳಿಸಬೇಡಿ ಅಂದರೆ ಅವರು ಕಣ್ಣು ಒದ್ದೆ ಮಾಡಿಕೊಂಡರು. ಏನು ಕೇಳಿದ್ರೂ ಕೊಡ್ತೀನಿ ಅಂದರು. ನೌಕರಿ ಕೊಡಿಸ್ತೀನಿ ಅಂದರು. ನಾನು ಯಾವುದೂ ಬೇಡಿ ಸಾರ್ ಅಂದರೆ ಎಲ್ಲ ವಿಧಿ ಆಟ... ನಾನು ಅಂತೋನಲ್ಲ ಅಂದರು. ನಾನು ಯಾರ್ಗೂ ಹೇಳೊಲ್ಲ... ಹೆದರಬೇಡಿ ಸಾರ್! ಅಂದು ವಾಪಸು ಬಂದೆ.

ನಾನು ಅವರನ್ನು ಎಂದೂ ಕಾಣಲು ಹೋಗದಿದ್ದರೂ ಅವರೇ ಹುಡುಕಿಕೊಂಡು ನನ್ನ ಬಳಿ ಬರುತ್ತಿದ್ದರು. 'ಹಾಗೆ ಸಾರ್, ಹೀಗೆ ಸಾರ್' ಅಂತ ಬಹುವಚನದಲ್ಲಿ ಮಾತಾಡುತ್ತಿದ್ದರು. ನನಗೆ ಇರುಸುಮುರುಸಾಗುತ್ತಿತ್ತು.

ಜನರಿಗೋ ಇದು ವಿಚಿತ್ರ ಎನ್ನಿಸಿತು. ಜನಾನುರಾಗಿಗಳೂ ಛೇರ್ಮನೂ, ಶ್ರೀಮಂತರೂ ಆದ ಡಾಕ್ಟರ್ ರೇವಣಸಿದ್ದಪ್ಪರೆಲ್ಲಿ? ಈ ಪಡಪೋಸಿ ಕುಂಬಾರ ಹುಡುಗ ವೀರಭದ್ರ ಎಲ್ಲಿ! ಅಂಥ ಮಹಾನ್ ವ್ಯಕ್ತಿ ಪಡಪೋಸಿಗೆ ಎಲ್ಲಿಲ್ಲದ ಗೌರವ ಕೊಡುವುದೆಂದರೇನು. ಜನ ನನ್ನ ಕಡೆ ಒಂದು ನಮೂನೆ ನೋಡತೊಡಗಿದರು."

ಕುಂ.ವೀ. ಅವರು ಈ ಕಥೆಯಲ್ಲಿ ತಮ್ಮ ಊರಿನಲ್ಲಿದ್ದ ಈತರದ ಡಾಕ್ಟರ್‌ರೊಬ್ಬರ ನಿಜ ಜೀವನ ಬದುಕಿನ ಚಿತ್ರಣವನ್ನು ಅದ್ಭುತವಾಗಿ ಕಥೆಯಾಗಿಸಿದ್ದಾರೆ. ಅನುಭವ ಸಮೃದ್ಧಿ ಮಾನವ ಸಹಜಪ್ರವೃತ್ತಿಗಳನ್ನು ಅಭಿವ್ಯಕ್ತಿಪಡಿಸುವುದರ ಮೂಲಕ ಪ್ರಕಟವಾಗಿದೆ. ಇಂತಹ ಸಂದರ್ಭದಲ್ಲಿ ಲೇಖಕರ ಸಮರ್ಪಕವಾದ ನಿರೂಪಣಾ ಶೈಲಿ ಪ್ರಕಟವಾಗಿರುವ ಜಾಣ್ಮೆಯನ್ನು ಕಾಣಬಹುದಾಗಿದೆ.

ಕುಂ.ವೀರಭದ್ರಪ್ಪನವರು ತಮ್ಮ ಕಥೆ ಕಾದಂಬರಿಗಳಲ್ಲಿ ದಲಿತರ ಹಾಗೂ ಬಡವರ ಜೀವನ ಚಿತ್ರಣವನ್ನು ಅವರ ಬದುಕಿನ ಹೊರಗಿನಿಂದ ಚಿತ್ರಿಸದೆ ದಲಿತರ ಬದುಕಿನ ಒಳಹೊಕ್ಕು ಚಿತ್ರಿಸಿದ ರೀತಿ ಅನನ್ಯವಾಗಿದೆ. ಆದರೆ ಆ ಜನರ ಜೀವನದ ಬದಲಾವಣೆಯ ಸಾಧ್ಯತೆಗಳನ್ನು ಬಿಂಬಿಸುವಲ್ಲಿ ದುರ್ಬಲವಾಗುವ ಇವರ ವೈಚಾರಿಕ ನೆಲೆಗಟ್ಟು ಕಥೆಗಳ ಮಿತಿಗೆ ಮುಖ್ಯ ಕಾರಣವಾಗಿದೆ. ಆದರೂ ಇವರ ಬರವಣಿಗೆಗೆ ಸಾಂಸ್ಕೃತಿಕ ಮಹತ್ವವಿರುವುದನ್ನು ಈ ಕಥೆಯ ಮೂಲಕ ನೋಡ ಬಹುದು.

"ಐಯ್ಯೋನರ ಕಾಲು ತೊಳೆದು ಆ ಮುತ್ಯಾಳನ ಪಾದೋದಕವನ್ನು ಹಾಳುಗೋಡೆಗೆ ಸಿಂಪಡಿಸಿದ್ದಾಯಿತು. ಪೂಜೆ ಪುನಸ್ಕಾರವಾಯಿತು. ಅಗರಬತ್ತಿಯ ವಾಸನೆಗೂ ಹೋಳಿಗೆ ವಾಸನೆಗೂ ಜಂಗಿ ಕುಸ್ತಿಯೇ ನಡೆದು ಅದರಲ್ಲಿ ಅಗರಬತ್ತಿಯ ವಾಸನೆಯೇ ಗೆದ್ದಿತು. ಉಳಿದಿದ್ದು ಕ್ಲೈಮ್ಯಾಕ್ಸು. ಬಡಕಲು ದೇಹಿ ಶಂಕ್ರಯ್ಯ ಮೊದಲು ಹೋಳಿಗೆಗೆ ಕೈ ಹಚ್ಚುತ್ತಲೇ' ರತ್ನ ಕಣ್ಮುಚ್ಚಿ ದೇವ್ರೆ ಒಂದೇ ಹೋಳಿಗೆಗೆ ಕೈ ತೊಳೆದುಕೊಳ್ಳುವಂತೆ ಮಾಡು' ಎಂದು ಪ್ರಾರ್ಥಿಸಿದಳು. ಆದರೆ ದೇವರು ಎಂದೆಂದಿಗೂ ಕೂತುಣ್ಣುವವರ ಕಡೆಗಲ್ಲವೇ? ಜಂಗಮರ ಒಡಲಲ್ಲಿ ಆದ್ಯಾವ ದೆವ್ವ ಬಿಡಾರ ಹೂಡಿತ್ತೋ ಏನೋ ಈ ಜನುಮದಲ್ಲಿ ಹೋಳಿಗೆಗಳನ್ನು ಪಾವರೆ ಅಕ್ಕಿ ಅನ್ನವನ್ನು ಒಂದು ತಂಬಿಗೆ ಸಾರನ್ನು ಲಗಾಯಿಸಿ, ಹೊಬ್ಬ ಅಂತ ತೇಗಿದ ಸದ್ದಿಗೆ ನೆರಿಕೆ ಸಂದಿಯಲ್ಲಿದ್ದ ಗುಬ್ಬಿಮರಿ ಮೂರ್ಛೆ ಹೋಯಿತು. 'ಚುಟ್ಟದ ಖರ್ಚಿಗೆ ಮೂರು ಪಾವ್ಲಿ ಕೊಡಬೇಕವ್ವಾ... ಇಲ್ಲಾಂದ್ರೆ ಬಿನ್ನ ತೀರಿಸಿ ಏನು ಸಾರ್ಥಕ' ಎಂದು ಮೊಂಡು ಹಠ ಹಿಡಿದ ಶಂಕ್ರಯ್ಯನಿಗೆ ಎಲೆ ಅಡಿಕೆಯಲ್ಲಿ ಪಾವಲಿ ಇಟ್ಟು ಸಣ್ ಮಾಡಿದಳು. ತಿಪ್ಪವ್ವ 'ಎಯ್ ಶಂಭೊ ರತ್ನ ಬರ್ರೋ ಅಡ್ಡಬೀಳಿ' ಮುದುಕಿಯ ಕೂಗು ಕೇಳಿಯೂ ಕೇಳದಂತೆ ಹಿಂದೆ ಸರಿದವರಿಬ್ಬರು... ಅಯ್ಯೋರು ಹೋಗುವಾಗ್ಯ ತಲೆಬಾಗಿಲಿಗೆ ಹಣೆ ಬಡಿಸಿಕೊಂಡಿದ್ದು ಕಂಡು ಶಂಭೂಗೆ ಖುಷಿಯಾಯಿತು.[೨]

ಈ ಕಥೆಯಲ್ಲಿ ತಿಪ್ಪವ್ವನಿಗೆ ಕಿತ್ತು ತಿನ್ನುವ ಬಡತನವಿದ್ದರೂ ಸಾಂಸ್ಕೃತಿಕ ಚೌಕಟ್ಟಿನ ಮಡಿ-ಮೈಲಿಗೆ ಆಚರಣೆ ಪ್ರಮುಖವಾಗಿ ಕಾಣಿಸುತ್ತವೆ. ಅನಾದಿಕಾಲದ ಸಂಪ್ರದಾಯಗಳು ಆಚರಣೆಗಳ ಚೌಕಟ್ಟಿನಿಂದ ಹೊರಬರಲು ಅಂಥವರಿಗೆ ಸಾಧ್ಯವೇ ಆಗುವುದಿಲ್ಲ. ಮಕ್ಕಳಾಟದಲ್ಲಿ ಅಯ್ಯನವರು ಪಾಲ್ಟು ಮಾಡುವುದು ರತ್ನ ತನ್ನ ತಮ್ಮನನ್ನು ಪೊರಕೆಯಿಂದ ಹೊಡೆಯುವುದು, ಅಯ್ಯನವರು ಪುಕಸಟ್ಟೆ ತಿಂಬಾಕೆ ನಾಚಿಕೆ ಆಗಲ್ಲವೆ ಎಂದು ಒದೆಯುವ ಚಿತ್ರಣ ಅತ್ಯಂತ ಡ್ರಮೆಟಿಕ್ ಆಗಿ ಬದುಕಿನ ನೈಜ ಮುಖವನ್ನು ಅದರಲ್ಲೂ ಹಸಿದಿರುವ ಮಕ್ಕಳ ಸಿಟ್ಟು ಆಕ್ರೋಶವನ್ನು ಚೆನ್ನಾಗಿ ಬಿಂಬಿಸಿವೆ.

ಕುಂ.ವೀ. ಅವರು ತಮ್ಮ ಕಥಾಸಾಹಿತ್ಯಕ್ಕೆ ಸಹಜ ಆಲಂಕಾರಿಕ ಭಾಷೆಯನ್ನು ಬಳಸಿ ಕೊಂಡಿದ್ದಾರೆ. ಅಂತಹ ಸನ್ನಿವೇಶಗಳ ಚಿತ್ರಣಗಳಲ್ಲಿ ಕಿಂಚಿತ್ತೂ ಕೃತಕತೆಯ ಛಾಯೆ ಇರದೆ ಪರಿಪಕ್ವವಾದ ಪ್ರಾದೇಶಿಕತೆಯ ಸೊಗಡನ್ನು ಕಾಣುತ್ತೇವೆ.

ಒಂದು ಕಡೆ ಕೆಲವು ಜಮೀನ್ದಾರಿ ದರ್ಪದ ಕ್ರೌರ್ಯ ತುಂಬಿ ತುಳುಕುವ ಮತ್ತು ಸದಾ ಎಣ್ಣೆ ಬಸಿಯುವ ಮುಖಗಳು. ಇನ್ನೊಂದು ಕಡೆ ಅವಕ್ಕೆ ತದ್ವಿರುದ್ಧ ಮುಖಗಳು ನೂರಾರು. ಅವುಗಳ ಕುಳಿಬಿದ್ದ ಗಲ್ಲಗಳೋ ಆಳಕ್ಕಿಳಿದ ಕಣ್ಣುಗಳೋ ಅಬಡಾದಬಡಾ ಬೆಳೆದ ಗಡ್ಡ ಮೀಸೆಗಳೋ ಎಲುಬಿಗೆ ಮುತ್ತಿದ್ದರೂ ಹುರಿಗೊಂಡ ಮಾಂಸಖಂಡಗಳೊ, ಸಿಂಬಳದ ಒರಳಾಗಿ ಕೂದಲಿಗಂಟಿ ಮರಗಟ್ಟಿದ ರೇಖೆಗಳ ಮೂಗುಗಳೋ ಈ ದೇಶದ ಸನಾತನತೆಯೇ ತಂತಮ್ಮ ಬಾಯೊಳಗೆ ಹೆಪ್ಪು ಗಟ್ಟಿರುವಂಥ ಬಾಯಿಯ ದುರ್ವಾಸನೆಯೋ, ಈ ಚಾಕರಿಗೆ ದಡ್ಡುಬಿದ್ದ ಕೈಗಳೋ ಹುಣ್ಣುಗಳ ಕಲೆಗಳಿರುವ ಮಣ್ಣಿನ ಕಾಲಗಳೊ. ಬೆನ್ನಿಗಂಟಿದ ಹೊಟ್ಟೆಗಳೋ, ನೀರು ಕಾಣದೆ ಕೊಳತಂಥ ಶಿಶ್ನಗಳೋ, ನೀರು ಕಾಣದ ತಿಕಗಳೊ, ಅವು ರಾಣಿಯಂತೆ ಸೊಂಟಕ್ಕಿಳಿ ಬಿಟ್ಟಿರುವ ಕಿಮುಟು ಅರಿವೆಗಳೋ, ಸಿಳ್ಳು ತುಂಬಿರುವ ಕಣ್ಣುಗಳೋ, ಕಂದು ಬಣ್ಣದ ಬಾಚಿ ಹಲ್ಲುಗಳೋ, ಗಂಟುಗಟ್ಟಿದ ತಲೆಯೋ, ಅದರೊಳಗಿನ ರೋಗಪೀಡಿತ ಮೆದುಳೋ ಯಾವುದೋ ದಾರಿದ್ರ್ಯ ಸ್ಮಾರಕಗಳಂತೆ ಮಹೆಂಜೊದಾರೋ ಹರಪ್ಪ ನಾಗರಿಕತೆಯ ಅವಶೇಷದ ಮಡಕೆ ಚೂರುಗಳಂತೆ, ವ್ಯಾಕರಣ ಕಳೆದುಕೊಂಡ ವಾಕ್ಯಗಳಂತೆ, ಋಷಿಗಳ ಕಪಟ ಸನ್ಯಾಸಿಗಳ ಖಾಲಿ ಕಮಂಡಲಗಳಂತೆ, ನಡೆಯತೊಡಗಿದರೆ ಈ ದೇಶದ ಆಶೋತ್ತರಗಳೇ ಮನುಷ್ಯ ರೂಪ ತಾಳಿರುವಂತೆ.[೨೭]

ಕುಂ.ವೀರಭದ್ರಪ್ಪನವರು ತಮ್ಮ ಬರವಣಿಗೆಯಲ್ಲಿ ಕನ್ನಡ ಭಾಷೆಯನ್ನು ಕಟ್ಟಿಕೊಡುವಾಗ ನಡು ನಡುವೆ ಬಳಸುವ ಇಂಗ್ಲೀಷ್ ಪದಗಳು ಕನ್ನಡ ಭಾಷೆಯೊಂದಿಗೆ ಸಹಜವಾಗಿಯೇ ಬಳಕೆಯಾಗಿವೆ. ನಮ್ಮ ಸಂಸ್ಕೃತಿಯ ಮೇಲಾದ ಪಾಶ್ಚಾತ್ಯರ ಪ್ರಭಾವ ಇದಕ್ಕೆ ಕಾರಣವಾಗಿದೆ. ಸಾಮಾನ್ಯ ವ್ಯಕ್ತಿಯಿಂದ ಹಿಡಿದು ಅಸಾಮಾನ್ಯ ವ್ಯಕ್ತಿಗಳವರೆಗೂ ಅವ್ಯಾಹತವಾಗಿ ಇಂಗ್ಲಿಷ್ ಪದಗಳು ಮೂಲ ಭಾಷೆಯ ಸೊಗಡಿಗೆ ಧಕ್ಕೆಯಾಗದ ರೀತಿಯಲ್ಲಿ ಬಳಸಿರುವುದು ಲೇಖಕರ ಬರವಣಿಗೆಯ ಜಾಣ್ಮೆಯಾಗಿದೆ.

ಪೀರಣ್ಣ ನಾವು ಕಳ್ರಲ್ಲ ಸುಳ್ರಲ್ಲ ನಿಜ, ನಮ್ದು ಬ್ಯಾಡ್ಲಕ್ಕು ಯಾಕಂದ್ರೆ ನಾವು ಬಡವರು.

**ಶಾಲಮ್ಮ :** ನೀನು ಓದ್ಕೊಂಡೋನು ಗೌಡಗೆ ರವೋಟು ಬುದ್ದಿ ಹೇಳು ಸತ್ತೋರು ಸತ್ರು. ಆದರೆ ಬದುಕಿದೋರಿಗೆ ಯಾಕೆ ಕಾಟ ಕೊಡೋದು?

**ಪೀರಣ್ಣ :** ನೀನೊಂದು ಸುಮ್ಕಿರವ್ವ ಇದೆಲ್ಲ ಇಲೇಜು ಪಾಲಿಟಿಕ್ಸ್. ನಿಂಗೆ ಅರ್ಥವಾಗಲ್ಲ.

ಇದಕ್ಕೆ ಪ್ರತಿಯಾಗಿ ಬಾಷಾ ಏನೋ ಹೇಳಬೇಕೆಂದು ಬಾಯ್ತೆರೆದ. ಅಷ್ಟರಲ್ಲಿ ಬಾಗಲ ಮುಂದೆ ತನ್ನ ಜಿರುಕೆ ಚಪ್ಪಲಿ ಬಿಟ್ಟು ಒಳಬಂದ ತಳವಾರ ಅಟುಬಿ. 'ಗೌಡ್ರು ಕರೀತಾರೆ ಬರ್ಬೇಕಂತೆ' ಎಂದು ಒತ್ತಾಯ ಮಾಡಿದ. ತ್ರೀ ಓಕಾಕಿಗೆ ಬರ್ತೀನಂತ ಪೀರಣ್ಣ ಅಂದರೂ ಅಟುಬಿ ಕೇರೇ ಮಾಡಲಿಲ್ಲ. ಒಂದು ತಂಬಿಗೆ ನೀರು ಕುಡಿದು ಹಂಗೆ ತಳವಾರನನ್ನು ಪಾಲೋ ಮಾಡಿದನು.

**ಗೌಡ** : ಅಲ್ಲಲ್ಲೇ ಪೀರ ಆಟೊತ್ತಿಗೆ ಬಂದ್ಯಂತೆ ಇಲ್ಲಿ ಕೂಡ್ಲೆ ಬರಬಾರ್ದ. ನೀನೇನು ಅಪ್ಪಾಜಪ್ಪನ ಮಗ್ನೇನು? ಕರೆಯೋಕ ತಳವಾರ್ನ ಕಳಿಸಬೇಕೇನು.

**ಪೀರಣ್ಣ** : ಗೌಡ್ರೆ ಬಡವ್ರು ಅಂತ ಬಾಯಿಗೆ ಬಂದಂಗೆ ಮಾತಾಡಬ್ಯಾಡ್ರಿ. ಗಿವ್ ರೆಸ್ಪೆಕ್ಟ್ ಅಂಡ್ ಟೇಕ್ ರೆಸ್ಪೆಕ್ಟ್. ನಾನು ಒನ್ನವರ ಹಿಂದೆ ಬಂದೆ.

**ಗೌಡ** : ನೀನೊಬ್ನೇ ಅಲ್ಲಲ್ಲೇ ಇಂಗ್ಲೀಷು ಕಲ್ತಿರೋದು.[೨೮]

ಕೆಲವು ಕೆಳವರ್ಗದ ಪಾತ್ರಗಳು ಇಂಗ್ಲಿಷ್ ಭಾಷೆಯನ್ನು ಬಳಸುವಾಗ ಅರ್ಥ ಗೊತ್ತಾಗದಿದ್ದರೂ ಬಳಸುತ್ತವೆ. ಆದರೆ ಪೀರಣ್ಣನಿಗೆ ಇಂಗ್ಲಿಷ್ ಭಾಷೆಯ ಪರಿಚಯವಿದೆ. ಗೌಡನಿಗೆ ಅಷ್ಟಾಗಿ ಪರಿಚಯವಿಲ್ಲದ ಕಾರಣ ಆತನನ್ನು ಗೌಡ ತೀವ್ರವಾಗಿ ಹಂಗಿಸಿ ಅವಮಾನ ಗೊಳಿಸುತ್ತಾನೆ. ಪೀರಣ್ಣನ ಇಂಗ್ಲಿಷ್ ಪಾಂಡಿತ್ಯಕ್ಕೆ ಆರಂಭದ ಆ ಭಾಷೆಯ ಪ್ರಭಾವ ಒಂದು ಕಾರಣವಾದರೆ ಜನಬಳಕೆಯಲ್ಲಿರುವ ಇಂಗ್ಲಿಷ್ ಪದಗಳ ಪ್ರಸ್ತುತತೆ ಇನ್ನೊಂದು ಕಾರಣವಾಗಿದೆ. ಇಲ್ಲಿ ಭಾಷೆಯ ಜನಪ್ರಿಯತೆ ಮೇಲರಿಮೆ ಪ್ರವೃತ್ತಿ ಪೀರಣ್ಣನ ಆತ್ಮವಿಶ್ವಾಸದ ಪ್ರತೀಕವಾಗಿವೆ.

ಇಂಗ್ಲಿಷ್ ಪದಗಳು ಕೆಲವೊಮ್ಮೆ ಪ್ರಯತ್ನಪೂರ್ವಕವಾಗಿ ಬಳಸುವುದು ಕೂಡ ಲೇಖಕರಿಗಿರುವ ಬರವಣಿಗೆಯ ಗೀಳು ಎನ್ನಬಹುದು. ಒಟ್ಟಾರೆ ಕುಂ.ವೀ. ಈ ಬಗೆಯ ಅನ್ಯಭಾಷಾ ಬಳಕೆಯ ಮೂಲಕ ಭಾಷೆಯಲ್ಲಿ ಪ್ರಯೋಗಶೀಲತೆಯನ್ನು ಪಡೆದುಕೊಳ್ಳುತ್ತಿದ್ದಾರೆ ಎನ್ನಿಸುತ್ತದೆ.

ಕುಂ.ವೀ. ಮೂಲತಃ ಗಡಿಭಾಗದ ಬರಹಗಾರರಾಗಿರುವುದರಿಂದ ಆಂಧ್ರದ ತೆಲುಗು ಭಾಷೆಯ ಪರಿಚಯವಿದೆ. ತೆಲುಗಿನ ಸಾಕಷ್ಟು ಕಥೆ ಕಾದಂಬರಿಗಳನ್ನು ಅಧ್ಯಯನ ಮಾಡಿ ಅನುವಾದ ಮಾಡಿದ್ದಾರೆ. ಹಾಗಾಗಿ ಇವರಿಗೆ ಆ ಭಾಷೆಯ ಬಗ್ಗೆ ಬಿಗಿ ಹಿಡಿತವೂ ಇದೆ. ತಮ್ಮ ಕಥಾ ಸಾಹಿತ್ಯದಲ್ಲಿ ಗಡಿಭಾಗದ ಭಯಾನಕ ಸ್ಥಿತಿಗತಿಗಳನ್ನು ಕಟ್ಟಿಕೊಡುವಾಗ ಆಯಾ ವ್ಯಕ್ತಿಗಳ ವ್ಯಕ್ತಿತ್ವಗಳನ್ನು ಇದ್ದ ಹಾಗೆಯೇ ಚಿತ್ರಿಸಿದ್ದಾರೆ. ನಕ್ಸಲೈಟ್ ಪ್ರತಿಭಟನಕಾರರ ವಿರುದ್ಧ ನಡೆಯುವ ಪೊಲೀಸರ ಚಿತ್ರ ಹಿಂಸೆಯ ವಿವರಗಳು ತೆಲುಗುಮಿಶ್ರಿತ ಕನ್ನಡ ಭಾಷೆಯಲ್ಲಿ ನಿರಾಡಂಬರವಾಗಿ ಕಟ್ಟಿಕೊಡುತ್ತಾರೆ.

ಲ್ಯಾಂಡ್ ಲಾರ್ಡ್ ರಾಮಿರೆಡ್ಡಿ ಮರ್ಡರ್ ನೀನೇ ಮಾಡಿಸಿರೋದು. ಆ ದುಗ್ಗಿಪಾಟನ್ನ ಎಲ್ಲಿ ಬಚ್ಚಿಟ್ಟೆ ಹೇಳು.

'ನನ್ಗೂ ಅದ್ಕೂ ಸಂಬಂಧ ಇಲ್ಲ, ನಾನಿಲ್ಲಿಗೆ ಬಂದಿರೋದು ಒಬ್ಬ ಲೇಖಕನಾಗಿ... ನನ್ನ ಕೆನ್ನೆ ಮೇಲೆ ಗೊಬ್ಬೆ ಮೂಡಿತು.

'ಮಾರ್ಕ್ಸ್... ಕಾರ್ಲ್ ಮಾರ್ಕ್ಸ್ ಲಿಟರೇಚರ್ ಚದಿವಿನಾವಾ'

'ಚದಿವಿನಾನು'

'ಅಯನ ಐಡಿಯಾಲಜಿ ನೀಕಿಷ್ಟಮಾ!'

'ಇಷ್ಟಮು'

'ಮಾವೋ'

ಹೂಂ

'ಚೆಗುವೇರಾ'

'ಹೂಂ'

ಅಟ್ಲಯಿತೆ ನುವ್ವು ನಕ್ಸಲೈಟ್‌ಕಿ ಸಪೋರ್ಟರ್'

'ಕಾದು'

'ಕಾದಂಡಾವೇಮ್ರಾ... ಬಾಂಛೋದ್' ಒಂದು ಸಾರಿ ಮುಷ್ಟಿಯಿಂದ ಬಲವಾಗಿ ಗುದ್ದಿದ. ನನ್ನ ಕಣ್ಣಲ್ಲಿ ದೀಪ ಹತ್ತಿದಂತಾಯಿತು.

'ಲಚ್ಚುಮಿ ಅವರಿಗಡ್ಡ ಬಂದಳು. ನನ್ನೇನಾದ್ರೂ ಮಾಡ್ಕೊಳ್ರಿ.

ಆತನ್ನ ಬಿಡ್ರಿ ಆತ ಅಂಥವನಲ್ಲ ಎಂದು ಚೀರಿದಳು.

"ಲಂಚಾ... ನೋರ್ಮೂಯ್... ಆಕೆಯ ಸೆರಗಿಗೆ ಕೈಹಾಕಿ ಎಳೆದುಕೊಂಡು ಆತ್ತ ಕರೆದೊಯ್ದ" ಇನ್ನೊಬ್ಬ ಅಸಾಮಿ ನನ್ನತ್ತ ಬಂದ.[೨೯]

ಗಡಿಭಾಗದಲ್ಲಿ ಪೊಲೀಸರು ಮುಗ್ಧ ಅಮಾಯಕರ ಮೇಲೆ ನಡೆಸುವ ಚಿತ್ರಹಿಂಸೆಯನ್ನು ಕೇಳಿದ್ದ ನಿರೂಪಕನಿಗೆ ಅದರ ಅನುಭವವಾದ ಮೇಲೆ ದಿಗ್ಭ್ರಮೆಗೊಳ್ಳುತ್ತಾನೆ. ಆ ಸಂದರ್ಭದಲ್ಲಿ ಪೊಲೀಸರು ಮಾರ್ಕ್ಸ್, ಮಾವೋ ಮತ್ತು ಗಾಂಧಿ ವಿಚಾರಧಾರೆಗಳನ್ನು ಕುರಿತು ವ್ಯಂಗ್ಯವಾಡಿರುವುದನ್ನು ಮೇಲಿನ ಸಂದರ್ಭ ಅರ್ಥಪೂರ್ಣವಾಗಿ ನಿರೂಪಿಸುತ್ತದೆ. ಇಂತಹ ವಿಡಂಬನಾತ್ಮಕ ಬರವಣಿಗೆ ಶೈಲಿಯು ಕುಂ.ವೀ. ಶ್ರೇಯಸ್ಸಿಗೆ ಪ್ರಮುಖ ಕಾರಣವಾಗಿದೆ. ನಕ್ಸಲೈಟ್ ಹೆಸರಿನಲ್ಲಿ

ಪೊಲೀಸರು ಜನಸಾಮಾನ್ಯರಿಗೆ ಕೊಡುವ ಕಿರುಕುಳದ ಜೊತೆಗೆ ಅವರ ಕರ್ತವ್ಯಹೀನ ಪ್ರವೃತ್ತಿಯ ನಗ್ನದರ್ಶನ ಭಾಷಾಪ್ರೌಢಿಮೆಯಿಂದ ಕೂಡಿದೆ. ಆದರೂ ಈ ತೆಲುಗು ಮಿಶ್ರಿತ ವಾಕ್ಯಗಳನ್ನು ಅರಗಿಸಿಕೊಳ್ಳುವ ಶಕ್ತಿ ಮೂಲಭಾಷೆಗೆ ಇದೆ ಎನ್ನುವುದನ್ನು ಕಥೆ ಕಾದಂಬರಿಗಳ ಮೂಲಕ ಕುಂ.ವೀ. ಅವರು ಸ್ಪಷ್ಟಪಡಿಸುತ್ತಾರೆ.

ಬಂಡಾಯದ ಬಹುತೇಕ ಬರಹಗಾರರು ಕೆಳವರ್ಗದವರ ಬದುಕಿನ ಸ್ಥಿತಿ ಹಾಗೂ ಸಾಧ್ಯತೆಗಳನ್ನು ಅಧಿಕೃತವಾಗಿ ಚಿತ್ರಿಸಲು ಪ್ರಯತ್ನಿಸುತ್ತಾರೆ. ಕುಂ.ವೀ. ಕೂಡ ತಮ್ಮ ಕಥೆ ಕಾದಂಬರಿಯಲ್ಲಿ ಈ ಪ್ರಯೋಗವನ್ನು ಮಾಡಿ ಯಶಸ್ವಿಯಾಗಿರುವುದನ್ನು ಕಾಣುತ್ತೇವೆ.

"ನಿಮ್ಮ ಮಾತಿಗೆ ನನ್ ಶಾಟಾನೂ ಜಮ್ಮೆನ್ನೊದಿಲ್ಲೇ ದೊಡ್ಡ ಮನುಶ್ಯೋರ್ಗಾಗೋದ್ಕೂ ಮೊದ್ಲು. ನನ್ನ ಗಂಡ ಗೊಟಕ್ಕೆಂದದ್ದೂ ನಿಜ. ನಾನು ಗಂಡಸಿನಂಗೆ ಎದೆ ಸೆಟೆಸಿ ಬದುಕಿದ್ದು ಖರೇವು... ಹರೇದಾಗ ಮಿಂಡೂರನ ಮಾಡಿದ್ದೂ ಖರೇವೂ... ಇಲ್ಲದಿದ್ರೆಲ್ಲಿ ಈಟೊಂದು ಆಸ್ತಿ ಸಂಪಾದಿಸ್ಲಿಕ್ಕಾಗ್ತಿತ್ತು... ನನ್ತಂಗೀ ಮಕ್ಕುನೇ ನನ್ ಮಕ್ಕುಂತ ತಿಳಿಕೊಂಡು ಪಾಲನೆ ಪೋಷಣೆ ಮಾಡಲೂಕಾಗ್ತಿತ್ತೊ... ನಿಮ್ಮಂಗೆ ನಾನೂ ಮಂಡೆ ಭೋಳಿಸ್ಕೊಂಡು ಮುಂಡೆಯಾಗಿ ಮೂಲಿ ಕೂಕಂಡಿದ್ರೆ ಈಟೆಲ್ಲಾ ಮಾಡಕಾಗುತ್ತಿತ್ತೇನು! ಅಲಲಲಾ ಹೇಳಾಕ ಬೊಂದು ಬಿಟ್ರ ಹಳೇ ಪುರಾಣನ... ಯಿನ್ನೊಂದು ಮಾತು ಯೋಳ್ತೀನಿ ನೆನಪಿಟ್ಕಳ್ರಭೇ... ಭೋಸುಡೇರು ನೂರೊಂದು ರ್ವಾಗ ಬೊಡುಕೊಂಡು ಮೊಣ್ಣೆತ್ತಿನ ಅಮಾಸಿ ದಿನ ಗೊಟಕ್ಕಂದ್ನೆಲ್ಲಾ ಆ ನಿಮ್ಮಾವ ಪರಮೋಸುರ ಶಾಸ್ತ್ರೀರಿ... ಆ ಶಾಸ್ತ್ರೀನೂ ನನ್ನತ್ರ ಮಲಕ್ಕಂಡು ಯ್ಯೋನುಕಿಸಿಲಾರದೆ ಹೋದವನೇ?" ನಜಭಜಜಂಜರಂ ಬಗೆಗೊಳ್ಳುತ್ತಿರೆ ಚಂಪಕಮಾಲಾ ಎಂದಪರ್ 'ಎಂದು ಮುಂತಾಗಿ ಆರಂಭಿಸುತ್ತಲೇ ಆ ಮಾದ್ಗೂಲ್ಯ ಗೋತ್ರದ ಅತ್ತೆ ಸೊಸೆಯರೆಂಬ ಸಾಹಸ ಗರ್ವಾಲಂಕೃತರೀರ್ವರು ಒಂದು ಕ್ಷಣ ಮೌನವೆಂಬ ವೈಶಂಪಾಯನ ಸರೋವರವಂ ಪೊಕ್ಕು ಮರುಕ್ಷಣ ರಸೆಯಂ ಕಾಲಾಗ್ನಿ ರುದ್ರಂ ಪೊರಮಡುವಂತೆ ಹೊರಬಂದು ಕೋಪಾರುಣರಕ್ತ ನೇತ್ರರಾಗಿ 'ಅಯ್ಯೋ... ಅಯ್ಯೋ ಅಯ್ಯಯ್ಯೋ... ವೈಕುಂಠವಾಸಿಗಳಾಗಿರೋ ನಮ್ಮ ವಂಶದ ಹಿರಿಯರ ಮೇಲೆ ಗುರುತರ ಅಪಾದನೆ ಹೊರಿಸುತ್ತಿರುವುದಲ್ಲಾ ಈ ಮುದುಕಿ... ಕಲಿಕಾಲದಲ್ಲಿ ಪಾಪಿಗಳಿಗೆ ದೀರ್ಘಾಯುಷ್ಯವನ್ನು ದಯಪಾಲಿಸಿರುವ ಓ ವೆಂಕಟರಮಣನೇ... ನಿನ್ನ ದಡ್ಡತನವನ್ನು ಎಷ್ಟೆಂದು ವರ್ಣಿಸುವುದು... ಇರಲಿ ಬಯ್ದವರ ಹೆಸರ ಮಗನಿಗಿಡಬೇಕೆಂದು ದಾಸವರೇಣ್ಯರೇ ಹೇಳಿದ್ದಾರೆ"[೨೦](ಶಾಮಣ್ಣ: ೧೮೪).

ಕುಂ.ವೀ. ಅವರ ಪೇಟೆಂಟ್ ಎಂದೇ ಖ್ಯಾತಿ ಪಡೆದಿರುವ ಅಣುಕು ಮಹಾಕಾವ್ಯಶೈಲಿ ವ್ಯಕ್ತಿಗಳ ವ್ಯಕ್ತಿತ್ವಗಳನ್ನು ಅನಾವರಣಗೊಳಿಸುವುದರಲ್ಲಿ ಉಪಯುಕ್ತವಾಗಿ ಬಂದಿದೆ. ಜಾತೀಯತೆಯ

ಚೌಕಟ್ಟಿನಲ್ಲಿರುವ ನೀತಿ-ನಿಬಂಧನೆಗಳನ್ನು ಪಾತ್ರಗಳ ಸಂವಾದದ ಮೂಲಕ ನಿರೂಪಕರು ಮಾರ್ಮಿಕವಾಗಿ ನಿರೂಪಿಸುತ್ತಾರೆ. ಈ ನಿರೂಪಣೆಯ ಸಂದರ್ಭದಲ್ಲಿ ಅಸಾಂಪ್ರದಾಯಿಕ ಪಾತ್ರಗಳ ತಮ್ಮ ನ್ಯೂನತೆಗಳನ್ನು ತಾವೇ ಮುಕ್ತಕಂಠದ ಮೂಲಕ ಆತ್ಮವಿಮರ್ಶೆ ಮಾಡಿಕೊಳ್ಳುತ್ತವೆ. ಮೇಲ್ಜಾತಿಯು ಶ್ರೇಷ್ಠ ಎಂದು ಬಗೆದಿರುವ ಮಡಿ ಮೈಲಿಗೆಗಳು ಕೆಳಜಾತಿಯವರ ಕಟುವಿಡಂಬನೆಗೆ ಒಳಗಾಗಿವೆ. ಇಂತಹ ಸಂದರ್ಭದಲ್ಲಿ ಭಾಷೆಯ ಅಂತಃಸತ್ವ ಹಾಸ್ಯ ವೈನೋದಿಕ ಸ್ವರೂಪದಲ್ಲಿ ಸ್ಪಷ್ಟವಾಗಿ ಮೂಡಿಬಂದಿದೆ.

ಕುಂ.ವೀ. ಅವರು ಬಳಸುವ ಭಾಷೆಯಲ್ಲಿ ತೆಲುಗು, ಸಂಸ್ಕೃತ, ಇಂಗ್ಲಿಷ್ ಪದಗಳು ಹೇರಳವಾಗಿ ಪ್ರಯೋಗಗೊಂಡಿವೆ. ಕನ್ನಡದೊಂದಿಗೆ ಬಳಸುವ ತೆಲುಗು ಭಾಷೆಯ ವಿಪ್ಲವ ಕವಿಗಳ ಹಾಗೂ ಪ್ರದೇಶದ ಪ್ರಭಾವವಾಗಿದ್ದರೆ ಇಂಗ್ಲಿಷ್ ಮತ್ತು ಸಂಸ್ಕೃತ ಪದಗಳು ಆರಂಭದಲ್ಲಿ ನಮ್ಮ ಭಾಷೆಯ ಮೇಲಾದ ಪ್ರಭಾವ ಮೂಲಕಾರಣವಾಗಿದೆ.

ಆದರೆ ಇದರ ಉದ್ದೇಶ ಅತಿರಂಜಕ ಮತ್ತು ಜನಪ್ರಿಯತೆಯೇ ಆಗಿದೆ ಎಂದರೆ ತಪ್ಪಾಗಲಾರದು. ಕುಂ.ವೀ. ಅವರಿಗೆ ತೆಲುಗು ಭಾಷೆಯ ಮೇಲಿರುವ ಹಿಡಿತ ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಯ ಮೇಲೆ ಇಲ್ಲ. ಇವರ ಆರಂಭದ ಬರವಣಿಗೆ ಅಬ್ಬರ ಹಾಗೂ ಮುಕ್ತ ಲೈಂಗಿಕ ವಿವರಣೆಗಳಿಂದ ಕೂಡಿದೆ. ಆದರೆ ಈಚೆಗೆ ಈ ಮಿತಿಯಿಂದ ಹೊರಬಂದು ತೀರಾ ವೈಯಕ್ತಿಕ ಜೀವನಾನುಭವಗಳನ್ನು ನೀಡುತ್ತಾರೆ. ಕೆಲವು ಭೀಕರ ಸನ್ನಿವೇಶಗಳನ್ನು ವಿವರಿಸುವ ಸಂದರ್ಭದಲ್ಲಿ ಯಾವ ಅಲಂಕಾರಗಳಿಗೂ ಮಹತ್ವ ನೀಡದೆ, ಇದ್ದದ್ದು ಇದ್ದ ಹಾಗೆ ಸ್ವಾಭಾವಿಕವಾಗಿ ಚಿತ್ರಿಸುತ್ತಾರೆ. ಹಾಗೆಯೇ ವಿಶೇಷ ಸಂದರ್ಭಗಳಲ್ಲಿ ನಿಯಮಾನುಸಾರ ಸಹಜ ಅಲಂಕಾರಗಳನ್ನು ತರುವ ಬರವಣಿಗೆ ಜಾಣ್ಮೆ ಇವರಿಗಿದೆ.

ಜಾತೀಯತೆಯ ವೈರುಧ್ಯಗಳನ್ನು ಸಾಂಸ್ಕೃತಿಕ ಒಳನೋಟಗಳನ್ನು ಚಿತ್ರಿಸುವಾಗ ಇವು ಗಟ್ಟಿ ನಿರೂಪಣೆಯಲ್ಲಿ ಉಲ್ಲೇಖಗೊಂಡಿವೆ. ಆದರೆ ಲೇಖಕರ ಇತ್ತೀಚಿನ ಬರವಣಿಗೆಯು ಕೇವಲ ಕುತೂಹಲ ಕೆರಳಿಸುವಂತಹ ಆಕರ್ಷಣೀಯ ಶೈಲಿಗೆ ಒಳಗಾಗಿರುವುದನ್ನು ಸೂಚಿಸುತ್ತದೆ.

**೪.೩.೨. ಕಥೆ ಮತ್ತು ಕಥಾವಸ್ತು**

ಕಥಾವಸ್ತುವನ್ನು ಕಥೆಯಿಂದ ಪ್ರತ್ಯೇಕಿಸುವುದು ಸಾಧ್ಯವಿಲ್ಲವಾದರೂ ವಿಚಾರದ ಅನುಕೂಲಕ್ಕಾಗಿ ಅದನ್ನು ಒಂದು ಭಿನ್ನ ವಿಶಿಷ್ಟವೆಂದು ಪರಿಭಾವಿಸಿ ನೋಡಬಹುದು. ಕಥೆ ಮತ್ತು ಕಥಾವಸ್ತುಗಳ ಈ ವಿಶಿಷ್ಟ ಏಕವ್ಯಕ್ತಿತ್ವದಲ್ಲಿ ಅವೆರಡನ್ನು ಭಿನ್ನವೆಂದು ಬಗೆಯುವುದು ಸಾಧ್ಯವಿಲ್ಲವಾದರೂ. ಸಾಹಿತಿಯ ಮನಸ್ಸಿನಲ್ಲಿ ಕಥೆಯು ರೂಪಗೊಂಡು ಬೆಳೆದು ಅಂತಿಮ ಅಭಿವ್ಯಕ್ತಿಯನ್ನು

ಪಡೆದು ನಿಲ್ಲುವ ತನಕ ನಡೆಯುವ ಪ್ರಕ್ರಿಯೆಯನ್ನು ಅವಲೋಕಿಸಿದರೆ ಅವುಗಳ ಪರಸ್ಪರ ಸಂಬಂಧವು ತಿಳಿಯುತ್ತದೆ.

ಜೀವನವೇ ಸಾಹಿತ್ಯದ ವಸ್ತು ಎಂಬುದು ನಿಜವಾದರೂ ತುಂಬಾ ಅಸ್ಪಷ್ಟವಾದ ಮಾತು. ಜೀವನವೆಂಬುದು ಪಾಶವೀ ಪ್ರವೃತ್ತಿಗಳಿಂದ ಓಡಿದು ಆಧ್ಯಾತ್ಮಿಕ ಶಿಖರದವರೆಗೆ ಶುದ್ಧ ವೈಯಕ್ತಿಕ ಅನುಭವದಿಂದ ನಿಕಟ ಸಾಮಾಜಿಕ ಮುಖಗಳವರೆಗೆ ಅರ್ಥವ್ಯಾಪ್ತಿಯುಳ್ಳದ್ದು. ಅದು ನಮಗೆ ಪರಿಚಯವಾಗುವುದು ಅನುಭವದಿಂದ. ಆದರೆ ಬರಿಯ ಅನುಭವವೇ ಸಾಹಿತ್ಯದ ವಸ್ತುವೆಂದು ಹೇಳಲಾಗುವುದಿಲ್ಲ. ಅನುಭವವು ಜೀವನವನ್ನು ನಿಕಟವಾಗಿ, ಮೂರ್ತ ವಾಗಿ ಅರಿಯಲು ಸಹಾಯ ಮಾಡುತ್ತದೆ. ಅದು ಜೀವನವೆಂಬ ಸಾಮಾನ್ಯ ವ್ಯಾಪ್ತಿಯ ಒಂದು ಸೀಮಿತ ಭಾಗ ಅಥವಾ ಮುಖ ಯಾವಾಗಲೂ ವ್ಯಕ್ತಿಗತವಾದುದು. ಆದರೆ ಜೀವನವು ವ್ಯಕ್ತಿಯಿಂದ ಪ್ರಾರಂಭವಾದರೂ ಅವನನ್ನು ಮೀರಿ ವ್ಯಾಪಿಸಿ ಹರಡಿಹೋಗಿರುವ ವೈಶಾಲ್ಯವುಳ್ಳದ್ದು.

ಕುಂ.ವೀ. ಅವರ ಅನೇಕ ಕಥೆಗಳಲ್ಲಿ ಮನುಷ್ಯನ ಮೂಲಭೂತ ಅವಶ್ಯಕವಾದ ಹಸಿವನ್ನೇ ಕೇಂದ್ರೀಕರಿಸಿದ ಕಥೆಗಳಿವೆ. ಹಸಿವಿನ ಕಾರಣಕ್ಕಾಗಿ ಕೆಳವರ್ಗ ಮತ್ತು ಮೇಲುವರ್ಗಗಳ ನಡುವೆ ಸಂಘರ್ಷ ಹೇಗೆ ನಡೆಯುತ್ತದೆ ಎಂಬುದನ್ನು ಕುಂ.ವೀ. ಅವರ ಪ್ರಾತಿನಿಧಿಕ ಕಥೆ–ಕಾದಂಬರಿಗಳಲ್ಲಿ ಕಂಡುಕೊಳ್ಳಲಾಗಿದೆ. ಬಡತನದ ಬೇಗೆಯಲ್ಲಿ ಬೇಯುತ್ತಾ ಹಸಿವಿನಿಂದ ತತ್ತರಿಸುವ ಅಧೀನ ಸಂಸ್ಕೃತಿಯ ಜನರು ತಮ್ಮ ನ್ಯಾಯಯುತ ಹಕ್ಕಿಗಾಗಿ ಪ್ರಧಾನಸಂಸ್ಕೃತಿಯ ಜನರೊಡನೆ ಹೋರಾಡುತ್ತಾರೆ. ಕೆಲವೊಮ್ಮೆ ಈ ಹೋರಾಟ ಹಿಂಸೆಯನ್ನು ಆಧರಿಸಿದ ನಕ್ಸಲೈಟ್ ಮಾದರಿಯಲ್ಲಿದೆ. ವಿಶೇಷ ಸಂದರ್ಭದಲ್ಲಿ ಸುಶಿಕ್ಷಿತ ಪಾತ್ರಗಳು ಕಾನೂನುಬಾಹಿರ ಚಟುವಟಿಕೆಗಳಲ್ಲಿ ಭಾಗವಹಿಸದೆ ತಾಳ್ಮೆಯಿಂದ ಸಂವಿಧಾನಾತ್ಮಕವಾಗಿ ಹೋರಾಡುತ್ತವೆ ಹಾಗೂ ತಮಗಾದ ಅವಮಾನ, ಅನ್ಯಾಯಗಳನ್ನು ಪರಿಹರಿಸಿಕೊಳ್ಳುತ್ತವೆ. ಇದು ಮಂದಗತಿಯ ಬೆಳವಣಿಗೆ ಯಲ್ಲಿದೆ. ಮೇಲುವರ್ಗದವರ ಜನವಿರೋಧಿ ನೆಲೆಗಳನ್ನು ವಿರೋಧಿಸುತ್ತಾ ಅದರ ಹಿನ್ನೆಲೆಯಲ್ಲಿ ಕೆಳವರ್ಗದವರ ಹಸಿವಿನ ತೀವ್ರತೆಯನ್ನು ದಾಖಲಿಸುವುದು ಕುಂ.ವೀ. ಅವರ ಬರವಣಿಗೆಯ ಮೂಲ ಉದ್ದೇಶವಾಗಿದೆ.

ಕುಂ.ವೀ. ಅವರು ಜಮೀನ್ದಾರರ ಸರ್ವಾಧಿಕಾರಿ ಪ್ರವೃತ್ತಿಯನ್ನು ನಿರ್ಭಯವಾಗಿ ಚಿತ್ರಿಸಿದ್ದಾರೆ. ಮೂಲತಃ ಕುಂ.ವೀ. ಅವರು ಬಳ್ಳಾರಿ ಸುತ್ತಮುತ್ತಲಿನ ಪರಿಸರದಿಂದ ಪ್ರಭಾವಿತರಾಗಿರುವ ಕಾರಣ ಬರವಣಿಗೆಯಲ್ಲಿ ಅಧಿಕೃತ ಶಬ್ದಚಿತ್ರಗಳ ಮೂಲಕ ವಿವರಿಸಿದ್ದಾರೆ. ಗಡಿಭಾಗದಲ್ಲಿ ಪರಂಪರಾಗತವಾಗಿ ನಡೆದುಕೊಂಡು ಬರುತ್ತಿರುವ ಜಮೀನ್ದಾರಿ ಪದ್ಧತಿ ಮತ್ತು ಅವರ ಪ್ರಾಬಲ್ಯ ಅವಿಚ್ಛಿನ್ನವಾಗಿ ಹರಡಿಕೊಂಡಿರುವುದೇ ಈ ಜೀತಪದ್ಧತಿಗೆ ಕಾರಣವಾಗಿದೆ. ಜಮೀನ್ದಾರ

ನಡೆಸುವ ಶ್ರಮದ ಶೋಷಣೆಯ ಅರಿವು ಜೀತಗಾರನಿಗೆ ಆಗಿ ಅದರ ವಿರುದ್ಧ ತಿರುಗಿ ಬೀಳುವುದೇ ಸಂಘರ್ಷಕ್ಕೆ ಕಾರಣವಾಗಿದೆ. ಹೀಗೆ ಜಮೀನ್ದಾರ ಮತ್ತು ಜೀತದಾಳುವಿನ ನಡುವೆ ನಡೆಯುವ ಸಂಘರ್ಷದ ಬಹುಮುಖ ಸ್ವರೂಪಗಳನ್ನು ಕುಂ.ವೀ. ಅವರ ಕಥಾಸಾಹಿತ್ಯದಲ್ಲಿ ಕಾಣಲಾಗಿದೆ. ಬಹಳಷ್ಟು ಕಥೆಗಳಲ್ಲಿ ಕೆಳವರ್ಗದವರ ಕರುಣಾಜನಕ ಜೀವನ ಚಿತ್ರಣಗೊಂಡಿವೆ. ಕುಂ.ವೀ. ಬಂಡವಾಳಶಾಹಿ ಅಧಿಕಾರಶಾಹಿ ಮತ್ತು ಜಮೀನ್ದಾರಿ ವ್ಯವಸ್ಥೆಯ ದುರ್ನೀತಿಗಳನ್ನು ಬಯಲಿಗೆಳೆದು ದಮನಕ್ಕೊಳಗಾದ ವ್ಯಕ್ತಿಯಲ್ಲಿ ಸುಪ್ತವಾಗಿರುವ ಸ್ವಾಭಿಮಾನ ಸಿಟ್ಟು ಮತ್ತು ಆಕ್ರೋಶಗಳಿಗೆ ಚಾಲನೆಯನ್ನು ನೀಡಿದ್ದಾರೆ. ಇದು ಕೇವಲ ವ್ಯಕ್ತಿಗತವಾದ ನಿಲುವಿನಲ್ಲಿರದೆ ಸಾಮೂಹಿಕವಾದ ಸಂಘಟನೆಯಲ್ಲಿ ಕಂಡುಬಂದರೆ ಮಾತ್ರ ಅನ್ಯಾಯ, ಅಕ್ರಮಗಳ ಪ್ರಮಾಣ ಇಳಿಮುಖವಾಗುತ್ತದೆ ಎಂಬುದನ್ನು ಕುಂ.ವೀ. ಸೂಚಿಸುತ್ತಾರೆ. ಕುಂ.ವೀ. ಅವರ ಸಮಾಜವಾದಿ ತತ್ವದ ಪಾತ್ರಗಳು ಮೇಲುವರ್ಗದವರ ಶೋಷಣೆ ಮತ್ತು ದೌರ್ಜನ್ಯಗಳಿಗೆ ಪ್ರಜ್ಞಾಪೂರ್ವಕವಾಗಿ ಪ್ರತಿಕ್ರಿಯಿಸುತ್ತವೆ. ಬೂರ್ಜ್ವಾ ವ್ಯಕ್ತಿತ್ವದ ರಾಜಕಾರಣಿಗಳ ಬಣ್ಣವನ್ನು ಕುಂ.ವೀ. ಲೇವಡಿ ಮಾಡಿದ್ದಾರೆ. ಇವರು ವಿಪ್ಲವ ಸಾಹಿತ್ಯ ಮತ್ತು ತೆಲುಗು ಕವಿಗಳಿಂದ ಪ್ರಭಾವಿತರಾದರೂ ಇವರ ಸಾಹಿತ್ಯ ಮಾತ್ರ ಸಹಾನುಭೂತಿಪರ ನಕ್ಸಲೈಟ್ ಸಾಹಿತ್ಯವೇ ಹೊರತು. ನಕ್ಸಲೈಟ್ ಮಾದರಿಯ ಅಧಿಕೃತ ಸಾಹಿತ್ಯ ಅಲ್ಲ. ಶ್ರೀಯುತರು ಆ ಚಳುವಳಿಯೊಂದಿಗೆ ನೇರವಾಗಿ ಸೇರಿಕೊಳ್ಳದೆ ಹೊರಗಿನಿಂದಲೇ ಸಹಕರಿಸುವುದನ್ನು ಕಥೆ–ಕಾದಂಬರಿಗಳು ಸ್ಪಷ್ಟವಾಗಿ ಸೂಚಿಸುತ್ತವೆ. ಕೆಲವು ಸಂದರ್ಭಗಳಲ್ಲಂತೂ ನಿರೂಪಕರು ಅಲ್ಲಿನ ಭೀಕರವಾದ ಸಂದರ್ಭಗಳನ್ನು ಎದುರಿಸ ಲಾರದೆ ಪಲಾಯನ ಮಾಡುತ್ತಾರೆ. ಇಂತಹ ಬರ್ಬರತೆಯ ಭೀಕರ ಹಿಂಸಾಚಿತ್ರಣಗಳು ಮೈಸೂರು ಪ್ರಾಂತದ ಸಾಹಿತ್ಯಾಸಕ್ತರನ್ನು ಬೆಚ್ಚಿ ಬೀಳಿಸುತ್ತವೆ. ಜಮೀನ್ದಾರಿ ಕ್ರೌರ್ಯವೂ ಕೂಡ ಅಷ್ಟೇ ಭೀಕರವಾಗಿ ಅವರ ಸಾಹಿತ್ಯದಲ್ಲಿ ವ್ಯಾಪಿಸಿರುವುದನ್ನು ಕಾಣುತ್ತೇವೆ. ಮೇಲುವರ್ಗದವರ ಲೈಂಗಿಕ ಹಸಿವಿಗೆ ಬಲಿಯಾಗುವ ಕೆಳವರ್ಗದವರ ಅಸಹಾಯಕತೆ ಯನ್ನು ಕುಂ.ವೀ. ಕಣ್ಣಿಗೆ ಕಟ್ಟುವಂತೆ ವಿವರಿಸುತ್ತಾರೆ. ಆದರೆ ಲೈಂಗಿಕ ವಿಷಯಕ್ಕೆ ಸಂಬಂಧಿಸಿದಂತೆ ಬರುವ ಚಿತ್ರಣಗಳು ಮಾತ್ರ ಅತಿರಂಜಕತೆಯಿಂದ ಕೂಡಿವೆ ಎನಿಸುತ್ತದೆ.

ಕುಂ.ವೀ. ಅವರ ಕಥಾಸಾಹಿತ್ಯದಲ್ಲಿ ಅಧಿಕಾರಿಗಳು ಮೇಲುವರ್ಗದ ಪ್ರತಿನಿಧಿಗಳಾಗಿ ಬರುತ್ತಾರೆ. ಇವರು ಕೆಳವರ್ಗದವರನ್ನು ಶೋಷಣೆ ಮಾಡುವುದರಲ್ಲಿ ಯಾವ ಜಮೀನ್ದಾರರಿಗೂ ಹಿಂದೆ ಬಿದ್ದಿಲ್ಲ. ಸರ್ಕಾರಿ ಮತ್ತು ಖಾಸಗಿ ವಲಯಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಪೊಲೀಸರು, ವೈದ್ಯರು, ಬಸ್ ಕಂಡಕ್ಟರ್‌ಗಳು ಪ್ರಾಮಾಣಿಕವಾಗಿ ಕರ್ತವ್ಯ ನಿರ್ವಹಿಸದೆ ಬಡವರನ್ನು, ನಿರ್ಗತಿಕರನ್ನು ಹಾಗೂ ಅಮಾಯಕರನ್ನು ಹಣಕ್ಕಾಗಿ ಮತ್ತು ಸ್ವಾರ್ಥಕ್ಕಾಗಿ ಬಲಿಪಶುಗಳನ್ನಾಗಿ ಮಾಡುತ್ತಿರುವ ಸಾಕಷ್ಟು ಸನ್ನಿವೇಶಗಳನ್ನು ಕುಂ.ವೀ. ತಮ್ಮ ಕಥೆ

ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ. ಕೇವಲ ಹಣ, ಅಂತಸ್ತು ಮತ್ತು ಅಧಿಕಾರಿಗಳೇ ಶ್ರೇಷ್ಠವೆಂದು ಬಗೆದಿರುವ ಈ ಅಧಿಕಾರಿವರ್ಗ ಪ್ರಮಾಣದಲ್ಲಿ ಕಡಿಮೆ ಇದ್ದರೂ ಪ್ರಭಾವ ಬೀರುವುದರಲ್ಲಿ ಅಧಿಕವಾಗಿದೆ. ಇಡೀ ವ್ಯವಸ್ಥೆಯನ್ನೇ ಬುಡಮೇಲು ಮಾಡುವ ಶಕ್ತಿ ಇವರಿಗಿದೆ. ಯಾವುದೇ ಜಾತಿಯ ಮತ್ತು ವರ್ಗದ ಚೌಕಟ್ಟಿನೊಳಗೆ ಬಾರದ ಇವರು ದರ್ಪ ಮತ್ತು ದುರಹಂಕಾರದಿಂದ ತಮ್ಮ ಕೈಕೆಳಗಿನ ನೌಕರರನ್ನು ಹಾಗೂ ಪ್ರಜೆಗಳನ್ನು ವಿನಾಕಾರಣ ಹಿಂಸಿಸುತ್ತಾರೆ. ಆರ್ಥಿಕವಾಗಿ, ರಾಜಕೀಯವಾಗಿ ಮತ್ತು ಸಾಮಾಜಿಕವಾಗಿ ತೀರ ಹಿಂದುಳಿದ ಕೆಳವರ್ಗ ತಮಗಾದ ಮಾನಸಿಕ ಮತ್ತು ದೈಹಿಕ ಶೋಷಣೆಗೆ ಪ್ರತ್ಯುತ್ತರವನ್ನು ನೀಡುವ ಸಂದರ್ಭದಲ್ಲಿ ಎರಡು ವರ್ಗಗಳ ನಡುವೆ ಸಂಘರ್ಷ ಏರ್ಪಟ್ಟು ಅದು ಬಹುಮುಖಿ ರೂಪಗಳನ್ನು ಪಡೆದುಕೊಳ್ಳುತ್ತದೆ. ಕುಂ.ವೀ. ಕಥಾಸಾಹಿತ್ಯದ ಬಹಳಷ್ಟು ಪಾತ್ರಗಳು ಅವಿದ್ಯಾವಂತರಾಗಿರುವುದರಿಂದ ತಾಳ್ಮೆಯಿಂದ ಆಲೋಚನೆ ಮಾಡುವುದು ತೀರ ವಿರಳವಾಗಿದೆ. ಹಾಗಾಗಿಯೇ ಹಲವು ಸಂದರ್ಭಗಳಲ್ಲಿ ಮೇಲುವರ್ಗದವರ ದಮನಕಾರಿ ವರ್ತನೆಗೆ ಪ್ರತಿಯಾಗಿ ತತ್‌ಕ್ಷಣದಲ್ಲಿ ನಕ್ಸಲೈಟ್ ಮಾದರಿಯ ಮೂಲಕ ಪ್ರತಿಭಟಿಸುತ್ತಾರೆ.

**೪.೩.೩. ದೇಸಿ ಸಂವೇದನೆಯ ಸಮಗ್ರ ಗ್ರಹಿಕೆ**

ಕುಂ.ವೀ. ಅವರ ಸಣ್ಣಕತೆಗಳು ಕಥಾಸಾಹಿತ್ಯದಲ್ಲಿಯೇ ಆಗಲಿ ಅಥವಾ ಕಾದಂಬರಿ ಸಾಹಿತ್ಯದಲ್ಲಿಯೇ ಆಗಲಿ ಜನಮುಖಿ ಸಂವೇದನೆಯ ಬಹುರೂಪಿ ಜೀವನಾನುಭವವನ್ನು, ನೊಂದ ಸಮುದಾಯಗಳ ದಟ್ಟ ಜೀವನಾನುಭವವನ್ನು ದೇಸೀ ಸಂವೇದನೆಯ ದನಿಯಿಂದ, ಸಮಷ್ಟಿ ಗ್ರಹಿಕೆಯಿಂದ ಕುಂ.ವೀ ತಮ್ಮ ಪಾತ್ರಗಳಲ್ಲಿ ಕಟ್ಟುತ್ತಾರೆ. ಕುಂ.ವೀ. ಅವರು ಬದುಕನ್ನು ಕುತೂಹಲದ ಕಣ್ಣಿಂದ ನೋಡುತ್ತಾರೆ. ಕುಂ.ವೀ. ಅವರದು ಕಥನಕ್ಕೊಗ್ಗಿದ ಪ್ರತಿಭೆ. ಸಮಾಜದ ನಿರ್ಲಕ್ಷಿತ ಜನರ ಜೀವನವನ್ನು ಅವರಷ್ಟು ಸಮೀಪದಿಂದ ಹಾಗೂ ಆಳವಾಗಿ ನೋಡಿದವರು ಅವರ ಸಮಕಾಲೀನರಲ್ಲಿ ತೀರಾ ವಿರಳವೆಂದೇ ಹೇಳಬಹುದು. ದಟ್ಟವಾದ ಅನುಭವ, ಸೂಕ್ಷ್ಮ ವಿವರಣೆಗಳಿಂದ ಕೂಡಿದ ನಿರೂಪಣೆ ಭಾಷೆಯ ಮೂಲಕವಾಗಿಯೇ ಪಾತ್ರಗಳನ್ನು ಜೀವಂತ ಗೊಳಿಸುವ ಕಲೆ ಇವರಿಗೆ ಸಿದ್ಧಿಸಿದೆ.

ಕುಂ.ವೀ. ಅವರ ದೇಸಿ ಸಂವೇದನೆಗೆ ಉತ್ತಮ ಉದಾಹರಣೆ ಎಂದರೆ ಅವರ 'ಭಗವತಿಕಾಡು'. ಕಥೆಯ ಅತ್ತೆ-ಸೊಸೆಯರ ಜಗಳ ನಿಜಕ್ಕೂ ಕೆಳಗೇರಿಯ ಮಂದಿ ಊಟಕ್ಕಲ್ಲ ದಿದ್ದರೂ ಜಗಳಕ್ಕೇನೂ ಕಮ್ಮಿ ಇಲ್ಲ. ಜಗಳವಾಡಿ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದರು ಎನ್ನುವಂತೆ ಮುದುಕಿ ಅತ್ತೆ ಮತ್ತು ಸೊಸೆ ನಾಗವ್ವಳ ನಡುವೆ ನಡೆಯುವ ಈ ಸಂಭಾಷಣೆ ನೋಡಿದರೆ ಕುಂ.ವೀ. ಅವರ ಪ್ರಾದೇಶಿಕತೆಯ ಪರಿಚಯವಾಗುತ್ತದೆ.

'ಅದ್ಯೋನುಬ್ಬಗುಳ್ಳಿ... ಬ್ಬಗುಳೇ 'ವರಸಿನಿಂದ ಮುಂಡವನ್ನು ಮೇಲಕ್ಕೆತ್ತಲಾರದೆ ಎತ್ತುತ್ತ ಕನಲಿ ಕೇಳಿತು. 'ನನ್ನೂ ನನ್ ಮಗನ್ನೂ ಅಡಿಕೆಂತೀಯಾ... ನನ್ ಮಗ ಗಂಡ್ಸಲೇ... ಅವ್ನು ಇಸಪೀಟಾದ್ರೂ ಆಡ್ತಾನೆ ಟೇಮು ಬೊಂದ್ರೆ ಸೂಳಾರ್ನಾರ ಮಾಡ್ತಾನೆ... ಅದ್ನಕ್ಕೇಳಾಕೆ ನೀನ್ಯಾವೂರ ಅಪ್ಪಾಜ್ಜಪ್ಪನ ಮೊಗ್ಳೇ... ಕ್ಲಕ್... ಕ್ಲಕ್... ಹ್ಹ್... ಹ್ಹ್... ಹ್ಹ್..."

'ಯಾವೋಳು ಯಾಕಾತೀನ್ಯೋ... 'ನಾಗವ್ವ ಸೀರೆ ಮೇಲೆತ್ತಿ ಕಟ್ಟಿದರಲ್ಲದೆ ತುರುಬನ್ನು ಬಿಗಿದು ಸಜ್ಜಾಗಿ ಹೇಳಿದಳು. 'ಥಾಳಿ ಕಟ್ಟಿಸ್ಕಂಡೀರೋವತ್ಗೆ ನಿನ್ ಕೊಟಾಗ ಥೂ ಥೀ ಅನ್ನಿಸ್ಗಂತ ಬಿದ್ದಿದ್ದೀನಿ... ಮನಿ ಸ್ವಸಿ ಅನ್ನೋ ಖಬರಿಲ್ದೆ ಮಾತಾಡ್ತೀಯಾ... ಆತ ನಿಂಗ ಮೊಗ ಆಗಿರಬವ್ವು, ನಾನಾತ್ನ ಯಂಡ್ತಿ... ಇಗೋ ನಾಡು... ಕ್ವಳ್ಳಾಗ ಥಾಳಿ ಯಂಗ ಥಳಥಳಾ ಅಂತೈತೆ...

ಗಲಾಟೆಗೆ ಒಲೆಯಲ್ಲಿ ಮಲಗಿದ್ದ ಬೆಕ್ಕು ಹೊರಬಂದು ಅಳುತ್ತಿದ್ದ ಕೂಸಿನ ಮುಖಕ್ಕೆ ಬಾಲಮಂದಿರ ಗಾಳಿ ಬೀಸುತ್ತ ಮ್ಯಾಂವ್ ಗುಟ್ಟತೊಡಗಿತು. 'ಯಾಳೂರು ಕಾಗೆ ಯೆಬುಸೋವ್ಕೆ ಥಾಳಿ ಒಂದ್ಕೇಡು... ಹ್ಹ್... ಹ್ಹ್... ಕ್ವಕ್... ಕ್ವಕ್... 'ಗಂಟಲು ಬಿಟ್ಟು ಬರದೆ ಹಠ ಹಿಡಿದಿದ್ದ ಕಫ ಕಿತ್ತಲು ವಿಫಲಳಾಗಿ ಮುದುಕಿ ಹೇಳಿತು. 'ಕಾಡಿಗಣ್ಣೋಳು ಬ್ಯಾಡೇ... ಬ್ಯಾಡಾ... ಮಾಡ್ಕಂಡ್ರೆ ಮನೀವುಳ್ಳೇದಾಗಲ್ಲ ಅಂತೆ ಬೊಡ್ಕಂಡೆ. ನನಗುಟ್ಟಿದ ಮೊಗ ನನ್ಮತ್ರ ಕೇಳ್ಯಾನ್ ಹ್ಹ್... ಹ್ಹ್."

ಅತ್ತೆ ಸೊಸೆ ಬದ್ಧ ವೈರಿಗಳಂತೆ ಜಗಳಾಡೋದು ಮಾಮೂಲಾಗಿದೆಯಲ್ಲ ಎಂಬ ಆತಂಕದಿಂದ ಅರ್ಜುನ ಕುಂಯ್ ಕುಂಯ್ ಎಂಬ ತನ್ನ ನಾಯಿಭಾಷೆಯಲ್ಲಿ ಏನೋ ಬುದ್ಧಿ ಹೇಳಲು ತೊಡಗಿದ್ದರ ಕಡೆ ಹುಲುಮಾನವ ಗಮನ ಮಾತ್ರವಿರಲಿಲ್ಲ.

"ಹ್ಹಾ... ಹ್ಹಾ... ಆಣೆಗಾಲ್ನೋನ ಮಾಡಿಕ್ಯಾಬ್ಯಾಡಾ ಮಾಡ್ಕೆಂಡ್ರೆ ಒಂದೊತ್ತು ಕೂಳು ಕಾಣಾ... ಒಂಚೂರು ಬಟ್ಟೆ ಕಾಣಾ... ಅಂತ ನಮಪ್ಪಯ್ಯೋಳೇಯೋಳ್ದ... ನಾನು ಕ್ಯೋಳಿದ್ನಾ... ಆತ ತೊಟ್ಟುಕೊಂಡಿದ್ದ ಟ್ರವುಜರ್ಗೆ ಮೊಳ್ಳಾಗಿವಪ್ಪದ್ನೋಡು. ನಂಗೆ ಬುದ್ದಿ ಕಡ್ಮಿ... ನನ್ ಮಾಡ್ಕೆಳ್ಳಾಕೆ ಯಂಥೆಂಥ ತಳವಾರ್ರೆ ಬೊಂದು ಹೋದ್ರು... ನಾನ್ನೂ ಅಂದಿದ್ರೆ ತೆರವು ಕಟ್ಟಿ ಮಾಡ್ಕೊಂಡೋಗಿ ಸುಕ್ವಾಗಿಡಿತಿದ್ರು... ಅಯ್ಯೋ ನನ್ನ ಕುರುಮಾವೆ ಮಿಂಜಾಲಿದ್ರೆ ಭಂಜಿಕಿಲ್ಲ... ಭಂಜಿಕಿದ್ರೆ ಮಿಂಜಾಲಿಗಿಲ್ಲ... ಮೆಯ್ಗೆ ಬಟ್ಟೆ ಕಾಣ್ದೇ ಯೇಸೋ ವರ್ಷಾದ್ರು..."[೨೧]

ಕುಂ. ವೀರಭದ್ರಪ್ಪನವರ ಕಥೆ-ಕಾದಂಬರಿಯಲ್ಲಿ ಬರುವ ಪಾತ್ರಗಳು ಕೇವಲ ಕಾಲ್ಪನಿಕ ಪಾತ್ರಗಳಾಗದೆ ವಾಸ್ತವಿಕ ಅನುಭವಗಳಿಂದ ಕೂಡಿದ ಪಾತ್ರಗಳಾಗಿವೆ. ಕೆಳಜಾತಿ ಮತ್ತು ಕೆಳವರ್ಗದ ಪಾತ್ರಗಳ ಕರುಣಾಜನಕ ಜೀವನವನ್ನು ಅರ್ಥಪೂರ್ಣವಾಗಿ ಚಿತ್ರಿಸುವುದರ

ಜೊತೆಗೆ ಮೇಲುವರ್ಗದ ಮತ್ತು ಮೇಲುಜಾತಿಯ ಪಾತ್ರಗಳು ತಮ್ಮದೇ ಆದ ಹಣ ಅಂತಸ್ತು ಮತ್ತು ಅಧಿಕಾರಗಳ ಹಿನ್ನಲೆಯಲ್ಲಿನ ದರ್ಪ, ದುರಂಹಕಾರಗಳ ಚಿತ್ರಣಗಳನ್ನು ಅಧಿಕೃತವಾಗಿ ಚಿತ್ರಿಸಿದ್ದಾರೆ. ಇವರ ಕಥಾಸಾಹಿತ್ಯದಲ್ಲಿ ಬರುವ ಪಾತ್ರಗಳಿಗೆ ತಮ್ಮದೇ ಆದ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನಲೆ ಇದೆ. ಈ ಪಾತ್ರಗಳು ಎಂತಹ ಸಂಘರ್ಷದ ಸನ್ನಿವೇಶಗಳಲ್ಲೂ ನ್ಯಾಯಕ್ಕಾಗಿ ಹೋರಾಡುತ್ತವೆ. ತಾವು ತಮ್ಮ ಅಸ್ತಿತ್ವಕ್ಕಾಗಿ ಭಗೀರಥ ಪ್ರಯತ್ನ ಮಾಡಬೇಕಾಗಿ ಬಂದಿರುವುದು ವ್ಯವಸ್ಥೆಯ ಕ್ರೂರತೆಯಲ್ಲಿ ವಿಚಿತ್ರವೆನಿಸಿದರೂ ಅದು ಸತ್ಯಸಂಗತಿಯಾಗಿದೆ.

"ಕಪ್ಪು ನೆಲದಲ್ಲೊಂದು ಕೆಂಪು ಕತೆ"ಯಲ್ಲಿ ಪರತನ ಬದುಕಿನ ಚಿತ್ರಣ ಕಥೆಗಾರರ ಕೈಯಲ್ಲಿ ಬಡತನದ ವಿರಾಟ್‌ರೂಪವನ್ನೇ ತೆರೆದಿಟ್ಟಿದೆ. "ಅವೊತ್ತು ಬೇಸ್ತವಾರ ಕೊಟ್ಟೂರು ಸಂತೆ. ಮಾದರ ಗೇರಿಯ ಪರತ ದಡ್ಡುಬಿದ್ದಿರೋ ಹೆಗಲ ಮೇಲೆ ಹಂಡೇಚೀಲ ಹಾಕಿಕೊಂಡು ಬಂಡಿ ಜಾಡಿನಲ್ಲಿ ಕೊಟ್ಟೂರು ಕಡೆ ಪುಟುಪುಟು ನಡೆಯುತ್ತಿರುವನು. ಹೊತ್ತುನೆತ್ತಿಗೆ ಬರಲು ಕೇವಲ ಒಂದೆರಡು ಮಾರು ಕಡಿಮೆ ಇದೆ. ಆಗಲೆ ಮಣ್ಣಿನಲ್ಲಿ ಕಾಲು ಇಡುವಂತಿಲ್ಲ. ಮಂಡಾಳು ಬಟ್ಟಿ ಹಂಚಿನಂಥಾ ನೆಲ. ಸಂತೆಗೆ ಅಂತ ಮುಂಜಾನೆ ಊರು ಬಿಟ್ಟೆರೋರು ಇಷ್ಟು ಹೊತ್ತಿಗಾಗಲೇ ಕೊಟ್ಟೂರು ಸೇರಿ ಸಂಕ್ರಪ್ಪನ ಈರಸೈವ ಕಾಫೀ ಕ್ಲಬ್ಬಿನಲ್ಲಿ ಚಾ ಚಿಪ್ಪುಗಳನ್ನು ಹಿಡಿದುಕೊಂಡು ಅರಾಮ ಕೂತಿರಬಹುದು. ಪರತ ಮುಂಜಾನೆ ಹೊರಡೋನೆ. ಮುದುಕಿ ಸುಂಕಿಲಿ ಗೌಡರಿಂದ ಕೂಲಿ ಕಾಸು ಮೂರು ಪಾವ್ಲಿ ಇದುಕೊಂಡು ಬರ್ತಿನಿ ಅಂತ ಹೋದಾಕಿ ಬಂದದ್ದು ಹೊತ್ತು ಎರಡು ಮೂರು ಮೇಲೆ ಏರಿದ ಮೇಲೆಯೇ. ಅಲ್ಲಿ ಇಲ್ಲಿ ಹಳೇದು ಪಳೆದು ಎಲ್ಲಾ ಜಮಾ ಮಾಡಿಕೊಳ್ಳೋ ಹೊತ್ತಿಗೆ ಅಷ್ಟು ಹೊತ್ತಾಗಿತ್ತು. ನಿನ್ನೆದು ಗೌಡ್ರುಮನಿ ತಂಗಳು ಬಾನ ಪುಂಡಿಪಲ್ಯ ನಾಕು ತುತ್ತು ತಿಂದು ಒಂದು ಚರಿಗೆ ನೀರು ಕುಡಿದ ಮೇಲೆ ಪರತನ ಮುಖದಲ್ಲಿ ಕಳೆ ಬಂದಿತ್ತು. ತಾನೆ ಬಂದೋಬಸ್ತು ಹೊಲಿದಿಟ್ಟುಕೊಂಡಿದ್ದ ಜಿರಿಕೆ ಚಪ್ಪಲಿಯು ಉಂಗುಟಕ್ಕೆ ಒತ್ತದಿರಲಿ ಅಂತ ಒಂದಿಷ್ಟು ಸೀರೆ ತುಂಡು ಕಟ್ಟಿದ್ದು ಬೇಷೆ ಆಯ್ತು. ಇಲ್ಲಾಂದರೆ ಈ ನೆಲದ ಕಾವಿಗೆ ಕಾಲು ಬೊಟ್ಟೆ ಕಿತ್ತರೂ ಕೀಳುತಿತ್ತು. ಸುಡೋ ಮಣ್ಣಿನ ಹುಡಿ ಕಾಲಿನ ಮ್ಯಾಲೆ ಬಿದ್ದಾಗಲೆಲ್ಲ ಚೇಳು ಕುಟುಕಿದಂಥ ಬ್ಯಾನಿ. ಗೊಬ್ಬೆ ಎದ್ದು ಎದ್ದೂ ದಡ್ಡು ಬಿದ್ದಿರೋದ್ರಿಂದ ಪರತನ ಕಾಲುಗಳ ಮೇಲೆ ಬೆಂಕಿ ಬಿದ್ರೂನು ಏನೂ ಆಗುವುದಿಲ್ಲ"[೨](ಕಪ್ಪು ನೆಲದಲ್ಲೊಂದು ಕೆಂಪು ಕಥೆ, ಪು. ೯೩-೯೪).

ಕುಂ.ವೀ. ಅವರ ಸೂಕ್ಷ್ಮ ಗ್ರಹಿಕೆಗೆ ಈ 'ಕಪ್ಪು ನೆಲದಲ್ಲೊಂದು ಕೆಂಪು ಕಥೆ' ಭಾಗದಲ್ಲಿ ಬರುವ ಪರತನ ಪರಿಚಯ, ಅವನು ಕೊಟ್ಟೂರು ಸಂತೆಯಲ್ಲಿ ಎಣ್ಣೆ ತರಲು ಬಾಟಲಿಗಳನ್ನು ಒಂದಕ್ಕೊಂದು ಕಟ್ಟಿಕೊಂಡು ಹೆಗಲಿಗೆ ಇಳೀ ಬಿಟ್ಟುಕೊಂಡು ನಡೆಯುವ ರೀತಿ ಇವೆಲ್ಲವನ್ನು

ಕಂಡಾಗ ೮೦ರ ದಶಕವಲ್ಲಿ ಬರಗಾಲಪೀಡಿತವಾದ ಗ್ರಾಮೀಣ ಬದುಕಿನ ಚಿತ್ರಣ ನಮ್ಮ ಕಣ್ಣ ಮುಂದೆ ಸುಳಿಯುತ್ತದೆ.

ಕುಂ.ವೀ. ಅವರು ಪ್ರಚಲಿತ ವ್ಯವಸ್ಥೆಯಲ್ಲಿ ಬೇರು ಬಿಟ್ಟಿರುವ ಸಾಮಾಜಿಕ, ರಾಜಕೀಯ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಸಮಸ್ಯೆಗಳನ್ನು ಸ್ಥಿತಿಗಳನ್ನು ಕಟ್ಟಿಕೊಡುವಾಗ ಭಾವಾವೇಶಕ್ಕೆ ಒಳಗಾಗದಂತೆ ಕಂಡುಬಂದವರೂ ವಿಚಾರಗಳು ಮಾತ್ರ ವಾಸ್ತವ ಸಾಮಾಜಿಕ ನೈಜ ಚಿತ್ರಣಗಳೇ ಆಗಿವೆ.

"ನನಗೇನು ಅಷ್ಟು ಪರಿಚಿತವಲ್ಲದ ಕೊತ್ತಲಿಯಲ್ಲಿ ಇಳಿದಾಗ ಇಳಿಹೊತ್ತು ಶುರುವಾಗಿತ್ತು. ಕೆಲವು ಹೆಜ್ಜೆ ನಡೆದು ಮೂರುದಾರಿ ಶುರುವಾದ ವೃತ್ತದಲ್ಲಿ ನಿಂತೊಡನೆ ದುತ್ತನೆ ಕೊಟ್ಟೂರು ಎದೆಯೊಳಗೆ ಬೇತಾಳದಂತೆ ನಿಂತುಕೊಂಡಿತು. ದುಃಖ ಜೋಬದ್ರ ಹೃದಯ ಭಾಗವನ್ನು ಹಿಂಡಿ ಹಿಪ್ಪೆ ಮಾಡಿ ಮಣ್ಣು ಮುಕ್ಕಿದ ಹಾವಿನಂತೆ ಎಳೆದಿರುವ ಅನೇಕ ಬಡಾವಣೆಗಳು. ಆ ಬಡಾವಣೆ ಗಳೊಳಗೆ ಸದಾ ಹಣಕ್ಕಾಗಿ ಹಪಹಪಿಸುತ್ತಿರುವ ರಕ್ತದೊತ್ತಡದ ಶೋಭಾಯಮಾನ ರೋಗಿಗಳು ಧರ್ಮಪತ್ನಿಯ ಸೊಗಸಾದ ಕಣ್ಣುಗಳಿಗೆ ಕಾಣದಂತೆ ತಿಂಡಿತೀರ್ಥ ಕುರುಕುತ್ತ ಮೆಡಿಕಲ್ ಶಾಪುಗಳಿಗೆ ಆಧಾರಸ್ತಂಭದಂತಿರುವ ಸಿಹಿಮೂತ್ರ ರೋಗಿಗಳು, ಪಾತಿವ್ರತ್ಯದ ಮುಂಭಾರ, ಹಿಂಭಾರದಿಂದ ನಲುಗಿರುವ ಕೈತೋಟಗಳ ಮುಂಗಟ್ಟೆಗಳ ಮೇಲೆ ಪರ್ಜನ್ಯ ಜಪ ಮಾಡುತ್ತಿರುವಂತೆ ಮಂಕಾಗಿ ಕುಂತಿರುವ ತುಂಬು ಮುಖದ ಗೃಹಿಣಿಯರು. ಒಳಉಡುಪುಗಳ ಬಗ್ಗೆ ಮುತುವರ್ಜಿ ವಹಿಸುವುದರ ಜೊತೆಗೆ ಕಣ್ಣು ಹುಬ್ಬಿನ ಅನಗತ್ಯ ಕೂದಲನ್ನು ಬುಡಸಹಿತ ಕಿತ್ತೆಸೆಯುವ ಅತ್ಯಾಧುನಿಕ ಚಿಮಟಗಳಿಗಾಗಿ ಫ್ಯಾನ್ಸಿ ಸ್ಟೋರುಗಳಿಗೆ ದಟ್ಟಂಡಿ ದಾರುಂಡಿ ಅಲೆಯುತ್ತಿರುವ ಯುವತಿಯರು. ಕಾಂಡೂಮ್ಯ, ಹೇರ್‌ಡೈಕವರ್ರೊ, ಹೇರ್ ರಿಮೂವರ್ ಪಾಕೆಟ್ಟು ಬ್ಲೇಡೋ ಇಂಥಪ್ಪ ತರಾವರಿ ನಿರುಪಯುಕ್ತ ವಸ್ತುಗಳಿಂದಲೇ ತುಂಬಿ ಹೋಗಿರುವ ಮುನಿಸಿಪಾಲಿಟಿ ಕಸದ ತೊಟ್ಟಿಗಳು, ಚಳುವಳಿಗಾರರಿಂದ ತಡೆಯಲ್ಪಟ್ಟ ಕ್ಷಣದಿಂದ ನಿಂತು ತುಕ್ಕು ಹಿಡಿದು ಹೋಗಿರುವ ರೈಲುಗಾಡಿ... ಭಾರತದ ಕಾನೂನು ಸಂಹಿತೆಯ ಕಲಮುಗಳನ್ನು ನಾಲಿಗೆ ಮೇಲೆ ಬರೆದುಕೊಂಡು ಸವರ್ಣೀಯರ ಮೇಲೆ ಹೂಂಕರಿಸುತ್ತಿರುವ ಅರೆವಿದ್ಯಾವಂತ ದಲಿತರು, ಕುರುಕಲು ತಿಂಡಿಗಳನ್ನು ಜನಪ್ರಿಯಗೊಳಿಸುತ್ತಿರುವ ತಳ್ಳೋ ಬಂಡಿಗಳು ಶ್ವಾನ ಸಂತಾನದ ಬಗ್ಗೆ ಕಾಳಜಿ ವಹಿಸುತ್ತಿರುವ ಕೌನ್ಸಿಲರುಗಳ ಹಿಂಸೆ, ಮತ್ತು ಲೈಂಗಿಕ ಚಟುವಟಿಕೆಗಳಿಂದಾಗಿ ನಾಡಿನುದ್ದಗಲಕ್ಕೂ ಹೆಸರು ಮಾಡಿರುವ ಖಡ್ಗದಂಥ ಪತ್ರಿಕೆಗಳು, ವಿದ್ಯಾರ್ಥಿಗಳಿಗೆ ಹೆದರುತ್ತಿರುವ ಅವಿದ್ಯಾವಂತ ಉಪನ್ಯಾಸಕರು, ಕಲಿತಂಥ ಒಂದೊಂದು ಅಕ್ಷರವನ್ನು ಒಂದೊಂದು ಆಯುಧ ಮಾಡಿಕೊಂಡು ಚಿಗುರುಮೀಸೆ ತಿರುತ್ತಿರುವ ವಿದ್ಯಾರ್ಥಿಗಳು, ಗೊನೋರಿಯಾ ಸಿಫಿಲಿಸ್ ಇವೇ ಮೊದಲಾದ ರೋಗ ರುಜಿನಗಳು ಮಡುಗಟ್ಟಿರುವ

ಮೂತ್ರಾಲಯಗಳು, ಲೈಂಗಿಕ ಸಾಹಿತ್ಯದ ತುಂಡುಗಳಿಗೆ ವ್ಯಾಸಪೀಠವಾಗಿರುವ ಸಾರ್ವಜನಿಕ ಕಕ್ಕಸುಗಳ ಗೋಡೆಗಳು ಬೆನ್ನೆಲುಬು ನಿವಾರಣೆ ನೀಡಿ ಒಂದು ಘಳಿಗೆ ಬಿಸಿಲಿಗೆ ಬಂದು ಹೋಗುವ ರಾಜಕಾರಣಿಗಳ ಹೇಷಾರವಗಳಿಗೆ ಪ್ರೇರಣೆ ನೀಡುತ್ತಿರುವ ಸರ್ಕಾರಿ ಕೃಪಾಪೋಷಿತ ಸಾರಾಯಿ ಅಂಗಡಿಗಳು, ಕ್ವಾಟ್ರು ಬಾಟಲಿಯೊಳಗೆ ಚಟಾಕು ಎಣ್ಣೆ ಸುರಿಯುತ್ತಿರುವ ಮೆಟ್ರಿಕ್ ಮಾಪನಗಳು, ದುಕ್ಕ, ದುಮ್ಮಾನ, ಕೇರೆ ಕ್ಯಾಕರಿಗೆ, ಹಸಿವೆ ಕಮರು ಡೇಗು, ಹೈಹೀಲ್ಡ್ ನಡಿಗೆ ಇವೇ ಮೊದಲಾದ ಅವಘಡಗಳಿಂದ ತುಂಬಿ ಹೋಗಿರುವ ಕೊಟ್ಟೂರಿಗೆ ಹೋಗದೇ ಎಷ್ಟೊಂದು ದಿನಗಳಾದುವಲ್ಲ?(ಶಾಮಣ್ಣ ೨೧೫-೨೧೬)

ಆಧುನಿಕ ಸಮಾಜದ ಎಲ್ಲಾ ರೀತಿಯ ವೈರುಧ್ಯಗಳನ್ನು ಕೇಂದ್ರೀಕರಿಸಿಕೊಂಡು ಕುಂ.ವೀ. ವಿಶ್ವಕೋಶದ ಮಾದರಿಯಂತೆ ಮಾಹಿತಿಯನ್ನು ಒದಗಿಸುತ್ತಾರೆ. ಸಾಮಾಜಿಕ ಸ್ಥಿತಿಗತಿ, ಶೈಕ್ಷಣಿಕ ವಾತಾವರಣ ಮತ್ತು ರಾಜಕೀಯ ವಿದ್ಯಮಾನಗಳ ಮೊದಲದ ಸಜೀವ ಚಿತ್ರಣಗಳು ಕುಂ.ವೀ. ಬರವಣಿಗೆಯಲ್ಲಿ ಮುಪ್ಪುರಿಗೊಂಡಿವೆ. ಲೈಂಗಿಕ ರೋಗಗಳ ವಿವರಣೆಗಳಂತೂ ಪ್ರಚಲಿತವಾದ ಸಮಸ್ಯೆಗಳೇ ಆಗಿದ್ದರೂ ವಾಚ್ಯವಾಗಿ ಓದುಗರಿಗೆ ಅಪಾರ ಮಾಹಿತಿಯನ್ನು ಒದಗಿಸಿಕೊಡುತ್ತವೆ. ಹೀಗೆ ಒಟ್ಟಾರೆ ವ್ಯವಸ್ಥೆಯಲ್ಲಿರುವ ಸಾಂಪ್ರದಾಯಿಕ ಮತ್ತು ಅಸಾಂಪ್ರದಾಯಿಕ ವೈರುಧ್ಯಗಳನ್ನು ಸರಳ ಪ್ರಾದೇಶಿಕ ಭಾಷೆಯಲ್ಲಿ ಹೇಳಿರುವುದು ಬರಹಗಾರನಿಗೆ ಇರುವ ಸಾಮಾಜಿಕ ಕಳಕಳಿಯನ್ನು ತೋರಿಸುತ್ತವೆ.

**ಕೊನೆಟಿಪ್ಪಣಿ**

೧. ಕುಂ.ವೀರಭದ್ರಪ್ಪ, 'ಕಪ್ಪು', ೧೯೮೧, ಪರಿಮಳ ಬುಕ್‌ಹೌಸ್, ಬೆಂಗಳೂರು, ಕಾದಂಬರಿಯ ಮುನ್ನುಡಿಯಲ್ಲಿ ಹೇಳಿದ್ದು.

೨. ಕುಂ. ವೀರಭದ್ರಪ್ಪ, ಇನ್ನಾದರೂ ಸಾಯಬೇಕು, ೧೯೯೨, ಯುವಕ ಸಂಘ, ರಾಮನಗರ. ಹಗರಿಬೊಮ್ಮನಹಳ್ಳಿ, ಪು. ೫೨.

೩. ಕುಂ. ವೀರಭದ್ರಪ್ಪ, ಡೋಮ ಮತ್ತಿತ್ತರ ಕತೆಗಳು, ೧೯೮೫, ಅನನ್ಯ ಪ್ರಕಾಶನ, ಶ್ರೀದೇವಿ ನಗರ, ಧಾರವಾಡ, ಪು. ೧೪೩ರಿಂದ ೧೪೫.

೪. ಕುಂ. ವೀರಭದ್ರಪ್ಪ, ಇನ್ನಾದರೂ ಸಾಯಬೇಕು, ೧೯೯೨, ಯುವಕ ಸಂಘ, ರಾಮನಗರ, ಹಗರಿಬೊಮ್ಮನಹಳ್ಳಿ, ಪು. ೧೯೮.

೫. ಕುಂ. ವೀರಭದ್ರಪ್ಪ, ಬರಿ ಕಥೆಯಲ್ಲೋ ಅಣ್ಣ, ೨೦೦೪, ಸಿ.ವಿ.ಜಿ. ಪ್ರಕಾಶನ, ಬೆಂಗಳೂರು,

ಪು. ೩೨೭-೨೮.

೬. ಅದೇ, ಪು. ೨೫೭-೨೫೮.

೭. ಅದೇ, ಪು. ೨೭೨-೨೭೩.

೮. ಅದೇ, ಪು. ೯೨೨-೯೩೪

೯. ಅದೇ, ಪು. ೪೪೭.

೧೦. ಅದೇ, ಪು. ೮೦೭.

೧೧. ಬಾಬುರಾವ್ ಮುಡಬಿ, ಮಹಿಳಾ ಸಬಲೀಕರಣ ಅಂಬೇಡ್ಕರ್ ದೃಷ್ಟಿಕೋನ, ೨೦೦೫, ಲಕ್ಷ್ಮಿ ಪ್ರಕಾಶನ, ಬೆಂಗಳೂರು, ಪು. ೨೨-೨೫.

೧೨. ಕೇಶವಶರ್ಮ, ಬಹುಮುಖಿ, ೨೦೦೫, ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು, ಪು. ೯೪-೯೬.

೧೩. ಅಶೋಕ ಟಿ.ಪಿ. (ಸಂ), ಶಿವರಾಮ ಕಾರಂತರ ಲೇಖನಗಳು, ೧೯೯೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೩೨೭-೨೮.

೧೪. ಅದೇ, ಪು. ೨೮೪

೧೫. ರಹಮತ್ ತರೀಕೆರೆ, ಪ್ರತಿಸಂಸ್ಕೃತಿ, ೧೯೯೩, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು, ಪು. ೪೭

೧೬. ಕುಂ.ವೀರಭದ್ರಪ್ಪ, ನಿಜಲಿಂಗ, ೨೦೧೬, ಅನುಪಮ ಪ್ರಕಾಶನ, ಅಥಣಿ, ಪು. ೪.

೧೭. ಅದೇ, ಪು. ೧೪೧-೧೪೨.

೧೮. ಅದೇ, ಪು. ೧೫೩.

೧೯. ಅದೇ, ಪು. ೧೮೭.

೨೦. ಅದೇ, ಪು. ೨೦೭.

೨೧. ಅದೇ, ಪು. ೨೨೩.

೨೨. ಅದೇ, ಪು. ೨೦೧.

೨೩. ಎಚ್. ಬಾಳಾಸಾಹೇಬ, ಯಾಪಿಲ್ಲು, ಸಂಯುಕ್ತ ಕರ್ನಾಟಕ, ಕನ್ನಡ ದಿನಪತ್ರಿಕೆ, ಪು.೫

೨೪. ಕುಂ.ವೀರಭದ್ರಪ್ಪ, ಹೇಮರೆಡ್ಡಿ ಮಲ್ಲಮ್ಮನ ಕಥೆ, ೨೦೧೨, ಓ.ಎಲ್. ನಾಗಭೂಷಣಸ್ವಾಮಿ (ಬೆನ್ನುಡಿ), ಕರ್ನಾಟಕ ಬುಕ್ ಏಜನ್ಸಿ, ಬೆಂಗಳೂರು.

೨೫. ಕುಂ.ವೀರಭದ್ರಪ್ಪ, ಜಮೀನ್ದಾರಿ ವ್ಯವಸ್ಥೆ ಮತ್ತು ತೆಲುಗು ಸಾಹಿತ್ಯ, ೧೯೯೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೫.

೨೬. ಕುಂ. ವೀರಭದ್ರಪ್ಪ. “ಬರಿ ಕಥೆಯಲ್ಲೋ ಅಣ್ಣ...”, ‘ರತ್ನ ಎಂಬ ಹುಡುಗಿಯು ಉಗಾದಿ ಎಂಬ ಆಟವು’ ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು, ಪು. ೨೦೭.

೨೭. ಅದೇ, ಪು. ೫೬೮.

೨೮. ಅದೇ, ಪು. ೧೨೧.

೨೯. ಅದೇ, ಪು. ೨೫೮.

೩೦. ಕುಂ. ವೀರಭದ್ರಪ್ಪ, ಶಾಮಣ್ಣ, ೧೯೯೮, ಲೋಹಿಯಾ ಪ್ರಕಾಶನ, ಬಳ್ಳಾರಿ, ಪು. ೧೮೪.

೩೧. ಕುಂ. ವೀರಭದ್ರಪ್ಪ, “ಬರಿ ಕಥೆಯಲ್ಲೋ ಅಣ್ಣ...”, ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು, ಪು. ೪೭.

೩೨. ಅದೇ, ಪು. ೯೩-೯೪.

ಅಧ್ಯಾಯ ಐದು

# ಕುಂ. ವೀರಭದ್ರಪ್ಪ: ಅನುವಾದಕ

೫.೧. ಕುಂ.ವೀ. ಅವರ ತೆಲುಗು ಅನುವಾದ ಸಾಹಿತ್ಯ

೫.೨. ಭೂಮಿಗೆ ಸಂಬಂಧಿಸಿದ ಕಥೆಗಳು

೫.೩. ಶೋಷಣೆ ಮತ್ತು ಪ್ರತಿಭಟನೆಗೆ ಸಂಬಂಧಿಸಿದ ಕಥೆಗಳು

೫.೪. ಸ್ತ್ರೀಸಂವೇದನೆಯಿರುವ ಕಥೆಗಳು

೫.೫. ನಗರ ನೇಪಥ್ಯದ ಕಥೆಗಳು

೫.೬. ಸಮರ್ಥ ಭಾಷಾಂತರಕಾರರಾಗಿ ಕುಂ.ವೀ.

ಅಧ್ಯಾಯ ಐದು

# ಕುಂ. ವೀರಭದ್ರಪ್ಪ: ಅನುವಾದಕ

ಇತ್ತೀಚಿನ ದಿನಗಳಲ್ಲಿ ಭಾಷಾಂತರ ಅಧ್ಯಯನದಲ್ಲಿ ತಾತ್ವಿಕ ಚಿಂತನೆಗಳ ಚರ್ಚೆ ಸಾಕಷ್ಟು ನಡೆದಿದೆ. ೬೦ರ ದಶಕದಲ್ಲಿ ಭಾಷಾಂತರ ಅಧ್ಯಯನದಲ್ಲಿ ಭಾಷಾಶಾಸ್ತ್ರೀಯ ದೃಷ್ಟಿಕೋನದ ಬಳಕೆಯಾದರೆ ಇತ್ತೀಚೆಗೆ ಭಾಷಾಂತರ ತತ್ವಚಿಂತನೆಯು ಸಾಂಸ್ಕೃತಿಕ ನೆಲೆಯತ್ತ ಸರಿದಿದೆ. ಸೂಸನ್ ಬ್ಯಾಸನೆಟ್ ಮತ್ತು ಲೆಫೆವೇರ ಎಂಬ ವಿದ್ವಾಂಸರು ಭಾಷಾಂತರ ಅಧ್ಯಯನವು ೯೦ರ ದಶಕದಲ್ಲಿ ಐತಿಹಾಸಿಕವಾದ 'ಸಾಂಸ್ಕೃತಿಕ ತಿರುವ'ನ್ನು ತೆಗೆದುಕೊಂಡಿದೆ ಎಂದು ಅಭಿಪ್ರಾಯ ಪಡುತ್ತಾರೆ. ಭಾಷಾಂತರವನ್ನು ಪ್ರತ್ಯೇಕವಾಗಿ ಪರಿಶೀಲಿಸಿದ ಅಸಾಧ್ಯತೆಯನ್ನು ಗುರುತಿಸುತ್ತಾ ಈ ಪ್ರಕ್ರಿಯೆಯು ಎರಡು ಭಾಷೆಗಳ ಮಧ್ಯೆ ಮಾತ್ರ ನಡೆಯದೆ ಅನೇಕ ಅರ್ಥವ್ಯವಸ್ಥೆಗಳ ಅಂಚಿನಲ್ಲಿ ನಡೆಯಬೇಕಾದ ಅಗತ್ಯದ ಬಗ್ಗೆ ಲ್ಯಾಂಬರ್ಟ್ ಮತ್ತು ರೋಬಿನ್ಸರು ಬರೆಯುತ್ತಾರೆ. ಅವರ ಪ್ರಕಾರ ಭಾಷಾಂತರ ಪ್ರಕ್ರಿಯೆಯು ಭಾಷೆಗಳ ಮಧ್ಯೆ ನಡೆಯುವ ಚಟುವಟಿಕೆಯಾಗಿದೆ. 'ಭಾಷಿಕ ಸಂಜ್ಞೆಗಳ ವರ್ಗಾವಣೆಯೇ ಅಥವಾ ಸಂಸ್ಕೃತಿಯ ರವಾನೆಯೇ?' ಎಂಬ ಪ್ರಬಂಧದಲ್ಲಿ ಮೇರಿ ಸ್ನೆಲ್-ಹಾರ್ನ್‌ಬಿ ಭಾಷಾಂತರ ತತ್ವಚಿಂತನೆಯು 'ವೈಜ್ಞಾನಿಕ' ದೃಷ್ಟಿಕೋನವನ್ನು ಬಿಟ್ಟುಕೊಟ್ಟ ಭಾಷಾಂತರ ಕ್ರಿಯೆಯಲ್ಲಿ 'ಪಠ್ಯ' ಘಟಕದಿಂದ 'ಸಂಸ್ಕೃತಿ'ಯೆಂಬ ಘಟಕದತ್ತ ಸಾಗಬೇಕೆಂಬ ಸೂಚನೆಯನ್ನು ಮುಂದಿಡುತ್ತಾಳೆ. ಇದನ್ನೆ ಬ್ಯಾಸನೆಟ್, ಲೆಫೆವೇರರು 'ಸಾಂಸ್ಕೃತಿಕ ತಿರುವು' ಎಂದು ಹೆಸರಿಸುತ್ತಾರೆ. ಅವರ ಪ್ರಕಾರ ಇಂದು ಭಾಷಾಂತರವೆಂದರೆ ಕಾಲದ ಒಂದು ಬಿಂದುವಿನಲ್ಲಿ ಒಂದು ಸಂಸ್ಕೃತಿಯನ್ನು ರೂಪಿಸುವ ಪ್ರಕ್ರಿಯೆಯ ಅರಿವು. ಈ ಪ್ರಕ್ರಿಯೆಯು ಸಾಹಿತ್ಯೇತರವಾದ ಅರ್ಥಶಾಸ್ತ್ರೀಯ ರಾಜಕೀಯ ಹಾಗೂ ಈವರೆಗೂ ನಿರ್ಲಕ್ಷಿಸಲ್ಪಟ್ಟ ಅಂಶಗಳು ಭಾಷಾಂತರ ಅಧ್ಯಯನದಲ್ಲಿ ಈಗ ಪ್ರಾಮುಖ್ಯತೆ ಪಡೆದಿವೆ. ಇದರಿಂದಾಗಿ ಸಾಂಸ್ಕೃತಿಕ ಚರಿತ್ರೆಯ ನಮ್ಮ ಅರಿವು ಹೆಚ್ಚು ಅರ್ಥಪೂರ್ಣವಾಗಿದೆ ಎನ್ನುವುದು

ಬ್ಯಾಸನೆಟ್‌ಳ ಅಭಿಪ್ರಾಯ. ಭಾಷಾಂತರವು ಭಾಷಿಕ ಸಂಜ್ಞೆಗಳ ಗಡಿದಾಟಿ ಬೇರೆ ಬೇರೆ ಸಂಸ್ಕೃತಿಗಳ ಮಧ್ಯೆ ಸಂಪರ್ಕ ಮಾಧ್ಯಮವಾಗಿ ಅವುಗಳನ್ನು ಒಂದುಗೂಡಿಸುವ ಸೇತುವೆಯೆಂಬ ಚಿಂತನೆ ಈಗ ಮುನ್ನೆಲೆಗೆ ಬಂದಿದೆ. ಈ ಕ್ರಿಯೆಯು ಎರಡು ಭಾಷೆಗಳ ಭಾಷಾಂತರ ಮಾತ್ರವಾಗದೆ ಎರಡು ಸಂಸ್ಕೃತಿಗಳ ಭಾಷಾಂತರವಾಗುತ್ತದೆ. ಅಲ್ಲದೆ ಎರಡು ಭಾಷೆಗಳ ನಡುವಿನ ಅನುವಾದ ಸಾಧ್ಯತೆಯು ಸಾಂಸ್ಕೃತಿಕ ಸಾರ್ವತ್ರಿಕಗಳ ಹಾಗೂ ಸಾಮಾನ್ಯವಾದ ಮಾನವೀಯ ಕಾಳಜಿಗಳ ದೃಢೀಕರಣವೂ ಆಗಿದೆ.[೧]

**೫.೧. ಕುಂ.ವೀ. ಅವರ ತೆಲುಗು ಅನುವಾದ ಸಾಹಿತ್ಯ**

ಕುಂ.ವೀರಭದ್ರಪ್ಪನವರು ವೃತ್ತಿಪರ ಅಥವಾ ವೃತ್ತಿನಿರತ ಭಾಷಾಂತರಕಾರರಲ್ಲ. ಮೂಲತಃ ಅವರೊಬ್ಬ ಸೃಜನಶೀಲ ಬರಹಗಾರರು ಹಾಗೂ ಒಳ್ಳೆಯ ಅಧ್ಯಯನಶೀಲರಾಗಿದ್ದಾರೆ. ಹೀಗಾಗಿ ಬೇರೆ ಭಾಷೆಗಳಲ್ಲಿರುವ ಸಾಹಿತ್ಯವನ್ನು ಅಧ್ಯಯನ ಮಾಡುವುದರ ಜೊತೆಗೆ ಅದನ್ನು ಕನ್ನಡದ ಓದುಗರಿಗೆ ಪರಿಚಯಿಸುವ ಸಲುವಾಗಿ ತೆಲುಗಿನಿಂದ ಸುಮಾರು ೪೨೦ಕ್ಕೂ ಹೆಚ್ಚು ಕಥೆಗಳನ್ನು ಕನ್ನಡಕ್ಕೆ ಅನುವಾದಿಸುವುದರ ಮೂಲಕ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ ವಿಷಯ ಮತ್ತು ಭಾಷೆಯ ಮೇಲೆ ಸಮಾನ ಪ್ರಭುತ್ವ ಇರುವಂಥ ವ್ಯಕ್ತಿ ಭಾಷಾಂತರಕ್ಕೆ ಕೈ ಹಾಕಿದಾಗ ಎಂಥಾ ಸುಂದರವಾದ ಅನುವಾದಗಳನ್ನು ಕೊಡಬಲ್ಲರು ಎಂಬುದಕ್ಕೆ ಕು.ವೀ. ಅವರ ಅನುವಾದಗಳೇ ಸಾಕ್ಷಿಯಾಗಿವೆ.

'ಭಾಷಾಂತರ'ವೆಂದರೆ ಎರಡು ಭಾಷೆಗಳನ್ನು ಎರಡು ಭಾಷಿಕ ಸಮೂಹಗಳನ್ನು ಎರಡು ಸಂಸ್ಕೃತಿಗಳನ್ನು ಒಂದುಗೂಡಿಸುವ ಒಂದು ಮಹತ್ವಪೂರ್ಣ ಸಾಂಸ್ಕೃತಿಕ ಕ್ರಿಯೆ. ಭಾಷಾಂತರಗಳ ಇತಿಹಾಸ ತಿಳಿಸುವಂತೆ ಅನೇಕ ಪ್ರಮುಖ ಚಾರಿತ್ರಿಕ ಘಟ್ಟಗಳಲ್ಲಿ ಭಾಷಾಂತರ ಕ್ರಿಯೆಯೂ ಒಂದು ಪ್ರಮುಖ ಪಾತ್ರ ವಹಿಸಿದೆ. ಒಂದು ಸಾಹಿತ್ಯಕ್ಕೆ ಹಾಗೂ ಸಮಾಜಕ್ಕೆ ನೂತನ ವೈಚಾರಿಕತೆಯ ದಿಕ್ಕನ್ನು ತೆರೆದಿದೆ. ಉದಾಹರಣೆಗೆ ನಾವು ಯುರೋಪಿನ 'ರೆನೈಸಾನ್ಸ್(೧೫-೧೭ ಶತಮಾನ) ಕಾಲಖಂಡವನ್ನು ಮತ್ತು ಭಾರತದಲ್ಲಿ ೧೮, ೧೯ನೆಯ ಶತಮಾನಗಳ ಅವಧಿಯನ್ನು ಪರಿಗಣಿಸಬಹುದು. ಎಲ್ಲಾ ಭಾರತೀಯ ಸಾಹಿತ್ಯಗಳಲ್ಲಿ ಮತ್ತು ಸಮಾಜ ಗಳಲ್ಲಾದಂತೆ ಕನ್ನಡ ಸಾಹಿತ್ಯದ ಸಾಮಾಜಿಕ ಕ್ಷೇತ್ರಗಳಲ್ಲಿಯೂ 'ಆಧುನಿಕತೆ' ವಿಚಾರಗಳ ಅನುಭವಗಳ, ಸಾಹಿತ್ಯಕ ಪ್ರಭೇದಗಳ ಪ್ರವೇಶವಾದುದು ಅನುವಾದಗಳ ಮೂಲಕವೇ ಆಗಿದೆ.[೨]

ಇಂದು ಭಾಷಾಂತರ ಅನ್ನುವ ಪ್ರಕ್ರಿಯೆ ಬರೀ ಸಾಹಿತ್ಯಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿಲ್ಲ. ಸಾಹಿತ್ಯೇತರ ಜ್ಞಾನಶಿಸ್ತುಗಳಾದ ಪತ್ರಿಕೋದ್ಯಮ, ಧರ್ಮ, ವಿಜ್ಞಾನ, ವೈದ್ಯಕೀಯ, ತಂತ್ರಜ್ಞಾನ ಮುಂತಾದ ಕ್ಷೇತ್ರಗಳಿಗೂ ಇದು ವ್ಯಾಪಿಸಿದೆ. ಭಾಷಾಂತರವು ಕಾನೂನು, ವಾಣಿಜ್ಯ, ಕೃಷಿ,

ಕೈಗಾರಿಕೆ, ಆಡಳಿತ, ಶಿಕ್ಷಣ, ಆರೋಗ್ಯ ಮುಂತಾದ ವಲಯಗಳವರೆಗೂ ವ್ಯಾಪಿಸಿದೆ. ಭಾಷಾಂತರವು ಇಂದು ಸಾಂಸ್ಕೃತಿಕ ಸೃಜನಶೀಲ ವಿದ್ಯೆಯಾಗಿ ಕುಶಲಕಲೆಯಾಗಿ ಬೆಳೆಯುತ್ತಿದೆ. ಭಾಷಾಂತರ ಎಂದರೆ ಕೇವಲ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ನಡೆಯುವ ಅರ್ಥಾಂತರ ಅಲ್ಲ, ಅದು ಅನುಸೃಷ್ಟಿಯಾಗುತ್ತದೆ. ಕನ್ನಡ ನವೋದಯ ಕಾಲದ ಭಾಷಾಂತರದಲ್ಲಿ ರೂಪಾಂತರ ಪ್ರಧಾನವಾದುದು, ಸೃಜನಶೀಲವಾದದು. ಎರಡು ಭಾಷೆಗಳ ಎರಡು ಸಂಸ್ಕೃತಿಗಳ ಪ್ರಜ್ಞೆಗಳು ಇಲ್ಲಿ ಮುಖಾಮುಖಿಯಾಗಿವೆ. ಅವುಗಳ ನಡುವೆ ಸಂಘರ್ಷ ಸಾಮರಸ್ಯ ಏರ್ಪಟ್ಟಿದೆ. ಹತ್ತೊಂಬತ್ತನೇ ಶತಮಾನದ ಕೊನೆ ಮತ್ತು ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಭಾಷಾಂತರ ಹೆಚ್ಚಾಗಿ ನಡೆದಿದ್ದು ರೂಪಾಂತರ ಅಳವಡಿಕೆಗಳ ಮೂಲಕವೇ ಇದಕ್ಕೆ ಜಗತ್ತಿನ ಯಾವ ಭಾಷೆಗಳೂ ಹೊರತಾಗಿಲ್ಲ. ಭಾರತೀಯ ಪ್ರಾದೇಶಿಕ ಭಾಷೆಗಳ ದ್ವಿಭಾಷಾ ನಿಘಂಟುಗಳು ಮುಂದೆ ಭಾಷಾಂತರ ಕ್ಷೇತ್ರದಲ್ಲಿ ಹೊಸ ಆಯಾಮಗಳನ್ನು ಸೃಷ್ಟಿಸಿದವು ಈ ದೃಷ್ಟಿಯಿಂದ ಕನ್ನಡದ ಸಂದರ್ಭದಲ್ಲಿ ಸಂಭವಿಸಿದ 'ಕಿಟೆಲ್ ನಿಘಂಟು' ಈ ಕ್ಷೇತ್ರದಲ್ಲಿ ಒಂದು ಹೊಸ ಮೈಲಿಗಲ್ಲು ಮತ್ತು ಆರಂಭದ ಹೆಜ್ಜೆಗುರುತಾಗಿದೆ.

ಕನ್ನಡಕ್ಕೆ ಸಂಬಂಧಿಸಿದಂತೆ ನಡೆದಿರುವ ಭಾಷಾಂತರ ಕಾರ್ಯವನ್ನು ೧. ವಸಾಹತುಪೂರ್ವ, ೨. ವಸಾಹತುಶಾಹಿ, ೩. ವಸಾಹತೋತ್ತರ ಎಂದು ಮೂರು ಹಂತಗಳಲ್ಲಿ ಗುರುತಿಸುವ ಅವಕಾಶವಿದೆ. ಭಾಷಾಂತರ ಒಂದು ಸಾಂಸ್ಕೃತಿಕ ಪಕ್ರಿಯೆ ಹೇಗೋ ಅದು ಸಾಂಸ್ಕೃತಿಕ ವಿನಿಮಯವೂ ಹೌದು. ರಾಷ್ಟ್ರೀಯ ಭಾವೈಕ್ಯತೆಯ ಸಾಧನವೂ ಹೌದು. ಕುವೆಂಪು ಅವರು 'ಭಾಷಾಂತರ ಒಂದು ಅಪೂರ್ವಕಲ್ಯಾಣ ಘಟನೆ' ಎಂದಿದ್ದಾರೆ. ಬೇಂದ್ರೆಯವರು ಭಾಷಾಂತರ ಪ್ರಕ್ರಿಯೆಯನ್ನು ಕುರಿತು ಅದು 'ಬರೀ ಭಾಷಾಂತರವಲ್ಲ ಅದು ಭಾವಗ್ರಹಣ' ಎಂದು ಹೇಳಿದ್ದಾರೆ. ವಸಾಹತುಶಾಹಿಯು ತಂದ ಸಾಂಸ್ಕೃತಿಕ ವಿಸ್ಮಯಗಳಲ್ಲಿ ಭಾಷಾಂತರವೂ ಒಂದು. ಹಾಗಾಗಿ ಭಾಷಾಂತರದಲ್ಲಿ ಪಠ್ಯಕ್ಕಿಂತ ಪಠ್ಯೇತರ ಚಟುವಟಿಕೆಗಳಾದ ರಾಜಕೀಯ ಮತ್ತು ಸಾಂಸ್ಕೃತಿಕ ಘಟಕಗಳೂ ಮುಖ್ಯವಾಗುತ್ತವೆ. ಹಾಗಾಗಿ ಭಾಷಾಂತರ ಎಂದರೆ ಭಿನ್ನ ಭಾಷೆಗಳ ನಡುವೆ ನಡೆಯುವ ಒಂದು ಬೌದ್ಧಿಕ ಚಟುವಟಿಕೆ, ಭಿನ್ನ ಪರಂಪರೆಗಳ ನಡುವೆ ನಡೆಯುವ ಸಾಮಾಜಿಕ ಪಕ್ರಿಯೆ, ಭಿನ್ನ ಸಂಸ್ಕೃತಿಗಳ ನಡುವಿನ ಮಾನವೀಯ ಕಾಳಜಿಗಳ ದೃಢೀಕರಣವೂ ಆಗಿದೆ.[೧]

ವಿಶ್ವಗ್ರಾಮ ಪರಿಕಲ್ಪನೆಯ ಸಂದರ್ಭದಲ್ಲಿ ಭಾಷಾಂತರದ ಕಾರ್ಯವನ್ನು ಇನ್ನೂ ವಿವರಿಸಿ ಕೊಳ್ಳಬೇಕಾದ ಅಗತ್ಯತೆ ಇದೆ. ಸೃಜನಶೀಲಕೃತಿ ಯಾವುದೇ ಇನ್ನೊಂದು ಭಾಷೆಗೆ ಭಾಷಾಂತರ ಗೊಳ್ಳುವುದೆಂದರೆ ಆ ಭಾಷೆಯ ಚಿಂತನೆ ಹಾಗೂ ಜಾಗತೀಕರಣದ ಪರಿಣಾಮಗಳನ್ನು

ತರುವುದೇ ಎಂದರ್ಥ. ದೇಜಗೌ ಅವರು ಹೇಳುವಂತೆ "ಸೃಜನಕ್ರಿಯೆಗಿಂತ ಭಾಷಾಂತರ ಕಾರ್ಯ ಕಠಿಣವಾದದ್ದು" ಕನ್ನಡದಲ್ಲಿ ಮುಖ್ಯವಾಗಿ ಎರಡು ಬಗೆಯ ಭಾಷಾಂತರ ಪರಂಪರೆಗಳು ಕಂಡುಬರುತ್ತವೆ. ಎಂದು ಡಿ.ಆರ್. ನಾಗರಾಜ ಅವರು ಅಭಿಪ್ರಾಯಪಡುತ್ತಾರೆ.

೧. ಪರಂಪರೆಯ ಸತ್ವವನ್ನು ಕನ್ನಡದಲ್ಲಿ ಪರಿಪೂರ್ಣ ಪ್ರಮಾಣದಲ್ಲಿ ಜೀರ್ಣಿಸಿಕೊಳ್ಳುವುದು, ೨. ಪರಭಾಷೆಯ ನುಡಿಗಕಟ್ಟಿನ ಮೂಲಕ ಕನ್ನಡ ನುಡಿಗಟ್ಟನ್ನು ಒಡೆದು ಕಟ್ಟುವುದು. ಮೊದಲನೆಯದಕ್ಕೆ ಬಿ.ಎಂ.ಶ್ರೀ., ಗೋವಿಂದ ಪೈ, ಕುವೆಂಪು, ಮಾಸ್ತಿ, ಬೇಂದ್ರೆ ಮುಂತಾದವರು ಉದಾಹರಣೆಯಾಗಿ ಕಂಡುಬಂದರೆ ಎರಡನೆಯದಕ್ಕೆ ಲಂಕೇಶ್, ರಾಮಚಂದ್ರಶರ್ಮ, ಭಗವಾನ್, ರಾಮಚಂದ್ರದೇವ ಮುಂತಾದವರು ಉದಾಹರಣೆಯಾಗಿ ಕಂಡುಬರುತ್ತಾರೆ ಎಂದಿದ್ದಾರೆ. ಆದರೆ ಭಾರತೀಯ ಭಾಷೆಗಳಿಂದ ನೇರವಾಗಿ ಅನುವಾದ ಮಾಡಲಾಗದಷ್ಟು ವಿದ್ವಾಂಸರು ಇಂದು ಇಂಗ್ಲಿಷ್ ಅವಲಂಬಿತರಾಗಿದ್ದಾರೆ. ಆದರೆ ಪ್ರಸ್ತುತ ಈ ಅಧ್ಯಯನದ ಅನುವಾದಗಳು ತೆಲುಗಿನಿಂದ ಕನ್ನಡಕ್ಕೆ ನೇರವಾಗಿ ಬಂದಂತಹ ಅನುವಾದ ಕೃತಿಗಳಾಗಿವೆ.

ತೆಲುಗು ಅನುವಾದ ಕೃತಿಗಳ ಬಗ್ಗೆ ೫.೫.೨೦೧೩ರ ಪ್ರಜಾವಾಣಿ ಪತ್ರಿಕೆ ನೀಡಿದ ಸಂದರ್ಶನದಲ್ಲಿ ಕುಂ.ವೀ. ಅವರೇ ಹೇಳುವಂತೆ "ತೆಲುಗು ಸಾಹಿತ್ಯ ನನ್ನ ಅರಿವಿಗೆ ನಿಲುಕಿದ್ದು ತೀರಾ ಆಕಸ್ಮಿಕ ದಿ. ಇಂದಿರಾಗಾಂಧಿ ಈ ದೇಶದ ಮೇಲೆ ಹೇರಿದ ತುರ್ತು ಪರಿಸ್ಥಿತಿ ಆ ಕಾಲಘಟ್ಟದ ಸೃಜನಶೀಲ ತಿಳಿವಳಿಕೆಗೆ ಹೊಸ ಆಯಾಮ ನೀಡಿತು ಆ ಅವಧಿಯ ಏಳೆಂಟು ವರ್ಷಗಳಲ್ಲಿ ಶಾಸ್ತ್ರೋಕ್ತ ರೀತಿಯಲ್ಲಿ ಸಂಭವಿಸಿದ ಸಮಾಜಮುಖಿ ಚಳುವಳಿಗಳು ಆಗಿನ್ನೂ ಯುವಕರಾಗಿದ್ದ ನನ್ನಂಥವರ ಸಾಕ್ಷಿಪ್ರಜ್ಞೆಗೆ ಸಾಣೆ ಹಿಡಿದವು. ಅದಕ್ಕೆ ವಯಸ್ಸು ಮತ್ತು ಮನಸ್ಸು ಸಾಥ್ ನೀಡಿತು. ಅರೆಸ್ಟಾಗಿ ದೇಶಭಕ್ತಿ ಮೆರೆಯಲೆಂದು ನಡೆಸಿದ ಹಸಿಹಸಿ ಹೋರಾಟ ಸಾಮಾಜಿಕರಿ ಗೊಂದೇ ಅಲ್ಲದೆ ನಮ್ಮ ಕುಟುಂಬದ ಹಿರಿಯರಿಗೂ ತಲೆನೋವಾಗಿ ಪರಿಣಮಿಸಿತು. ನನ್ನಿಂದ ತಮ್ಮನ್ನು ರಕ್ಷಿಸಿಕೊಳ್ಳಲೆಂದೋ ನಿರುದ್ಯೋಗಿಯ ವೇಷದಲ್ಲಿದ್ದ ಪೀಡೆ ತೊಲಗಿದ ರಾಯಿತೆಂದೋ ನನ್ನನ್ನು ಆಂಧ್ರಪ್ರದೇಶಕ್ಕೆ ಎತ್ತಂಗಡಿ ಮಾಡಲಾಯಿತು. ಅಲ್ಲಿ ನನಗೆ ಮೇಸ್ಟ್ರಗಿರಿ ಲಭಿಸಿದ್ದು ತೀರಾ ಆಕಸ್ಮಿಕ. ಎಪ್ಪತ್ತೆಂಬತ್ತರ ಅವಧಿಯಲ್ಲಿ ಸಾಹಿತ್ಯಕವಾಗಿ ಎಡಪಂಥೀಯ ಚಳುವಳಿಗಳು ಆಂಧ್ರಪ್ರದೇಶ ದಾದ್ಯಂತ ಚಾಲ್ತಿಯಲ್ಲಿದ್ದವು. ಅಲ್ಲಿನ ಬಹುಪಾಲು ಲೇಖಕರು ತಮ್ಮೊಂದು ಕಾಲನ್ನು ಸೆರೆಮನೆಯಲ್ಲೂ ಇನ್ನೊಂದು ಕಾಲನ್ನು ಬೀದಿಗಳಲ್ಲೂ ಇಟ್ಟು ಬರೆಯುತ್ತಿದ್ದರು. ಚಳುವಳಿ ಸಂಜಾತ ಲೇಖಕನಾದ ನಾನು ಅಂಥವರನ್ನು ಅಂಥವರ ಸಾಹಿತ್ಯವನ್ನು ಆಮೂಲಾಗ್ರವಾಗಿ ಅಧ್ಯಯನ ಮಾಡಲೆಂದೇ ತೆಲುಗು ಭಾಷೆಯನ್ನು ಕಲಿತೆ. ಓದು ಬರಹ ಮತ್ತು ಅನುವಾದವನ್ನು ರೂಢಿಸಿಕೊಂಡೆ. ಎಪ್ಪತ್ನಾಲ್ಕರಲ್ಲಿ ಮೊದಲಬಾರಿಗೆ

ತೆಲುಗಿನ ಪಿ.ಶ್ರೀನಿವಾಸಶಾಸ್ತ್ರಿ ಅವರ ಅಗ್ಗಿಪುಲ್ಲ(ಕಡ್ಡಿಪೊಟ್ಟಣ) ಎಂಬ ಕಥೆಯನ್ನು ಕನ್ನಡಕ್ಕೆ ಅನುವಾದಿಸಿದೆ. ಅದಕ್ಕೆ ಪೂರಕವಾಗಿ ತೆಲುಗಿನ ಎಡಪಂಥೀಯ ಸಾಹಿತ್ಯವೊಂದೇ ಅಲ್ಲದೆ ಆ ಸಾಹಿತ್ಯದ ಪ್ರಾಚೀನ ಅಭಿಜಾತ ಪರಂಪರೆಯನ್ನು ಅರಗಿಸಿಕೊಳ್ಳುವ ಪ್ರಯತ್ನ ನಡೆಸಿದೆ. ಶ್ರೀಶ್ರೀ ಪ್ರಣೀತ ದಿಗಂಬರ ಕವಿಗಳನ್ನು ಇಷ್ಟಪಟ್ಟಂತೆ, ಅಲ್ಲಸಾನಿ ಪೆದ್ದನನ ಮನುಚರಿತ್ರೆ ಕೃಷ್ಣದೇವರಾಯ ವಿರಚಿತ ಅಮುಕ್ತ ಮಾಲ್ಯದ, ಶ್ರೀನಾಥನ ಶೃಂಗಾರನೈಷಧಂ, ನನ್ನಯನ ಭಾರತ ಇಂಥ ಹಳೇಕಾವ್ಯಗಳನ್ನು ಅಭ್ಯಸಿಸಿ ಅರಿವಿಗೆ ದಕ್ಕಿದ್ದನ್ನು ಆನಂದ ನೀಡಿದ್ದನ್ನು ಅಕ್ಷರದ ನೆರವಿನಿಂದ ಅನ್ಯರಿಗೆ ವಿತರಿಸುವ ಸ್ವಭಾವ ನನ್ನದು. ಅಲ್ಲದೆ ಮಾನಸಿಕ ಸ್ವಾಸ್ಥ್ಯ ರಕ್ಷಿಸಿಕೊಳ್ಳುವ ಉಮೇದಿನಿಂದ ಅಲ್ಲಿನ ಕಥೆ ಕವಿತೆಗಳನ್ನು ಕನ್ನಡಕ್ಕೆ ಅನುವಾದಿಸಿದೆ. ಅಲ್ಲಿಂದ ಇಲ್ಲಿಯವರೆಗೆ ನಾನು ಏನಿಲ್ಲವೆಂದರೂ ಸುಮಾರು ನಾಲ್ಕು ನೂರಕ್ಕೂ ಹೆಚ್ಚು ಕಥೆಗಳನ್ನು ಕನ್ನಡದ ವಾಚಕರಿಗೆ ಪರಿಚಯಿಸಿರಬಹುದು. ಅವುಗಳನ್ನು ಸಂಕಲನಗಳಿಗೆ ಅಳವಡಿಸಿ ಪ್ರಕಟಿಸುವ ಇರಾದೆ ಎಳ್ಳಷ್ಟೂ ಇರಲಿಲ್ಲ. ಆದರೆ ಆವತ್ತಿನ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಾದೇಶಿಕ ಕಾರ್ಯದರ್ಶಿಯಾಗಿದ್ದ ಸನ್ಮಿತ್ರ ಅಗ್ರಹಾರ ಕೃಷ್ಣಮೂರ್ತಿ ನನ್ನಿಂದ ಆ ಕೆಲಸವನ್ನು ವಿಧ್ಯುಕ್ತವಾಗಿ ಮಾಡಿಸಿ ಕಥೆಗಳ ಮೂರ್‍ನಾಲ್ಕು ಸಂಕಲನಗಳನ್ನು ಅಕಾಡೆಮಿಯ ಮೂಲಕ ಪ್ರಕಟಿಸಿದರು. ಆ ಆಂಧ್ರದ ಹಲವು ತೆಲುಗುಗಳನ್ನು ನನಗೆ ಪರಿಚಯಿಸಿದ ಆ ಪುಣ್ಯಾತ್ಮನನ್ನು ಮರೆಯುವುದು ಸಾಧ್ಯವಿಲ್ಲ. ಈಗಲೂ ಅಲ್ಲಿನ ಉತ್ತಮ ಕಥೆಗಳನ್ನು ಕಾದಂಬರಿಗಳನ್ನು ಓದಿ ಅರಿವಿನ ಕ್ಷಿತಿಜವನ್ನು ವಿಸ್ತರಿಸಿಕೊಳ್ಳುತ್ತಾ ಮುಂದುವರಿದಿದ್ದೇನೆ" ಎಂದು ಹೇಳಿದ್ದಾರೆ.

ಪ್ರಸ್ತುತ ಈ ಅಧ್ಯಯನದ ವ್ಯಾಪ್ತಿಯಲ್ಲಿ ಕುಂ.ವೀ. ಅವರು ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಿದ ಮೂರು ಕಥಾಸಂಕಲನಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

೧. ತೆಲುಗು ಕಥೆ, ಸಂಪಾದಕರು, ಡಿ. ರಾಮಲಿಂಗಂ
ಅನುವಾದ: ಕುಂ. ವೀರಭದ್ರಪ್ಪ, ೧೯೯೮.

೨. ಒಂದು ಪೀಳಿಗೆಯ ತೆಲುಗು ಕಥೆಗಳು, ಸಂಪಾದಕರು, ಡಿ. ರಾಮಲಿಂಗಂ
ಅನುವಾದ: ಕುಂ. ವೀರಭದ್ರಪ್ಪ, ೨೦೦೧

೩. ಚಿನ್ನದ ತೆನೆ, (ತೆಲುಗು ಮೂಲ) ವಾಕಾಟಿ ಪಾಂಡುರಂಗರಾವ್, ವೇದಗಿರಿ ರಾಂಬಾಬು
ಅನುವಾದ: ಕುಂ. ವೀರಭದ್ರಪ್ಪ, ೨೦೧೦

೪. ತನ್ನಮಾರ್ಗ, (ತೆಲುಗು ಮೂಲ) ಅಬ್ಬೂರಿ ಛಾಯಾದೇವಿ,
ಅನುವಾದ: ಕುಂ. ವೀರಭದ್ರಪ್ಪ, ೨೦೧೦

**೧. ಮೊದಲ ತೆಲುಗು ಕಥಾಸಂಕಲದನ:** ಇದರಲ್ಲಿ ೩೦ ಕಥೆಗಳು ಸಂಗ್ರಹವಾಗಿದೆ. ಇವು ೧೯೩೫–೧೯೮೨ರ ನಡುವೆ ಪ್ರಕಟಿತವಾದ ಕಥೆಗಳನ್ನು ಈ ಕಥಾಸಂಕಲನಕ್ಕೆ ಆಯ್ಕೆ ಮಾಡಿ ಕೊಳ್ಳಲಾಗಿದೆ.

**೨. ಒಂದು ಪೀಳಿಗೆಯ ತೆಲುಗು ಕಥೆಗಳು:** ಈ ಕಥಾಸಂಕಲನವು ೩೬ ಕಥೆಗಳ ಸಂಗ್ರಹವಾಗಿದೆ. ಕೇಂದ್ರ ಸಾಹಿತ್ಯ ಅಕಾಡೆಮಿಯು ಪ್ರಕಟಿಸುತ್ತಿರುವ ತೆಲುಗು ಕಥಾಸಂಕಲನಗಳಲ್ಲಿ ಇದು ಮೂರನೆಯದು. ಒಂದು ಪೀಳಿಗೆಯ ಯುವಕ ಯುವತಿಯರ ಕಥೆಗಳನ್ನು ಸಂಗ್ರಹಿಸಿದ್ದಾರೆ ಇದರಲ್ಲಿ ೪೦ ವರ್ಷ ವಯೋಮಾನದವರ ಕಥೆಗಳನ್ನು ಸೇರಿಸಲಾಗಿದೆ.

**೩. ಚಿನ್ನದ ತೆನೆ:** ಈ ಕಥಾಸಂಕಲದನಲ್ಲಿ ೬೦ ಕಥೆಗಳಿವೆ. ಕೇಂದ್ರ ಸಾಹಿತ್ಯ ಅಕಾಡೆಮಿಯು ಈ ತೆಲುಗು ಕಥೆಯ ವೈಭವವನ್ನು ಇದುವರೆಗೆ ಮೂರು ಸಂಕಲನಗಳಲ್ಲಿ ಮುಂದಿನ ಪೀಳಿಗೆಗಾಗಿ ಸಂಗ್ರಹಿಸಿಕೊಟ್ಟಿದೆ.

**೪. ತನ್ನಮಾರ್ಗ:** ಈ ಕಥಾಸಂಕಲದನಲ್ಲಿ ೨೮ ಕಥೆಗಳಿದ್ದು, ಈ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿರುತ್ತದೆ.

ಪ್ರಸ್ತುತ ಈ ಮೂರು ಅನುವಾದಗಳ ಕಥೆಗಳನ್ನು ನನ್ನ ಅಧ್ಯಯನದ ಅನುಕೂಲತೆಗಾಗಿ ಈ ರೀತಿ ವಿಭಾಗಕ್ರಮ ಮಾಡಿಕೊಂಡು ಈ ಕೆಳಗಿನ ಆಯಾಮಗಳ ಮೂಲಕ ಅಧ್ಯಯನವನ್ನು ಕೈಗೊಂಡಿದ್ದೇನೆ.

೧. ಭೂಮಿಗೆ ಸಂಬಂಧಿಸಿದ ಕಥೆಗಳು

೨. ಶೋಷಣೆ ಮತ್ತು ಪ್ರತಿಭಟನೆಗೆ ಸಂಬಂಧಿಸಿದ ಕಥೆಗಳು

೩. ಸ್ತ್ರೀಸಂವೇದನೆಯಿರುವ ಕಥೆಗಳು

೪. ನಗರ ನೇಪಥ್ಯದ ಕಥೆಗಳು

**೫.೨. ಭೂಮಿಗೆ ಸಂಬಂಧಿಸಿದ ಕಥೆಗಳು**

ಸ್ವಾತಂತ್ರ್ಯ ಬಂದ ನಂತರ ದೇಶದೊಂದಿಗೆ ತೆಲುಗು ನೆಲದಲ್ಲಿ 'ಹಸಿರುಕ್ರಾಂತಿ' ಬಂದಿತು. ಆದರೆ 'ಉಳುವವನೆ ಭೂಮಿಗೊಡೆಯ'ನೆಂಬ ಪರಿಕಲ್ಪನೆ ಕ್ಷೀಣಿಸಲಾರಂಭಿಸಿತು. ಜಮೀನ್ದಾರರ ಸ್ಥಾನದಲ್ಲಿ ಪಟೇಲರು, ದೊರೆಗಳು, ದಲ್ಲಾಳಿಗಳು ಜಮೀನ್ದಾರರಾಗಿ ಮಾರ್ಪಟ್ಟು ಕೆಳವರ್ಗದವರನ್ನು ತನ್ನ ಕಬ್ಬಿಣದ ಪಾದಗಳಿಂದ ಮೆಟ್ಟಲಾರಂಭಿಸಿದರು. ಅದರ ಜೊತೆಗೆ ದುರ್ಬಲರ ಪ್ರಗತಿಗಾಗಿ ಶ್ರಮಿಸಬೇಕಿದ್ದ ಸರ್ಕಾರದ ಆಡಳಿತ ವ್ಯವಸ್ಥೆಯನ್ನು ನ್ಯಾಯವ್ಯವಸ್ಥೆಯನ್ನು ತಮ್ಮ ಮುಷ್ಟಿಯೊಳಗಿರಿಸಿ ಕೊಳ್ಳುವಲ್ಲಿ ಯಶಸ್ವಿಯಾದರು. ಜನಸಂಖ್ಯೆ ಬೆಳೆಯುತ್ತಾ ಹೋಯಿತು. ವಿದ್ಯೆ, ಆರೋಗ್ಯ,

ಆಹಾರ, ಉದ್ಯೋಗ ಸವಲತ್ತುಗಳು ಜನಸಾಮಾನ್ಯರಿಗೆ ಎಟುಕುವುದೇ ದುರ್ಭರವಾಯಿತು. ನಗರಗಳಿಗೆ ವಲಸೆ ಪ್ರಾರಂಭವಾಯಿತು. ಅನ್ಯಾಯ, ಹಸಿವು, ಸಾಮಾಜಿಕ ವ್ಯವಸ್ಥೆಯ ಉಚ್ಛ್ವಾಸ ನಿಶ್ವ್ವಾಸಗಳಾದವು ಪ್ರಜಾಪ್ರಭುತ್ವದ ಹೆಸರಿನಲ್ಲಿ ಅಪಾರ ಹಣ ಸಂಗ್ರಹಿಸುವ ಧೂರ್ತರು ಆಡಳಿತಗಾರರಾದರು. ಮಾತಿನಲ್ಲಿ ಸೋಷಲಿಸಂ ಕೈಯಲ್ಲಿ ಸ್ವಾರ್ಥಲಾಭ ಅತಿ ಸಾಮಾನ್ಯವಾಯಿತು. ಆಂಧ್ರಪ್ರದೇಶ ಪ್ರಧಾನವಾಗಿ ಕೃಷಿ ಅವಲಂಬಿತ ರಾಜ್ಯವಾಗಿರುವುದರಿಂದ ನೆಲ, ಕೃಷಿಕ ಹಾಗೂ ಕಾರ್ಮಿಕರ ಆಶೋತ್ತರಗಳಿಗೆ ಸ್ಪಂದಿಸುವುದೇ ತೆಲುಗು ಕಥಾಸಾಹಿತ್ಯದ ಪ್ರಧಾನ ಆಶಯವಾಯಿತು.

ಆಂಧ್ರಪ್ರದೇಶವು ಮುಖ್ಯವಾಗಿ ಕೃಷಿಪ್ರಧಾನವಾದ ರಾಜ್ಯವಾಗಿರುವುದರಿಂದ ಅಲ್ಲಿ ಜಮೀನ್ದಾರಿ ವ್ಯವಸ್ಥೆ ತೀವ್ರವಾಗಿ ರೈತರ ಶೋಷಣೆಗೆ ನಿಂತಾಗ ರೈತರ ಮತ್ತು ಜಮೀನ್ದಾರರ ನಡುವೆ ಭೂಮಿಗಾಗಿ ಅನೇಕ ಹೋರಾಟಗಳೇ ನಡೆದು ಚಳುವಳಿ ಮತ್ತು ಸಾಹಿತ್ಯ ಜೊತೆ ಜೊತೆಗೆ ಮೂಡಿಬಂದಿದ್ದು ವಿಶೇಷ. ಇಲ್ಲಿ ಎರಡು ರೀತಿಯ ಸಾಹಿತ್ಯವನ್ನು ಕಾಣಬಹುದಾಗಿದೆ. ಒಂದು ಆಳುವ ವರ್ಗದ ಅಧೀನಸಂಸ್ಕೃತಿಯ ಸಾಹಿತ್ಯ. ಇದು ಅಧಿಕಾರ ವರ್ಗದ ಹಿತಾಸಕ್ತಿ ಗಳಿಗನುಗುಣವಾಗಿ ಕೆಲಸ ಮಾಡುತ್ತದೆ. ಎರಡನೆಯದು ಪ್ರಜೆಗಳ ಸಾಹಿತ್ಯ. ಇಲ್ಲಿ ಪ್ರಜೆ ಎಂದರೆ ಶ್ರಮಜೀವಿಗಳೆಂದೇ ಅರ್ಥ. ಈಗಲೂ ಸಾಹಿತ್ಯದ ಎರಡು ಭಿನ್ನ ರೂಪಗಳನ್ನು ಆಂಧ್ರಪ್ರದೇಶದಲ್ಲಿ ಕಾಣಬಹುದಾಗಿದೆ ಅಧಿಕಾರವರ್ಗದ ಸಾಹಿತ್ಯ ಪುರಾಣೋಪನಿಷತ್ತು ಮತ್ತು ಮನೋರಂಜನೆಯೇ ಮುಖ್ಯವಾಗಿರುವಂತಹ ಸಾಹಿತ್ಯ. ಪ್ರಜೆಗಳ ಸಾಹಿತ್ಯಕ್ಕೆ ಮಾರ್ಕ್ಸ್, ಲೆನಿನ್, ಮಾವೋ ಸಿದ್ಧಾಂತಗಳು ಪೌಷ್ಟಿಕಾಂಶ ಒದಗಿಸುತ್ತವೆ. ಅನೇಕ ಚಳುವಳಿಗಳಿಗೆ ಹೋರಾಟಗಳಿಗೆ ಕುಮ್ಮಕ್ಕು ನೀಡುತ್ತಿವೆ. ಇಲ್ಲಿ ಸಾಮಾನ್ಯ ಜನ ತಮ್ಮವರ ನಿಲುವಿನ ಸಾಹಿತ್ಯಕ್ಕೆ ಸ್ಪಂದಿಸುವ ರೀತಿಯೇ ಅನನ್ಯವಾಗಿದೆ. ಇಲ್ಲಿ ಕಥೆಯ ತಂತ್ರ ಮುಖ್ಯವಲ್ಲ, ಸಾಹಿತ್ಯ ಏನನ್ನು ಪ್ರತಿಪಾದಿಸುತ್ತಿದೆ, ಅದು ನೆಲಕ್ಕೆ ಎಷ್ಟು ಹತ್ತಿರವಾಗಿದೆ ಎಂಬುದು ಮುಖ್ಯ. ಕಲಾಕೌಶಲ್ಯ ಜಾನಪದ ಹಿನ್ನೆಲೆಯಿಂದ ಬಂದಿರಬೇಕು ಎಂಬುದು ಮುಖ್ಯ. "ಶ್ರಮ ಸೌಂದರ್ಯವೇನೇ ಸಾಹಿತ್ಯದ ಸೌಂದರ್ಯ" ಎಂಬ ಕಲ್ಪನೆ ಮೂಡಿತು. ಶ್ರಮದ ದರೋಡೆಯಿಂದ ಮೂಡಿದ ಜಮೀನ್ದಾರಿ ವ್ಯವಸ್ಥೆಯ ಕರಾಳಮುಖಗಳನ್ನು ಸಾಹಿತ್ಯ ಗುರುತಿಸ ತೊಡಗಿತು. ಈ ಕುರಿತು ದುಡಿಯುವ ಶೋಷಿತ ಜನಸಮುದಾಯದ ಆಶೋತ್ತರಗಳಿಗನುಗುಣವಾಗಿ ಸಾಹಿತ್ಯ ಸ್ಪಂದಿಸತೊಡಗಿತು.

**'ಕಾಡೊಳಗೆ ಬೆಳದಿಂಗಳು'** ಬಿ.ಎಸ್.ರಾಮುಲು ಬರೆದಿರುವ ಈ ಕಥೆಯಲ್ಲಿ ಕಾಡಿನಲ್ಲಿ ವಾಸಿಸುವ ಬುಡಕಟ್ಟು ಜನಾಂಗದವರಾದ 'ಗೊಂಡರು' ಹೇಗೆ ಅಧಿಕಾರಿವರ್ಗದವರಿಂದ, ದೊರೆಗಳಿಂದ ಶೋಷಣೆಗೆ ಒಳಗಾಗಿ ತಮ್ಮ ದುಡಿಮೆಯ ಫಸಲನ್ನು ಕಳೆದುಕೊಂಡು ಒಂದು

ತುತ್ತು ಗಂಜಿಗೂ ಪರದಾಟ ಪಡುವಂತಹ ದಾರುಣ ಬದುಕಿನ ಚಿತ್ರಣವಿದೆ. ನಂತರ ಅವರು ಕಾಮ್ರೇಡ್‌ಗಳ ಸಹಾಯವನ್ನು ಪಡೆಯುವ ಅನ್ಯಾಯದ ವಿರುದ್ಧ ಹೋರಾಡಲು ಚಿಂತಿಸತೊಡಗುವ ರೀತಿ ಅನನ್ಯವಾಗಿದೆ. ಅಡವಿಯ ಮಡಿಲಲ್ಲಿ ಅಮಾಯಕ ರೀತಿಯಲ್ಲಿ ಬದುಕುತ್ತಿರುವ ಕಾಡು ಜನರಾದ ಗೊಂಡರ ಪೈಕಿ ಇಸ್ರುವಿನ ಕುಟುಂಬವು ಒಂದು. ಒಂದು ದಿನ ಇಸ್ರುವಿನ ಮೇಕೆಗಳು ರಿಸರ್ವ ಫಾರೆಸ್ಟ್‌ನಲ್ಲಿ ಅಕ್ರಮವಾಗಿ ಮೇಯುತ್ತಿದ್ದವೆಂಬ ಕಾರಣಕ್ಕೆ ಫಾರೆಸ್ಟ್ ಅಧಿಕಾರಿಗಳು ಇಸ್ರುವಿನ ಜೋಪಡಿಗೆ ಬಂದು ಸಿಕ್ಕಿದ ಮಡಕೆ ಕುಡಿಕೆಗಳನ್ನು ಹಾಳು ಮಾಡಿ ತಿನ್ನುವ ಅಂಬಲಿ ಗಡಿಗೆಯನ್ನು ಚೂರು ಚೂರು ಮಾಡಿ ನಂತರ ಮನೆಯಲ್ಲಿ ಹಬ್ಬಕ್ಕೆ ಎಂದು ಇಟ್ಟಿದ್ದ ಹೆಂಡವನ್ನು ಕುಡಿದು ಅವರ ಹೆಣ್ಣುಮಕ್ಕಳ ಮೇಲೆ ಅಶ್ಲೀಲವಾಗಿ ಮಾತಾಡುತ್ತಾ ಅಸಭ್ಯವಾಗಿ ವರ್ತಿಸಿದ್ದಲ್ಲದೆ ಇಸ್ರು ಮತ್ತು ಅವನ ತಮ್ಮನನ್ನು ಚೆನ್ನಾಗಿ ಹೊಡೆದು ದಂಡ ಹಾಕುತ್ತಾರೆ. ಮೇಕೆ, ಹೊಲದ ಬಾಬತ್ತೆಲ್ಲಾ ಸೇರಿ ಐವತ್ತು ರೂಪಾಯಿಗಳ ದಂಡವನ್ನು ಹಾಕುತ್ತಾರೆ. ಹತ್ತು ರೂಪಾಯಿಯನ್ನು ಪಡೆಯುವ ಕಷ್ಟದಲ್ಲಿದ್ದ ಇಸ್ರುವಿಗೆ ಐವತ್ತು ರೂಪಾಯಿ ಬಹಳವೇ ದೊಡ್ಡ ಮೊತ್ತದ ದಂಡವಾಗಿರುತ್ತದೆ. ಎರಡು ದಿನದಲ್ಲಿ ದಂಡ ಕಟ್ಟಲಿಲ್ಲ ಎಂದರೆ ಹೊಲದ ಬೆಳೆ ಮತ್ತು ಮೇಕೆಗಳನ್ನು ಹೊಡೆದುಕೊಂಡು ಹೋಗುವುದಾಗಿ ಎಚ್ಚರಿಸಿ ಹೋಗುತ್ತಾರೆ ಹಾಗೂ ಕಾಗದದ ಕಾರ್ಖಾನೆಗೆ ಬೇಕಾಗುವ ಬಿದಿರನ್ನು ಕಡಿಯಲು ಅವರನ್ನು ಉಪಯೋಗಿಸಿ ಕೊಳ್ಳುತ್ತಾರೆ. ಅಡವಿ ನಾಶವಾಗಿ ಕೃಷಿಯೋಗ್ಯ ಭೂಮಿಯನ್ನು ಯಾವ ಖರ್ಚಿಲ್ಲದೆ ಗೊಂಡರಿಂದ ಫಾರೆಸ್ಟ್ ಅಧಿಕಾರಿಗಳು ವಶಪಡಿಸಿಕೊಳ್ಳುವರು. ಅಂಥ ಕಡೆ ಸರ್ಕಾರ ಪುನಃ ಬಿದಿರನ್ನು ಬೆಳೆಸಲು ಆರಂಭಿಸುವುದು. ಈ ರೀತಿ ವ್ಯವಸಾಯ ನಶಿಸಿ ಬಿದಿರಿನ ಪ್ಲಾಂಟೇಶನ್ ಅಭಿವೃದ್ಧಿ ಗೊಳ್ಳುತ್ತಿರುವುದು. ಆಗಾಗ ನಿರಾಶ್ರಿತರಾಗುವ ಗೊಂಡ ಜನಾಂಗದವರು ಸ್ಥಿರಕೃಷಿಕರಾಗುವ ಸಲುವಾಗಿ ಅನೇಕ ರೀತಿಯ ಶ್ರಮ ಪಡುತ್ತಿರುವರು. ಆ ರೀತಿಯಲ್ಲಿ ಕಾಡನ್ನು ಕಡಿದು ವ್ಯವಸಾಯಯೋಗ್ಯ ಭೂಮಿಯನ್ನಾಗಿ ಮಾಡಲು, ಬೆಳೆ ಬೆಳೆಯಲು ಮೂರು ವರ್ಷ ಹಿಡಿಯುವುದು. ಆ ಸಮಯಕ್ಕೆ ದೊರೆಗಳು ಫಾರೆಸ್ಟ್ ಅಧಿಕಾರಿಗಳನ್ನು ಹಿಂದೆ ಇಟ್ಟುಕೊಂಡು ಭೂಮಿಯನ್ನು ಕಬ್ಜಾ ಮಾಡುವರು. ಗೊಂಡರು ಕ್ರಮೇಣ ತಮ್ಮ ಪೂರ್ವಸ್ಥಿತಿಗೆ ಬರುವರು.

ತಾವು ಬೆಳೆದ ಫಸಲಿನಲ್ಲಿ ದೊರೆ ಪಾಲಿಗೆ ಒಂದು ಚೀಲ, ದಸರ ಹಬ್ಬಕ್ಕೆ ತಂದ ದೋತರಕ್ಕೊಂದು ಚೀಲ ಬೇಳದಂತೆ ಲೆಕ್ಕ ಹಾಕಿ ಅಳೆಸಿಕೊಂಡ ಸಾಹುಕಾರ ಹಬ್ಬದ ದಿನಸಿ ಸಾಮಾನಿಗೊಂದು ಚೀಲದಂತೆ ಎಲ್ಲಾ ಅಳೆಸಿಕೊಂಡ ಸಾಹುಕಾರ ಇಸ್ರುವಿಗೆ ಕೇವಲ ಎರಡು ಚೀಲ ಮಾತ್ರ ಬಿಡುತ್ತಾನೆ. ಇಸ್ರು ಯೋಚಿಸುತ್ತಾನೆ. ತಾನು ಮತ್ತು ತನ್ನ ಕುಟುಂಬ ಇದರಲ್ಲಿ ಮುಂದಿನ ಬೆಳೆಗೆ ಕಾಳು ಎತ್ತಿಟ್ಟು ಉಳಿದ ಧಾನ್ಯದಲ್ಲಿ ದಿನ ಒಪ್ಪತ್ತು ಗಂಜಿ ಕುಡಿದರೂ

ಒಂದು ವರ್ಷಕ್ಕೆ ಸಾಕಾಗಲ್ಲ. ಕಾಡುಪ್ರಾಣಿಗಳಿಂದ ಹಗಲು ರಾತ್ರಿ ಕಾಯ್ದು ಇಂಥ ದುರುಳರ ಕೈಯಲ್ಲಿ ಇಟ್ಟಂಗಾಯಿತು ಅಳಲು ಇಸ್ರುವಿನ ಕಣ್ಣಲ್ಲಿ ನೀರೂ ಸಹ ಇರಲಿಲ್ಲ. ಇಂಥ ರಾತ್ರಿ ಅವನು ಚಿಂತಿಸುತ್ತಾ ತನ್ನ ಗುಡಿಸಲಿನ ಹೊರಗೆ ಕೂತಾಗ ಕಾಡಿನಲ್ಲಿ ರಾತ್ರಿಯಿಡೀ ನಡೆದು ನಡೆದು ದಣಿದ ಕಾಮ್ರೇಡ ತಂಡ ಇಸ್ರುವಿನ ಗುಡಿಸಿಲಿನ ಹತ್ತಿರ ಬರುತ್ತೆ. ಅವರಿಗೆ ಆ ರಾತ್ರಿ ತಂಗಲು ಹಾಗೂ ಊಟದ ವ್ಯವಸ್ಥೆ ಮಾಡಿದ ಇಸ್ರುವಿನ ಕುಟುಂಬ ರಾತ್ರಿ ಬಹಳ ಹೊತ್ತಿನವರೆಗೆ ಅವರ ಜೊತೆ ಮಾತಾಡುತ್ತಾ ಕುಳಿತಾಗ ಅವರ ಕೈಯಲ್ಲಿನ ಬಂದೂಕನ್ನು ನೋಡಿದ ಇಸ್ರುವಿನ ಕುಟುಂಬ 'ಇದರಿಂದ ಕಾಡುಹಂದಿಯನ್ನು ಹೊಡಿಬೌದೇ' ಎಂದು ಕೇಳಿದಾಗ, ಆ ಯುವಕನು 'ನಮ್ಮ ಕೊಲ್ಲೋ ಮನುಷ್ಯರನ್ನು ಇದರಿಂದ ಕೊಲ್ಲಬಹುದು' ಎಂದು ಹೇಳುತ್ತಾನೆ. ಆಗ ಏಸು, ಮೋತಿ, ಅಲ್ಲಿದ್ದವರೆಲ್ಲಾ ಅದನ್ನು ಪ್ರೀತಿಯಿಂದ ಮುಟ್ಟಿ ಮುಟ್ಟಿ ನೋಡಿದರು. ಅಡವಿ ಬೆಳದಿಂಗಳಲ್ಲಿ ಮುಳುಗೇಳುತ್ತಿತ್ತು. ದಾರಿ ಕಾಣಿಸಿತೆಂಬಂತೆ ಏಸು ಮಾತ್ರ ಚಿತ್ರ ವಿಚಿತ್ರ ಊಹೆಗಳಿಂದ ನಿದ್ದೆಯನ್ನೇ ಮಾಡಲಿಲ್ಲ ಹೀಗೆ ಶೋಷಣೆಗೆ ಒಳಗಾದ ಕಾಡಿನ ಬುಡಕಟ್ಟು ಜನಾಂಗ ಕಾಮ್ರೇಡುಗಳ ಜೊತೆ ಸೇರಿ ತಮ್ಮ ಅಸ್ತಿತ್ವಕ್ಕಾಗಿ ಹೋರಾಟದಲ್ಲಿ ತೊಡಗಿ ಮುಂದೆ ಇದೇ ದೊಡ್ಡ ದೊಡ್ಡ ಹೋರಾಟಗಳಿಗೆ ನಾಂದಿ ಹಾಡಿತು.[೩]

**"ಭೂತಾಯಿ"** ಎ. ಅಪ್ಪಲ್ನಾಯುಡು ಬರೆದಿರುವ ಕಥೆ ಇದರಲ್ಲಿ ಬರಗಾಲದಿಂದ ಮಳೆ ಬಾರದೆ ತತ್ತರಿಸುವ ರೈತಾಪಿ ಕುಟುಂಬ ಹೇಗೆ ಬಡತನದಿಂದ ತಮ್ಮ ಜಮೀನನ್ನು ಶ್ರೀಮಂತರ ಮೋಸಕ್ಕೆ ಬಲಿ ಕೊಡಬೇಕಾಗುತ್ತದೆ ಎಂಬುದರ ವಾಸ್ತವ ಚಿತ್ರಣವನ್ನು ಕಾಣಬಹುದಾಗಿದೆ. ಭೂಮಿತಾಯಿಯನ್ನು ನಂಬಿ ಸಾಲ ಸೋಲ ಮಾಡಿ ಬೀಜ ಬಿತ್ತಿದ್ದ ಗನ್ನಯ್ಯನಿಗೆ ಮಳೆ ಬಾರದೆ ಜೀವನ ನಡೆಸುವುದೇ ತುಂಬಾ ಕಷ್ಟಕರವಾದಾಗ ಹೆಂಡತಿಯ ತಾಳಿಬೊಟ್ಟು ಮಾರಿ ನಂತರ ತಾಯಿಯ ಕಿವಿಯ ಬುಗುಡಿಯನ್ನು ಕೇಳುತ್ತಾನೆ. ಆದರೆ ಆಕೆ ಅದನ್ನು ಕೊಡಲು ನಿರಾಕರಿಸಿದಾಗ ಜಗಳವಾಗಿ ಆಕೆಯನ್ನು ಹೊಡೆದು ಕಿತ್ತುಕೊಳ್ಳುತ್ತಾನೆ. ಅವುಗಳನ್ನು ತೆಗೆದುಕೊಂಡು ಸಾಹುಕಾರನ ಹತ್ತಿರ ಅಡ ಇಡಲು ಹೋದಾಗ ಅವನ್ನು ಮಾರಲು ಆತ ಪ್ರೇರೇಪಿಸುತ್ತಾನೆ. ನಂತರ ಬೀಜ ಗೊಬ್ಬರ ಲೆಕ್ಕಕ್ಕೆ ಆತನ ಭೂಮಿಯನ್ನು ಕಾಗದ ಪತ್ರಕ್ಕೆ ತಾಯಿ ಹೆಬ್ಬೆಟ್ಟು ಹಾಕಿಸುವಂತೆ ಒತ್ತಾಯಿಸುತ್ತಾನೆ.

ಗನ್ನಯ್ಯ ತಾಯಿಯನ್ನು ಹುಡುಕಿಕೊಂಡು ಮನೆಗೆ ಹೋದಗ ಆಕೆ ಅಲ್ಲಿ ಕಾಣಲಿಲ್ಲ. ಯಾರೋ ಹೇಳಿದರು 'ನಿಮ್ಮ ಅವ್ವ ಹೊಲದ ಕಡೆ ಹೋಗಿದ್ದಾಳೆ' ಎಂದು. ರಾತ್ರಿ ಕತ್ತಲಲ್ಲಿ ನರಸಿಂಹ ಟಾರ್ಚು ಹಾಕುತ್ತಾ ಮುಂದು ಮುಂದೆ ನಡೆದ ಗನ್ನಯ್ಯ ಹಿಂದೆ ಹಿಂದೇ ಏಯ್! ಯವ್ವೊ! ಯವ್ವೊ! ಎಂದು ಕೂಗುತ್ತಾ ಹೊಲದ ಹತ್ತಿರ ಬಂದು ನೋಡಿದಾಗ ಹೊಲದ

ಕೆಸರಲ್ಲಿ ಆಕೆಯ ಕೋಲು ಸಿಕ್ಕಿಹಾಕಿಕೊಂಡಿತ್ತು. ಅದರೊಂದಿಗೆ ಮುದುಕಿಯ ಕೈ ಕಾಲು ಕೆಸರೊಳಗೆ ಸಿಕ್ಕಿಕೊಂಡಿರುವುದು ಕಂಡಿತು. ಈ ಭೂಮಿ ನನ್ನದು.. ಅನ್ನುವಂತೆ ಕೋಲು, ಕೈ ಕಾಲು ಗದ್ದೆಗೆ ಹೊತ್ತು ಇದು ತನ್ನದೆನ್ನುವ ಹಕ್ಕನ್ನು ಪ್ರಕಟಿಸಿರುವುದು, ಹಾಗೆಯೇ ಅದರ ತಲೆ ನೆಲದ ಕಡೆ ವಾಲಿರುವುದು ಕಂಡಿತು. "ಒಯಪ್ಪೋ.. ಮುದುಕಿ ಎಂಥಾ ಕೆಲಸ ಮಾಡ್ಕಂಡಿದೆಯಲಪ್ಪೋ" ಎಂದು ಮುದುಕ ನೋವಿನಿಂದ ಕೂಗಿದ. "ನನ್ನ ಅವ್ವನನ್ನು ನಾನೆ ಕೊಂದಾಕಿ ಬಿಟ್ಟೆ, ನಾನೆ ಕೊಂದದ್ದು. ಈ ಭೂಮಿ ಮೇಲೆ ಅದರ ಪ್ರಾಣವಿತ್ತು. ಈ ನೆಲ ನಂದಂದ್ದೇ ತಪ್ಪಾತು" ಎಂದು ಗನ್ನಯ್ಯ ಎದೆ ಎದೆ ಬಡಿದುಕೊಳ್ಳುತ್ತಾ ಮುದುಕಿಯ ಕೈ ಕಾಲು ಕೀಳತೊಡಗಿದ. ನಂತರ ಹೆಗಲ ಮೇಲೆ ಹೊತ್ತು ನಡೆದ. "ಕೊನೆಗೆ ನಮ್ಮಂಥವರಿಗೆ ಉಳುಕೊಳ್ಳುವುದು ಬರೀ ಸಾವು ಮಾತ್ರ.. ಮುದುಕಿ ಸತ್ತು ಭೂಮಿಯನ್ನು ಬಿಡಬೇಡಾಂತ ಹೇಳ್ಯತೆ.. ಇದನ್ನು ನೀನು ಮೊದಲೇ ಅರ್ಥ ಮಾಡಿಕೊಳ್ಳಬೇಕಿತ್ತು. ಇರೋ ಭೂಮಿಯನ್ನು ನುಂಗಾಕಬೇಕು. ಅಂತ ಸೂರಿಬಾಬು ನೋಡ್ತಿದ್ದಾನೆ. ಯಾಕ ನಾವಿಂಗಾಗ್ತಾದ್ವೀವೋ ಯಾರು ನಮಗಿಂಗೆ ಬರೀಲಿಕ್ಕೆ ಹತ್ಯಾರೋ.. .. ಇನ್ನು ಮೇಲಾದ್ರು ಅರ್ಥ ಮಾಡಿಕೊ" ಎಂದು ನರಸಿಂಹ ಹೇಳುತ್ತಾನೆ"(ಒಂದು ಪೀ.ತೆ. ಕಥೆ, ಪು. ೮೮–೮೯).

ಆಂಧ್ರಪ್ರದೇಶದ ಶ್ರೀಕಾಕುಳಂ, ತೆಲಂಗಾಣ ಮುಂತಾದ ಕಡೆ ನಡೆದ ರೈತರ ಹೋರಾಟ. ಜಮೀನ್ದಾರರ ದುರಾಡಳಿತವು ಮಿತಿಮೀರಿದಾಗ ಪ್ರತಿಭಟನೆಗಳು ಮೊಳಕೆ ಒಡೆಯುತ್ತವೆ. ಈ ಮೊಳಕೆಗಳನ್ನು ಸಂಘಟಿಸಿ ಪೋಷಿಸಿ ಅನ್ಯಾಯದ ವಿರುದ್ಧ ಶೋಷಣೆಯ ವಿರುದ್ದ ಧ್ವನಿ ಎತ್ತುವಂತೆ ಮಾಡಿದ್ದು ಸಂಘಂ ಸಂಸ್ಥೆ ತೆಲಂಗಾಣ ಹೋರಾಟ, ನಕ್ಸಲ್ ಹೋರಾಟಗಳು, ಇವುಗಳ ಜೊತೆ ಜೊತೆಗೆ ಅಲ್ಲಿಯ ಸಾಹಿತ್ಯ ಕೂಡ ಹುಟ್ಟಿಕೊಂಡಿದ್ದು ಸಾಹಿತಿಗಳು ತಮ್ಮ ಒಂದು ಕಾಲನ್ನು ಹೋರಾಟಗಳಲ್ಲಿಯೂ ಇನ್ನೊಂದು ಕಾಲನ್ನು ಸೆರೆಮನೆಯಲ್ಲಿಯೂ ಇಟ್ಟು ಸಾಹಿತ್ಯವನ್ನು ಹುಟ್ಟು ಹಾಕಿದ್ದು ಅತ್ಯಂತ ವಾಸ್ತವದ ನೆಲೆಗಟ್ಟಿನ ಮೇಲೆ ಎಂದರೆ ತಪ್ಪಾಗಲಾರದು. ಹೀಗಾಗಿ ಇಲ್ಲಿಯ ಕಥೆಗಳಲ್ಲಿ ದಾರುಣ ಬದುಕಿನ ಚಿತ್ರಣ ಹೋರಾಟಗಳ ಹಸಿ ಹಸಿ ಚಿತ್ರಣ ಜೊತೆಗೆ ಜೊತೆಗೆ ಕಾಣಿಸಿಕೊಳ್ಳುತ್ತದೆ.

**'ಭೂಮಿ'**: ಅಲ್ಲಂ ರಾಜಯ್ಯ ಬರೆದಿರುವ ಈ ಕಥೆಯಲ್ಲಿ ಹೋರಾಟಗಳನ್ನು ಸರಕಾರ ಎಷ್ಟೇ ಹತ್ತಿಕ್ಕಿದರೂ ಅವು ನಿರಂತರವಾಗಿ ಮುಂದುವರಿಯುತ್ತವೆ. ಎಲ್ಲಿಯವರೆಗೂ ರೈತರಲ್ಲಿ ಆತ್ಮ ವಿಶ್ವಾಸವಿರುತ್ತೋ ಅಲ್ಲಿಯವರೆಗೂ ಈ ಹೋರಾಟಗಳು ನ್ಯಾಯಕ್ಕಾಗಿ ಹೋರಾಡುತ್ತವೆ ಎನ್ನುವ ಈ ಕಥೆಯಲ್ಲಿ ಬರುವ ಮುದುಕ, ಆತನ ಆತ್ಮವಿಶ್ವಾಸ ತುಂಬಾ ದೊಡ್ಡದು. ರೈತರು ತಮ್ಮ ಮೇಲೆ ಜಮೀನ್ದಾರರು ನಡೆಸುವ ದಬ್ಬಾಳಿಕೆಯಿಂದ ರೋಸಿ ಸಂಘಟಿತರಾಗಿ

ಹೋರಾಡುತ್ತಾರೆ. ಇಂಥಾ ಸಂಘಟನೆಗಳನ್ನು ಹತ್ತಿಕ್ಕುವ ಸಲುವಾಗಿ ಶ್ರೀಮಂತರು, ದೊರೆಗಳು ಈ ರೈತರೆಲ್ಲಾ ನಮ್ಮ ಮೇಲೆ ಹಲ್ಲೆ ಮಾಡಲು ಬಂದಿದ್ದಾರೆ ಎಂದು ಪೋಲಿಸಿನವರಿಗೆ ದೂರು ಕೊಟ್ಟು ಅವರನ್ನು ಒಳಗೆ ಹಾಕಿಸುತ್ತಾರೆ. ಶ್ರೀಮಂತರೇ ಬಂದೂಕಿನಿಂದ ರೈತರ ಮೇಲೆ ಗುಂಡು ಹಾರಿಸಿ ಅವರನ್ನೆಲ್ಲಾ ಸೆರೆಮನೆಗೆ ಕಳಿಸಿದ್ದು ಅಲ್ಲಿಯ ರೈತರನ್ನು ಕೆರಳಿಸುತ್ತದೆ. ಇಂಥ ಸಂದರ್ಭದಲ್ಲಿ ತನ್ನ ಅಳಿಯನನ್ನು ಸೆರೆಮನೆಗೆ ಹಾಕಿದಾಗ ಅವನನ್ನು ಕಾಣಲು ಹಳ್ಳಿಯ ಹಾದಿಯಲ್ಲಿ ಬರುತ್ತಿರುವಾಗ ಹೋರಿಯನ್ನು ಹೊಡೆದುಕೊಂಡು ಹೋಗುತ್ತಿರುವ ಮುದುಕನ ಪರಿಚಯವಾಗುತ್ತದೆ. ಹಾದಿಗುಂಟ ಅವರು ಆ ಹಳ್ಳಿಯ ಹೋರಾಟದ ಬಗ್ಗೆ ಚರ್ಚಿಸುತ್ತಾ ಸಾಗುತ್ತಾರೆ. ರಸ್ತೆಯ ಮಗ್ಗುಲಲ್ಲಿ ರೈತ ಹೊಲ ಹೂಳುತ್ತಾ ಹಾಡುತ್ತಾನೆ.

ರಕ್ತ ಸುರಿಸಿ ಬೆವರು ಸುರಿಸಿ
ಬೆನ್ನಮ್ಯಾಲ ಬಂಡೆ ಹೊತ್ತು
ಬೀಳು ನೆಲವ ಉತ್ತಿ ಬಿತ್ತಿ
ಬೆಳೆದ ನವಣಿ ಜೋಳವನ್ನು
ಯಾವನವನು ತನ್ನದೆನ್ನೋನು?
ಯಾವನವನು ಭೂಮಿಯನ್ನು ತನ್ನದೆನ್ನೋನು

ಅದನ್ನು ಕೇಳಿ ನನ್ನ ಮನಸ್ಸಿಗೆ ಒಂಥರಾ ಆಯ್ತು ಇಂಥಾ ಪದಗಳೆ ಮಂದೀನ ಹಾಳು ಮಾಡೋದು.. .. ಹಿಂದಿನ ಕಾಲದಿಂದಲೂ ಬಂದಿರೊ ರೀತಿ ರಿವಾಜನ್ನು ಒಂದೇ ಏಟಿಗೆ ಅದ್ಲು ಬದ್ಲು ಮಾಡುತ್ತೀನಂತ ಹೊಂಟಾರ.. ಏನ್ರೋ ದಡ್ ಸೂಳ್ಯ ಮಕ್ಳಾ.. ಗಾಂದಾಸ್ ನಂಥೋನೆ ಗಂಗೇ ಪಾಲಾಗಿರುವಾಗ "ನಮ್ಮ ಭಾವ ಮೈದುನ ಯಾಕ ಸಂಘಕ್ಕೆ ಸೇರ ಬೇಕಾಗಿತ್ತಂತೀನಿ ಅದಾಲತಂದ್ರೆ ಸುಮ್ನೆ ಆಗ್ತದೇನು ಅದಾಲತ್ ಅಂದ್ರೆ ಅದಾ ಹಾಲತ್.. .. ಖತಂ ಎಂದು ಅರ್ಥ. ಕೋರ್ಟಿನಲ್ಲಿ ಕೇಸು ನಾಮಿನೀಕೆನ್ನೊಂದೇ ಅಲ್ಲ ಕೇಸು ನಿಲ್ಲೋದಿಲ್ಲ.. .. ಮನೆ ಮಠ ಉಳಿಯೋದಿಲ್ಲ.. .. ದಾರಿಹೋಕನನ್ನು ಕಥಾನಾಯಕ ಕೇಳುತ್ತಾನೆ. ಊರಾಗ ಪೋಲೀಸ್ಸು ಅದರಾಂತಿ.. .. ಬೆಳೆಪಳೆ ಎಲ್ಲ ಸರ್ವನಾಶ ಆಗ್ಯಾವಂತೇ.. .. ಕೂಲಿನಾಲಿ ಬಂದಾಗ್ಯಾವಂತಿ.. .. ಮತ್ತೆ ಈ ಹೋರಿನ ಹೊಡ್ಕೊಂಡೋಗಿ ಏನ್ಮಾಡ್ತಿ?

"ಹಿಂಗಾ ಏಸುಕಾಲ ಇದ್ದೀತಪ್ಪಾ"

"ಅವು ಮನಸ್ಸು ಮಾಡಿದ್ರೆ ಮಾತ್ರ..

"ಯಾರ್ದಾರ ಭೂಮಿ ಸಾಮಿ ಮಾಡ್ತೀರಿ"

"ಭೂಮಿ ಅವರ್ದೂ ಇವರ್ದೂಂತ ಏನಾರಾ ಇರ್ತದೇನು! ಪರಂಪೋಕು ಭೂಮಿ ಸಾಮಿ ಮಾಡ್ಕಂತವಿ.."

ಅಬ್ಬಾ! ಮುದುಕ ಸಾಮಾನ್ಯ ಮನುಷ್ಯ ಅಲ್ಲ ಅಂದ್ಕೊಂಡೆ.. .. ಇಷ್ಟೆಲ್ಲ ನಡೆದಮ್ಯಾಲು ಪರಂಪೋಕು ನಿರಂಪೋಕ ಮಾಡ್ಕಂತೀನಿ ಅಂತಿದ್ದಾನೆ. ಆತನ ಆತ್ಮವಿಶ್ವಾಸ ನೋಡಿ ಆತನ ಮೇಲೆ ನನಗೆ ಹೊಟ್ಟೆಕಿಚ್ಚು ಬಂತು.

"ನೀನೇನೊ ಮಾಡ್ಕಬೇಕಂತಿ, ಆದ್ರೆ ಅದ್ಕೆಲ್ಲ ಪರಮಿಷನು ಕೊಡೋರ್ರ್ಯಾರು ಏನು ಮಾಡ್ತಾರೆ"

"ಏನು ಮಾಡ್ತಾರೆ"

ಗಂಗಣ್ಣನ ಮಾತಿನಲ್ಲಿ ಹುಚ್ಚುತನ ಎದ್ದು ಕಾಣುತ್ತಿರುವುದು.

"ಏನ್ಮಾಡ್ತಾರಂತೆ ನಾನು ಹೇಳಲೆ। ನಿಮ್ಮೋರ್ಗೇನುಗತಿ ಆಗೈತಿ"

"ಜೈಲಿಗೆ ಹಾಕ್ತಾರಂತೀಯಾ.. .. ಅಟೇನಾ"

"ನನ್ನ ಹಿಡ್ಕೊಂಡೋದ್ರೆ ನನ್ನ ಮಗ್ಳೂ ಸೊಸೆ ಉತ್ತುತ್ತಾರೆ"

ಮುದುಕ ಅಸಾಧ್ಯ ಮುಂಡೇ ಗಂಡ ಎಂದುಕೊಂಡೆ.

"ನಿನ್ನ ಮಗ್ಳು ಸೊಸೆನ್ನೂಡ ಜೇಲಿಗೆ ಹಿಡ್ಕೊಂಡೋಗ್ತಾರೆ"

"ಆ ಮೇಲೆ ನಮ್ಮುದ್ಕಿ ಗಳೇವು ಹೊಡ್ತದೆ!

"ನಿಮ್ಮ ಮ್ಮುದ್ಕಿರೇನೂ ಹಿಡ್ಕೊಂಡೋಗ್ತಾರೆ"

"ನನ್ನ ಮೊಮ್ಮಕ್ಳೂ ಗಳೇವು ಹೂಡ್ತಾರೆ"

"ಆಗ ಎತ್ತುಗಳೇ ಗಳೇವು ಕೆಲ್ಸ ಮಾಡ್ತಿವೆ"

"ಆಗ ಎತ್ತುಗಳನ್ನು ಪಿಂಜ್ರಾಪೋಲಿಗೆ ಕೂಡಿಹಾಕ್ತಾರೆ"

"ಆಗ ನೇಗಿಲು ಉಳುಮೆ ಮಾಡ್ತಿದೆ"

"ಆಗ ನೇಗಿಲುಗಳ್ಗೇನೇ ಹೊಸ ಜೈಲು ಕಟ್ಟಿಸುತ್ತಾರೆ"

"ಆಗ ಭೂಮಿ ತನ್ನ ಪಾಡಿಗೆ ತಾನೆ ಉಳಿಮೆ ಮಾಡ್ಕಂತತೆ"

.. ..ಕೇಳ್ತಿದ್ದೀಯಾ ಅಲ್ಲೀವರ್ಗೂ ನಾವು ಕಯಿಕಟ್ಕಂಡು ಕೂಕಡಿರ್ತಿವಂತ ತಿಳ್ದೀ ಏನು?

ನಾನು ಮುದುಕನ ಮುಕ ನೋಡಿದೆ.. ಕಣ್ಣು ಗುಡ್ಡೆಗಳು ನಿಗುರಿಕೊಂಡಿರುವುದು ಕಂಡಿತು. ಹಣೆ ಮೇಲಿನ ನರಗಳು ಉಬ್ಬಿರುವುದು.. ಆ ಸ್ಥಿತಿಯಲ್ಲಿರುವ ಗಂಗಣ್ಣನನ್ನು ಗೆಲ್ಲುವುದು ಅಸಾಧ್ಯವೆಂದುಕೊಂಡೆ.

ಈ ಕಥೆ ಹೋರಾಟಗಾರರಿಗೆ ಎಂಥಾ ಸ್ಫೂರ್ತಿಯನ್ನು ನೀಡಿರಬೇಕು. ಅವರ ಹೊರಾಟಗಳಿಗೆ ಈ ಗಂಗಣ್ಣನ ಮಾತುಗಳು ಅದೆಷ್ಟು ಪ್ರೇರಣೆ ಕೊಟ್ಟಿರಬೇಕು. ಹೋರಾಟಗಳು ನಿರಂತರ. ಅವನ್ನು ತಡೆದು ನಿಲ್ಲಿಸುವುದು ಅಸಾಧ್ಯ. ಒಂದು ಸಾರಿ ವ್ಯಕ್ತಿ ಆತ್ಮವಿಶ್ವಾಸದಿಂದ ತಿರುಗಿ ನಿಂತರೆ ಮತ್ತೆ ಹಿಂಜರಿಯುವುದಿಲ್ಲ. ಕುವೆಂಪು ಅವರು ಹೇಳುವಂತೆ ಬಡವ ತಿರುಗಿದರೆ ವಡಬ. ಅಂದರೆ ಬಡವ ತಿರುಗಿ ನಿಂತರೆ ಬೆಂಕಿಯಾಗುತ್ತಾನೆ ಎನ್ನುವಂತೆ ಹಸಿದವರು ಬೆಂಕಿಯಾಗಿ ಪ್ರತಿಭಟಿಸುತ್ತಾರೆ. ಭೂಮಿ ಸಿಗುವವರೆಗೂ ಹೋರಾಟ ಮುಂದುವರಿಯುತ್ತದೆ. ಇಂತಹ ಅದೆಷ್ಟೋ ಕಥೆಗಳು ಚಳುವಳಿಸಂಜಾತ ಲೇಖಕರಾದ ಕುಂ.ವೀ. ಅವರ ಮೇಲೆ ಗಾಢವಾದ ಪರಿಣಾಮ ಬೀರಿವೆ. ಅವನ್ನು ಸಮರ್ಥವಾಗಿ ಅನುವಾದಿಸಿ ಕನ್ನಡದ ಓದುಗರಿಗೆ ಉಣಬಡಿಸಿದ್ದಾರೆ." (ಒ.ಪೀ.ಕ., ಪು. ೧೬-೧೭-೨೨)

**'ಮಣ್ಣಿನ ಮಗ'**: ಚಿಲಕೂರಿ ದೇವಪುತ್ರ ಅವರ ಈ ಕಥೆಯು ಹೆಸರೇ ಸೂಚಿಸುವಂತೆ ಮಣ್ಣಿಗೆ ಸಂಬಂಧಿಸಿದ ಕಥೆಯಾಗಿದೆ. ರೈತಾಪಿ ಜನ ಎಷ್ಟೇ ಕಷ್ಟ ಬಂದರೂ ಎಷ್ಟೇ ಬರಗಾಲದ ಪರಿಸ್ಥಿತಿಯನ್ನು ಎದುರಿಸಿದರೂ ತಮ್ಮ ಭೂಮಿಯನ್ನು ಕಳೆದುಕೊಳ್ಳಲು ಇಚ್ಛಿಸುವುದಿಲ್ಲ. ಪ್ರಾಣ ಬೇಕಾದರೆ ಕೊಡುತ್ತಾರೆ. ಆದರೆ ಅವರು ನಂಬಿದ ಭೂಮಿಯನ್ನು ಮಾತ್ರ ಬಿಟ್ಟುಕೊಡುವುದಿಲ್ಲ. ಭೂಮಿ ಅವರ ಬದುಕಿನ ಭಾಗವಾಗಿದೆ. "ಮನೆ ಮಲತಾಯಿ ಭೂಮಿ ಹಡೆದ ತಾಯಿ" ಎನ್ನುವ ಗಾದೆಯ ಹಿನ್ನೆಲೆಯಲ್ಲಿಯೇ ಹುಟ್ಟಿಕೊಂಡಿರುವಂಥದ್ದು. ಮನೆ ಕಟ್ಟುವ ಸಲುವಾಗಿ ಮಗ ಮತ್ತು ಸೊಸೆ ಹಳ್ಳಿಯ ತಂದೆ ಮನೆಗೆ ಬರುತ್ತಾರೆ. ಪಟ್ಟಣದಲ್ಲಿ ತನ್ನ ವಾಸಕ್ಕೆ ಒಂದು ಮನೆ ಬೇಕು. ಪಟ್ಟಣದಲ್ಲಿ ಬಾಡಿಗೆ ಕೊಟ್ಟು ಸಾಕಾಗದೆ ಈ ಹಳ್ಳಿಯ ಜಮೀನಲ್ಲಿ ಏನೂ ಬೆಳೆ ಸರಿಯಾಗಿ ಬೆಳೆಯುತ್ತಿಲ್ಲ' ಎಂದು ಮಗ ಮತ್ತು ಸೊಸೆ ಜೀವನ ನಿರ್ವಹಣೆಗೆ ಕೆಲಸ ಅರಸಿ ಪಟ್ಟಣಕ್ಕೆ ವಲಸೆ ಹೋಗಿರುತ್ತಾರೆ. ಇವತ್ತು ಎಷ್ಟೋ ಹಳ್ಳಿಗಳು ಇಂಥ ಸಮಸ್ಯೆಗಳಿಗೆ ಸಿಕ್ಕು ಬರಿ ಮುದುಕರಿಂದ ತುಂಬಿದ ವೃದ್ಧಾಶ್ರಮಗಳಂತಾಗಿರುವುದು ಭಾರತ ದೇಶದ ದೌರ್ಭಾಗ್ಯವೇ ಸರಿ. ಆದರೆ ಈ ಕಥೆಯಲ್ಲಿ ಬರುವ ತಂದೆ ಭೂಮಿಯನ್ನು ನಂಬಿಕೊಂಡು ಅದು ಸರಿಯಾಗಿ ಬೆಳೆಯದಿದ್ದರೂ ಬದುಕು ಅತ್ಯಂತ ಕಷ್ಟಕರವಾಗಿದ್ದರೂ ಆತ ಜಮೀನು ಮಾಡುತ್ತಾ ಆ ಹಳ್ಳಿಯಲ್ಲೇ ವಾಸವಾಗಿರುತ್ತಾನೆ. ಅದು ಆತನ ಬದುಕಿನ ರೀತಿ ಮತ್ತು ಅಸ್ತಿತ್ವದ ಪ್ರಶ್ನೆಯಾಗಿರುತ್ತದೆ. ಹಳ್ಳಿಯ ತಂದೆಯ ಮನೆಗೆ ಬಂದ ಮಗ ಹೇಗಾದರೂ ಮಾಡಿ ತಂದೆಯನ್ನು ಒಪ್ಪಿಸಿ ಜಮೀನು ಮಾರಿ ಬಿಡಬೇಕು ಎಂದು ಲೆಕ್ಕಾಚಾರ ಹಾಕುತ್ತಾ ತಂದೆಯನ್ನು ಕೇಳಿದ. ಒಂದು ಸಾರಿ ಕೆಮ್ಮಿ "ಯಪ್ಪೋ.. .. ಈ ಬ್ಯಾರೇನಾರ ಬುಡ್ಡೆ ಅತವಾ!" ಎಂದು ಕೇಳಿಯೋ ಬಿಟ್ಟ. ಹೇಗೆ ಆರಂಭಿಸುವುದು ಎನ್ನುವ ಗೊಂದಲದಲ್ಲಿ "ಯೆಲ್ಲಾತಾವಪ್ಪಾ!... ಈಟೊತ್ತ್ಗೆ ಒಂದೆಲ್ಡು ಮಳೆ ಬಂದುದ್ರೆ ಅವರ ಕಥೀನೆ ಬ್ಯಾರೆ ಆತಿತ್ತು.

ಮಳೆ ಕಯ್ಕೊಟ್ಟು ಹೊಲ ಎಂಬೊ ಹೊಲ ಸುಟ್ಟು ಕರಕಿಟ್ಟಾಗಾಗಿ ಬುಡ್ತು. ಈ ಸಾರಿ ಬೆಳೀ ಆಟಕ್ಕಾಟ. ಇವತ್ತೋ ನಾಳ್ಯೋ ಮಳೆಪಳಿ ಬಂದ್ರೆ ಚೆಲ್ಲಿರೋ ಬೀಜ ವಾಪಾಸು ಬರೋದು ತ್ರಾಸ್ಯೆತೆ.

"ರೆಡ್ಯೋರು ಜಮೀನ್ನ ಮಾರೀದ್ರೂಂತ ಹೇಳ್ದೆಲ್ಲಪೊ" ಎಂದು ರಾಮಚಂದ್ರ ನಾಂದಿ ಹಾಡಿದ.

"ಒರೇಯ್ ಹುಚ್ಚುಮುಂಡೇ ಮಗ್ನೆ, ಯಾರ್‍ಯಾರ ಯ್ಯಾನಾರ ಮಾರ್ಕಂಡು ಊರು ಬುಟ್ಯೋಗ್ಲಿ ಬುಡು ಅವ್ರ ಗೊಡವೆ ನಮಗ್ಯಾಕ" ಎಂದ ಚೆನ್ನಜ್ಜ.

"ಅವರಂಗ ನಮ್ಮಂಥೋವ್ರು... ಮಾಡಲಿಕಾತದೇನೋ ಹುಚ್ಚಾ... ಹಪ್ಪತಾಯಂಗಿರೋ ಊರ್‍ನ ಹೆತ್ತಾಯ್ಗಿಂತ ಹೆಚ್ಚಾಗಿರೋ ಭೂಮಿನ ಬುಟ್ಟು ಹೋಗಲಕಾತದೇನೋ?"

"ಹಿಂಗೆಲ್ಲ ನಂಬ್ಕೆ ಯಿಟಕಂಡಿರೊದ್ರಿಂದ್ಲೆ ಬದುಕಿದ್ರೆ ಬಂದರಲ್ಲದಂಗೆ ಬದುಕ್ತಾ ಇರೊದು... ಈಗೇನು ಅಂಥಾದ್ದು ಆಗಿಲ್ಲೆಪ್ಪೋ ನಂ ಭೂಮಿನ್ನ ನಾವ್ ಮಾರಿ ಬುಡಾಣ... ಬಂದ್ ರೊಕ್ಕದಾಗ ಬಳ್ಳಾರೀಲಿ ಅನುವಾದ ಜಾಗ ಕೊಂಡ್ಕೊಂಡು ಮನಿ ಕಟ್ಟಿ ನೀನು ನಾವೆಲ್ಲರೂ ನಕ್ಕೊತ ಕೆಲಕ್ಕೊತ ಒಂದ್ಕಡೀಕೆ ಇದ್ದು ಬುಡಾಣ" ಎಂದು ರಾಮಚಂದ್ರ ತನ್ನ ಮನಸ್ಸಿನಲ್ಲಿದ್ದು ದೆಲ್ಲವನ್ನು ತಡ ಬಡ ಹೇಳಿಬಿಟ್ಟ.

"ಹುಚ್ಚುಸುಳ್ಯಾಮಗ್ನೇ? ನಿಂಗೇಟು ಸಾರಿಯ್ಯೋಳೀನಿ... ಜಮೀನ ಮಾರೋ ವಿಷ್ಯನ ನನ್ನೆದುರೂಗೆ ಎತ್ತಬ್ಯಾಡಾಂತ!" ಎಂದು ಸಿಡುಕಿದ ಚೆನ್ನಜ್ಜ.

"ಏನದಲ್ಲ ನಂಗೊತ್ತಿಲ್ಲ... ನಾನು ಭೂಮೀನ ಮಾರ್ಬೇಕಂದ್ರೆ ಮಾರ್ಬೇಕು ಅಷ್ಟೇ ನೀನು ನಂ ಸಂಗಾಟ ಬರ್ಬೇಕು ಅಷ್ಟೆ!"

ಮಗನ ಮಾತಿನಲ್ಲಿ ತಿರಸ್ಕಾರ ಕಂಡಿತು ಚೆನ್ನಜ್ಜಗೆ. "ನಾನು ಬರೋದು ಇಲ್ಲ... ಜಮೀನ್ನ ಮಾರೋದು ಇಲ್ಲ ಅದೇನು ಮಾಡ್ತೀಯೋ ಮಾಡ್ಕೊ ನೋಡೇ ಬಿಡ್ತೀನಿ.

"ನೀನು ಅದೆಂಗೆ ಭೂಮಿನ ಮಾರಾಕಿಲ್ಲೊ ನಾನು ನೋಡ್ತಿನಿ... ನಿಂಗ ಬೇಕಾಗಿಲ್ಲಂದ್ರೆ ನನ್ನ ಇಸ್ಸೇಕ ಬರೋದ್ನ ನಂಗೆ ಕೊಟ್ ಬುಡು ಅಷ್ಟೆ" ಎಂದು ರಾಮಚಂದ್ರ ಮುಖ ಮುಲಾಜಿಲ್ಲದೆ ಮಾತಾಡಿದ. ಮಗ ಭಾಗದ ಮಾತಾಡಿದ ನಂತರ ಚೆನ್ನಜ್ಜನಿಗೆ ತಡೆದಂಗ ದುಃಖ ಬಂತು. ನನ್ನದು ನಿನ್ನದು ಅನ್ನೋದು ಏನೀದೆ, ಎಲ್ಲಾ ನೀನೆ ತೆಗೆದುಕೊಂಡು ಬಿಡು ಎಂದು ಹೇಳುತ್ತಾ ಸಿಟ್ಟಿನಿಂದ ಎದ್ದು ಹೋದ. ರಾತ್ರಿ ಎಷ್ಟ ಹೊತ್ತಾದ್ರು ಮನೀಗೆ ತಂದೆ ಬರಲಿಲ್ಲ. ರಾಮಚಂದ್ರನಿಗೆ ತುಂಬಾ ಆಂತಕವಾಯಿತು. ನಿದ್ರೆ ಇಲ್ಲದೆ ರಾತ್ರಿ ಕಳೆದ.

"ಓಯ್ ಯಣ್ಣೋ; ರಾಮಚೆಂದ್ರೊ!" ಎಂದು ಕೂಗುತ್ತ ರಂಗಯ್ಯ ತನ್ನತ್ತ ಓಡಿ ಬಂದ. "ನಿಮ್ಮಪ್ಪ ಸತ್ತು ಹೋಗ್ಯಾನೋಯಣ್ಣಾ; ಅದೇ ನಿಂಹೊಲ್ದಾಗ" ಎಂದು ತೋರಿಸಿದ. ಮೈ ಮೇಲೆ ಪ್ರಜ್ಞೆ ಇಲ್ಲದಂತೆ ಅತ್ತಕಡೆ ಓಡಿ ತಲುಪಿದ ರಾಮಚಂದ್ರ ಬಾಡಿ ಮುರುಟಿದ್ದ ಬುಡ್ಡೆ ಹೊಲದಲ್ಲಿ ತಾಯಿ ಎದೆ ಮೇಲೆ ನಿದ್ದೆ ಹೋಗಿರುವ ಕೂಸಿನಂತೆ ಚನ್ನಜ್ಜನ ಕಳೇಬರ ಬಿದ್ದಿರುವುದು ರಾಮಚಂದ್ರ ಪ್ರಜ್ಞೆಯನ್ನು ಕಳೆದುಕೊಂಡು ತಂದೆಯ ಶವದ ಮೇಲೆ ಉರುಳಿದ.[೬] (ಪು. ೨೬೬-೬೭-೭೦ ಒ.ಪೀ.ತೆ.ಕಥೆಗಳು)

ಇಂಥ ಅದೆಷ್ಟೋ ಭೂಮಿಗೆ ಸಂಬಂಧಿಸಿದ ಕತೆಗಳು ಮನಸ್ಸನ್ನು ಕಲುಕುತ್ತವೆ. ಭಾರತೀಯ ಸಂಸ್ಕೃತಿಯಲ್ಲಿ ರೈತರು ಭೂಮಿಯನ್ನು ಹಡೆದ ತಾಯಿಯಂತೆ ಗೌರವಿಸಿದರು. ಆದರೆ ಇಂದು ಸ್ವಾತಂತ್ರ್ಯೋತ್ತರ ಭಾರತದಲ್ಲಿ ಅದೆಷ್ಟೋ ಕುಟುಂಬಗಳು ಹಳ್ಳಿಯ ಬದಕನ್ನು ತಿರಸ್ಕರಿಸಿ ಪಟ್ಟಣಕ್ಕೆ ವಲಸೆ ಬಂದು ಆಧುನಿಕತೆಗೆ ಮಾರು ಹೋಗಿ ಆರಕ್ಕೇರದ ಮೂರಕ್ಕಿಳಿಯದ ಜೀವನ ನಡೆಸುತ್ತಾ ಬಿಸಿಲ್ಗುದುರೆ ಬೆನ್ನಹೇರಿ ಜೀವನವನ್ನು ಸಂಕಟಮಯವಾಗಿ ಮಾಡಿಕೊಂಡಂತ ಉದಾಹರಣೆಗಳು ಸಾಕಷ್ಟಿವೆ. ಕುಂ.ವೀ. ಅವರು ಇಂಥ ಅದೆಷ್ಟೋ ಕಥೆಗಳನ್ನು ಬದುಕಿನ ನೈಜ ಚಿತ್ರಣದೊಂದಿಗೆ ಮೂಲಕಥೆಯ ಭಾವಕ್ಕೆ, ಆಶಯಕ್ಕೆ ಧಕ್ಕೆಯಾಗದಂತೆ ಸಮರ್ಥ ಪ್ರಾದೇಶಿಕ ಭಾಷೆಯೊಂದಿಗೆ ಅತ್ಯಂತ ಆತ್ಮೀಯವಾಗಿ ಭಾಷಾಂತರಿಸಿದ್ದಾರೆ. ಕಥೆ ಓದುಗರ ಮನಸ್ಸನ್ನು ಕಲಕುತ್ತದೆ. ಆಂಧ್ರದ ಅನೇಕ ಚಳುವಳಿಗಳು ಹುಟ್ಟಿಕೊಂಡಿದ್ದು ರೈತರ ಇಂಥ ಸಮಸ್ಯೆಗಳಿಂದ. ಭೂಮಿಯನ್ನು ಪಡೆಯಲು ರೈತರು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಲಕ್ಕಂಪುರ, ಖೇರಿ ಮುಂತಾದ ಕಡೆ ದೊಡ್ಡ ದೊಡ್ಡ ರೈತರ ಚಳುವಳಿಗಳು ನಡೆದು ಸಾಹಿತ್ಯ ಮತ್ತು ಬದುಕು ಬೇರೆ ಬೇರೆಯಲ್ಲ ಒಂದರೊಳಗೊಂದು ಸೇರಿ ಜತೆ ಜತೆಗೆ ನಡೆದು ಬಂದಿರುವುದು ಆಧುನಿಕ ತೆಲುಗು ಸಾಹಿತ್ಯದ ವೈಶಿಷ್ಟ್ಯವಾಗಿದೆ.

**೫.೩. ಶೋಷಣೆ ಮತ್ತು ಪ್ರತಿಭಟನೆಗೆ ಸಂಬಂಧಿಸಿದ ಕಥೆಗಳು**

ರಾಜಕೀಯ ರಂಗದ ಏರುಪೇರುಗಳಾಗಲಿ ಪರಕೀಯ ಆಕ್ರಮಣಗಳಾಗಲೀ, ತುರ್ತು ಪರಿಸ್ಥಿತಿಯಾಗಲೀ, ರಾಜಕೀಯ ಪಕ್ಷ-ವಾದಗಳಾಗಲೀ, ವಿದೇಶಿ ನೀತಿಗಳಾಗಲೀ, ಹಣ, ಅಧಿಕಾರಗಳ ಕರಾಳ ಜಾಲದ ಕಲ್ಪನೆಯಾಗಲೀ, ತಮ್ಮನ್ನು ಹಿಂಡುವ ಶೋಷಣೆಯ ವಿಧಾನಗಳ ಅರಿವಾಗಲೀ ಇವಾವು ತಮಗೆ ಸಂಬಂಧಿಸಿಲ್ಲವೆಂಬಂತೆ ಬದುಕಿನ ಯಾತನಾಮಯವಾದ ಹೋರಾಟದಲ್ಲಿ ಹೆಣವಾಗಿರುವ ಜನರು ಈ ದೇಶದಲ್ಲಿ ಕೋಟಿ ಕೋಟಿ ಸಂಖ್ಯೆಯಲ್ಲಿದ್ದಾರೆ.

ಜೀವನಾವಶ್ಯಕ ವಸ್ತುಗಳ ಅಭಾವ, ಕೈಗೆ ಹತ್ತದಂತೆ ಏರುವ ಬೆಲೆಗಳು, ಕುಡಿವ ನೀರು, ದನಗಳ ಮೇವು, ಅತಿವೃಷ್ಟಿ, ಅನಾವಷ್ಟಿಗಳೋ... ಚಂಡಮಾರುತವೋ ಮುಂತಾದ ಪ್ರಕೃತಿ

ವಿಕೋಪಗಳು ಕೂಲಿ ಸಿಗದ ಸಮಸ್ಯೆ, ಇಂಥ ಹಪಾಹಪಿ ಬದುಕಿನಲ್ಲಿಯೂ ಮದುವೆ, ಹಬ್ಬ, ಜಾತ್ರೆ, ಸ್ವಾಮಿ, ಅಮ್ಮಗಳ ಸೇವೆಗಳು ಓಗೆ ನೂರಾರು ಕಿತ್ತು ತಿನ್ನುವ ಸಮಸ್ಯೆಗಳ ಬಲೆಯಲ್ಲಿ ಈ ದೇಶದ ಜನ ಸಿಕ್ಕಿಕೊಂಡು ನರಳುತ್ತಿದ್ದಾರೆ. ನಗರಗಳ ದಾರಿದ್ರ್ಯಗ್ರಸ್ತ ಕೊಂಪೆಗಳು, ಕುಡಿಯುವ ನೀರಿಲ್ಲದ, ದೀಪವಿಲ್ಲದ ಹಳ್ಳಿಗಳು ಅನ್ನಾಂಶವಿಲ್ಲದೆ ಸೊರಗುತ್ತಿರುವ ಮಕ್ಕಳು, ಕೋಟಿ ಕೋಟಿ ನಿರುದ್ಯೋಗಿಗಳು, ಪಂಚತಾರಾ ಹೋಟೆಲ್‌ಗಳು, ದುಡಿಯುವ ವರ್ಗದ ದುರ್ಬಲ ಹೋರಾಟಗಳು, ವಿದೇಶಿ ಕಾರುಗಳು, ಆಮದು ಮಾಡಿಕೊಳ್ಳುವ ಭೋಗವಿಲಾಸದ ವೈಭವದ ಸಾಮಗ್ರಿಗಳು, ವಿಫಲಯೋಜನೆಗಳು ಇವೆಲ್ಲಾ ಭಾರತದ ವಿಷಾದಕರ ಸತ್ಯಗಳು. ಈ ಎಲ್ಲಾ ವೈಷಮ್ಯಗಳು ನಾಡಿನ ಸಂಪತ್ತನ್ನು ಸೃಷ್ಟಿಸುವ ಸಾಮಾನ್ಯ ಬದುಕಿನೊಂದಿಗೆ ಹೆಣೆದುಕೊಂಡಿವೆ.

ಹಳ್ಳಿಗಳು ಹಾಳು ಸುರಿಯುವಂತಾಗಿದ್ದು ಜನ ಪಟ್ಟಣ ಸೇರುತ್ತಾರೆ. ಅಲ್ಲಿ ಅವರು ಕೊಳಚೆ ಪ್ರದೇಶಗಳನ್ನು ಸೃಷ್ಟಿಸುತ್ತಾರೆ. ಕೂಲಿನಾಲಿ, ಪಿಕ್‌ಪಾಕೆಟ್, ಮೈಮಾರಿಕೊಳ್ಳುವುದು, ಭಿಕ್ಷೆ ಮುಂತಾದವು ಅಲ್ಲಿ ಅವರ ಹೊಟ್ಟೆಪಾಡಿನ ಮಾರ್ಗಗಳಾಗಿವೆ. ಇಡೀ ಆರ್ಥಿಕ ವ್ಯವಸ್ಥೆಯನ್ನು ತಮ್ಮ ಕೈಯಲ್ಲಿಟ್ಟುಕೊಂಡು, ರಾಜಕಾರಣ ಕಾನೂನುಗಳನ್ನು ತಮ್ಮ ಕಿಸೆಯಲ್ಲಿಟ್ಟು ಕೊಂಡು ಭಂಡತನದಿಂದ ಹಣ ಬಾಚಿಕೊಳ್ಳುತ್ತಾ ಐಷಾರಾಮಿಯಾಗಿ ಮೆರೆಯುತ್ತಿರುವ ಬಂಡವಾಳ-ಬೂರ್ಜ್ವಾಶಾಹಿ ವರ್ಗವು ನಿರ್ಗತಿಕ ಜನಕೋಟಿಯ ಜೊತೆಗೆ ಎಂಥಾ ಅಭಾಸವನ್ನು ಉಂಟುಮಾಡುವ ಜೀವನಶೈಲಿಯು ಆಶ್ಚರ್ಯವನ್ನು ಉಂಟು ಮಾಡುತ್ತಿದೆ.

ಮುನಿಪಲ್ಲೆ ರಾಜು ಅವರ 'ಬಿಕ್ಷುಕರ ಝುಂಡಾ' ಎನ್ನುವ ಕಥೆಯಲ್ಲಿ ತಮಿಳುನಾಡು ಆಂಧ್ರ ದಿಂದ ಬರಗಾಲದಿಂದ ತತ್ತರಿಸಿದ ಜನ ಪುಣೆಗೆ ಬಂದು ಯಾವುದೇ ಕೆಲಸ ಸಿಗದೆ ಅಲ್ಲಿ ಭಿಕ್ಷಾಟನೆಗೆ ತೊಡಗುತ್ತಾರೆ. ಅಂಥವರ ಮೇಲೆ ಶೇಠ್ ಶಂಕರಲಾಲ್, ಭೋಗಾಲಾಲ್‌ನು ಹಿಂಸೆ ಮಾಡುತ್ತಾ ಅವರು ಭಿಕ್ಷಾಟನೆ ಮಾಡಿದ ಕಾಳು ಕಡ್ಡಿಗಳನ್ನು ಅಪಹರಿಸುತ್ತಾನೆ. ಅವನ ವಿರುದ್ಧ ಭಿಕ್ಷುಕರು ತಿರುಗಿ ಬೀಳುವ ಕಥೆ ಬಹಳ ವಾಸ್ತವದಿಂದ ಕೂಡಿದೆ.

ಬೇಸಿಗೆಯ ದಿನಗಳಲ್ಲಿ ದಾಕ್ಷಿಣಾತ್ಯದಿಂದ ಬರಗಾಲದ ಸುದ್ದಿಗಳು ಬಂದವು. ನೋಡು ನೋಡುತ್ತಿದ್ದಂತೆ ತಮಿಳುನಾಡು ಕಡೇಯಿಂದ ಭಿಕ್ಷಕರು ತಂಡೋಪತಂಡವಾಗಿ ಬಂದು ಪುಣೆಯ ಕಂಟೋನ್ಮೆಂಟ್ ಪ್ರದೇಶದಲ್ಲಿದ್ದ ಪಾಶ್ಚಾತ್ಯ ನಾಗರಿಕರ ಹೋಟೆಲ್‌ಗಳ ಮುಂದೆ ಡಜನ್‌ಗಟ್ಟಲೆ ನಿಂತು ಬಂದು ಹೋಗುವ ಶ್ರೀಮಂತ ಗಿರಾಕಿಗಳನ್ನು ಕಾಡಿಸಲಾರಂಭಿಸಿದರು. ಆ ಭಿಕ್ಷುಕರಲ್ಲಿ ಸ್ತ್ರೀ, ಪುರುಷ, ಅಬಾಲವೃದ್ಧರಾಗಿ ಎಲ್ಲರೂ ಇದ್ದರು. ಸಂಖ್ಯೆಯಲ್ಲಿ ತಮಿಳು ಬಿಕ್ಷುಕರು ಹೆಚ್ಚಿಗೆ ಇದ್ದರು. ರಾಯಲಸೀಮೆಯಿಂದ, ಹೈದರಾಬಾದ್ ಕಡೆಯಿಂದ ಬಂದ

ತೆಲುಗು ಭಾಷೆಯನ್ನು ತಮ್ಮದೇ ಆದ ಶೈಲಿಯಲ್ಲಿ ಮಾತಾಡುವ ಆಂಧ್ರೀಯ ಭಿಕ್ಷುಕರು ಹೇರಳವಾಗಿ ಇಲ್ಲದಿರಲಿಲ್ಲ ಇವರೆಲ್ಲರಿಗೂ ರಾಷ್ಟ್ರಭಾಷೆ ದಕ್ಷಿಣಾದಿಯಲ್ಲಿ ಮಾತಾಡುವ ಬಜಾರು ಉರ್ದು.

ಪುಣೆ ನಗರದಲ್ಲಿ ಸಂಘ ಸಂಸ್ಥೆಗಳು ಹೇರಳ ಸಂಖ್ಯೆಯಲ್ಲಿ ಇದ್ದರೂ ಬಹುಮಟ್ಟಿಗೆ ಅವೆಲ್ಲಾ ಸಮಾಜ ಸುಧಾರಣೆ, ಸ್ತ್ರೀ ಸಮಸ್ಯೆಗಳಿಗೆ ಸಂಬಂಧಿಸಿದಂತವುಗಳಾಗಿದ್ದವು. ಆದರೂ ಅವುಗಳ ಪೈಕಿ ಒಂದೇ ಒಂದು ಭಿಕ್ಷುಕರ ಸಮಸ್ಯೆಗೆ ಸಂಬಂಧಪಟ್ಟಂಥ ಸಂಘವಿರಲಿಲ್ಲ. ದೌರ್ಭಾಗ್ಯದ ಭಿಕ್ಷುಕರ ಹಿತಾಸಕ್ತಿಗಳನ್ನು ಕಾಪಾಡುವಂಥ ಯಾವ ಸಂಘಟನೆಯೂ ನಮ್ಮ ದೇಶದಲ್ಲಿ ಇಲ್ಲವೇ ಇಲ್ಲ. ಇಂಥವರಿಗೆ ಅಕ್ಷಯಪಾತ್ರೆಯಂಥ ನಮ್ಮ ದೇಶ ಇವರಿಗೆ ಏನು ತಾನೆ ನೆರವು ನೀಡಬಲ್ಲದು.

"ಇತ್ತೀಚೆಗಂತೂ ಗುಲಾಬ್‌ಸಿಂಗನ ಲಾಠಿಗೆ ಪುರೂಸೊತ್ತೆ ಸಿಗುತ್ತಿಲ್ಲ... ಭೋಗಲಾಲನ ಜೊತೆ ಸೇರಿ ಭಿಕ್ಷುಕರ ದವಸ ಧಾನ್ಯಗಳಿಗೆ ಬೆಲೆ ನಿಗದಿಪಡಿಸುವುದು ಮತ್ತು ಭಿಕ್ಷುಕರನ್ನು ಅವರ ಝೋಪಡಿಗಳಿಂದ ವಕ್ಕೆಲೆಬ್ಬಿಸುವುದು. ಇಂಥ ಸಂದರ್ಭದಲ್ಲಿ ಒಂದು ದಿನ ಅವನು ಭಿಕ್ಷುಕ ಎಲ್ಲಮ್ಮನ ತಲೆಗೆ ಲಾಠಿಯಿಂದ ಜೋರಾಗಿ ಹೊಡೆಯುತ್ತಾನೆ. ಇದರಿಂದ ಅಲ್ಲಿದ್ದ ಭಿಕ್ಷುಕರೆಲ್ಲಾ ಹೆದರಿ ಓಡಿ ಹೋಗುತ್ತಾರೆ. ಆದರೆ ಎಲ್ಲಮ್ಮನು ತನ್ನ ಸಹ ಭಿಕ್ಷುಕ ಮುರುಗೇಶನನ್ನು ನೋಡುತ್ತಾಳೆ. ಆ ನೋಟದಲ್ಲಿ ಭಯಕ್ಕಿಂತ ಭಯಾನಕ ಸಂದೇಶವಿತ್ತು. ಮುರುಗೇಶನಲ್ಲಿ ಆ ನೋಟ ಧೈರ್ಯ ತುಂಬಿತು. ಚಿರಂತನ ಹಸಿವೆಯಿಂದ, ರಕ್ತಹೀನತೆಯಿಂದ ನರಳುತ್ತಿದ್ದ ಅವನ ಕಣ್ಣುಗಳು ಕೆಂಡ ಕಾರಲಾರಂಭಿಸಿದವು. ಒಮ್ಮೆಗೆ ಜಿಗಿದು ಗುಲಾಬ್‌ಸಿಂಗನ ಲಾಠಿಯನ್ನು ಕಿತ್ತುಕೊಂಡನು. ಯಲ್ಲಮ್ಮನು ಗುಲಾಬ್‌ಸಿಂಗನ ತಲೆ ಕೂದಲನ್ನು ಹಿಡಿದು ಬಗ್ಗಿಸಿದಳು. ಮುರುಗೇಶನು ಲಾಠಿಯಿಂದ ಗುಲಾಬ್‌ಸಿಂಗನನ್ನು ಹೊಡೆಯಲಾರಂಭಿಸಿದನು. ಇದರಿಂದ ಪ್ರಚೋದಿತರಾದ ಭಿಕ್ಷುಕರೆಲ್ಲಾ ಅವನನ್ನು ಹೊಡೆದು ಕೆಳಗುರುಳಿಸಿದರು. ಗುಲಾಬ್‌ಸಿಂಗನ ನೆತ್ತರಿನಿಂದ ಕೆಂಪಾದ ಟವಲ್ಲೊಂದು ಅಲ್ಲಿ ಬಿದ್ದಿತು. ಮುರುಗೇಶನು ಅದನ್ನು ಎತ್ತಿಕೊಂಡು ಕೆಂಪಾದ ಟವಲ್ಲನ್ನು ಲಾಠಿಗೆ ಕಟ್ಟಿದ್ದನು ಬೋಗಲಾಲನ ನಿವಾಸಕ್ಕೆ ನುಗ್ಗಿ ಅಲ್ಲಿದ್ದ ದವಸವನ್ನು ಹೊತ್ತು ತಂದು ಭಿಕ್ಷುಕರಿಗೆ ಕೊಟ್ಟನು.

ಹೀಗೆ ಹಿಂಸೆಯಿಂದ ನರಳಿದ ಜನ ತಿರುಗಿನಿಂತಾಗ ಹೇಗೆ ಶೋಷಕರು ಪಲಾಯನ ಗೈಯುತ್ತಾರೆ? ಪ್ರತಿಭಟನೆಯ ಮೂಲಕ ಮನುಷ್ಯನಿಗೆ ಅವಶ್ಯ ಬೇಕಾದ ಅನ್ನ ಅಹಾರಗಳನ್ನು ದೊರಕಿಸಿಕೊಳ್ಳುವುದು ಮನುಷ್ಯನ ದುರಂತವೇ ಆಗಿದೆ.[೬] (ಚಿನ್ನದ ತೆನೆ, ಪು. ೬೬–೬೭)

ಆದರೆ ಹಿಂಸೆ ಮತ್ತು ಸೇಡು ಮಾತ್ರವೇ ಪರಿಹಾರವಲ್ಲ ಎಂದು ಸೂಚಿಸುವ ಕಥೆಗಳೂ ಇವೆ. ದೋಚುವುದು ರಂಗಯ್ಯ ಮಾತ್ರವಲ್ಲ. ಆತನ ಅತ್ಯಾಸೆಯನ್ನು ಅನಿವಾರ್ಯವಾಗಿ ಒಳ ಹಾಕಿಕೊಂಡಿರುವ ಅಮಾನುಷತ್ವವನ್ನು ಎ.ರಾಜರಾಮ ಅವರ 'ಪ್ರವಾಹ' ಕಥೆಯು ಸೂಚಿಸುತ್ತದೆ. ನಗರ ಜೀವನದ ಗಜಿಬಿಜಿಯಿಂದ, ಅಣ್ಣನ ಫ್ಯಾಕ್ಟರಿಯಿಂದ, ಮಾನಸಿಕ ನೆಮ್ಮದಿಯನ್ನು ಗೆದ್ದಿಲುಗಳಂತೆ ಹಾಳು ಮಾಡುವ ಹಣದ ಮೋಜಿನಿಂದ ಒಂದೆರಡು ದಿನಗಳ ಮಟ್ಟಿಗಾದರೂ ದೂರವಿರಬೇಕೆಂಬ ತಾನು ಕಲ್ಯಾಣಿಯೊಂದಿಗೇ ಹಳ್ಳಿಗೆ ಬಂದಿದ್ದ. ಬಂದ ಕೆಲ ಘಳಿಗೆ ತುಂಬಾ ಆನಂದ ಅನುಭವಿಸಿದ್ದ. ಕಲ್ಯಾಣಿ ಹೇಳಿದಳು. "ಯಾಕಿಂಗೆ ಒಂದೇ ಸಮನೆ ಮಳೆ ಸುರಿಯುತ್ತಿದೆ... ಊರಿಗೆ ಹೊರಟು ಹೋಗೋಣ ಎಂದು ಕಿವಿ ಬಳಿ ಮೆಲ್ಲನೆ ಹೇಳಿದಳು. ಆದರೆ ಕಾಲು ಹೊರಗಿಟ್ಟರೆ ನೀರೇ ನೀರು. ಇನ್ನೂ ಬೆಳಕು ಹರಿದಿರಲಿಲ್ಲ. ನಸುಕಿನ ಮಬ್ಬಿನಲ್ಲಿ ನಾಯ್ಡು ಬಂದು ಹೇಳಿದ. 'ಮತ್ತೆ ರಾತ್ರಿ ಇಡೀ' ಅಂತ ತಾನು 'ಸಣ್ಣೋರು ದೊಡ್ಡೋರು ಎಲ್ಲಾರು ಗ್ವಾಡಿ ಮೇಲೆ ಮಾಳಿಗೆ ಮ್ಯಾಲ ಕುಂತ್ಕಂಡು ಕಾಲ ಕಳದ್ದಿ ಬಾಬು.' ಅಸಲೇ ಇದು ತಗ್ಗಿನಲ್ಲಿರುವ ಊರು ನಿನ್ನೆ ಹಾಕಿದ ತೂಬು ಕೊಚ್ಕೊಂಡು ಹೋಗಿರುವಂತಿದೆ ಈಗೀ ಊರಲ್ಲಿ ಎತ್ತರದಲ್ಲಿ ಉಳಿದುಕೊಂಡಿರುವ ಗಟ್ಟಿ ಮುಟ್ಟಾದ ಮನೆಗಳೆಂದರೆ ಎರಡೇ ಎರಡು. ಈ ಮನೆ ಮತ್ತು... ಇನ್ನೊಂದು ರಂಗಯ್ಯನ ಮನೆ ಎನ್ನೈತೆ... ನಿನ್ನೆ ಮುಂಜಾನೆ ಕೂಡ ಯಾವ ಗುಡುಸಲಾಗಿಂದ್ಲೂ ಹೊಗಿ ಏಳ್ಲಿಲ್ಲ... ಮೊನ್ನೆ ತಿಂದಿರುವ ಕೂಳು .. ಯಾರೊಬ್ರತ್ರಾನು ಒಂಧ್ಹಿಡಿ ಕಾಳುಕಡಿ ಇಲ್ಲ ರೊಕ್ಕಾನು ಅಷ್ಟಕಷ್ಟೇಯಾ... ಒಂದು ವರ್ಷ ಮಳೆ ಹೊಡೆದರೂ ನಿಮ್ಮ ಮನೆ ತಡೆದುಕೊಳ್ಳುತ್ತದೆ. ಅದೇ ರಂಗಯ್ಯನ ಮನಿಯಾಗ ಯಾವಾಗಲೂ ಕಾಳು ಕಡಿ ಇರತದ. ಎದುರು ನೋಡುತ್ತಿರುವ ಹಸಿವು ಸುಮ್ಮನಿರಾಕ ಬಿಡಾಕಿಲ್ಲ. ಆ ರಂಗಯ್ಯ ರೊಕ್ಕ ಕೊಡದೆ ಕಾಳು ಕಡ್ಡಿ ಕೊಡಾಕಿಲ್ಲ. ನಿಮ್ಮ ಮನೆಯಲ್ಲಿ ಸ್ವಲ್ಪ ಜಾಗಕೊಟ್ರೆ ಬಡವರು ಬದುಕಿ ಕೊಳ್ಳುತ್ತಾರೆ. ಸಣ್ಣವರು ದೊಡ್ಡವರು ಹೆಣ್ಣು ಗಂಡು ಎಲ್ಲ ಮುಖಗಳನ್ನು ಮೆತ್ತಿರುವ ಹಸಿವು. ಸಹಜವಾಗಿ ಮನುಷ್ಯರಿಗೆ ಬಲ ನೀಡುವ ಮನುಷ್ಯನನ್ನು ಎತ್ತಿ ನಿಲ್ಲಿಸುವ ಹಸಿವೇ ಅದೇ ಹಸಿವೇ ಈಗ ಎಲ್ಲರನ್ನೂ ತಿಂದು ತೇಗಾತ್ತಿರುವುದು.

ನಿನ್ನೆ ದಿವಸದ ಅಳಿದುಳಿದ ಅಕ್ಕಿಯಿಂದ ಅನ್ನ ಮಾಡಿದ್ದ ಕಲ್ಯಾಣಿ ತನ್ನನ್ನು ಹೇಗೆ ಕರೆಯ ಬೇಕೆಂದು ಗೊಂದಲಕ್ಕೀಡಾಗಿದ್ದಳು. ಅಡುಗೆಮನೇಲಿರದಿದ್ದರೂ ಅಟವಾಳಿಗೆ ಪಡಸಾಲೆ ತುಂಬ ಸಂತ್ರಸ್ತರಿದ್ದರು. ಮಕ್ಕಳು ತಾಯಂದಿರನ್ನು ಕಾಡಿಸುತ್ತಿದ್ದವು. 'ಅಮ್ಮ ಇಲ್ಲಿ ನೀರಿನ ಕಾಟ ಇಲ್ವಲಾ ಅಡುಗೆ ಮಾಡ್ತೀಯಾ ಎನ್ನುವ ಮಗಳಿಗೆ ಸೆರಗಿನಲ್ಲಿ ಕಟ್ಟಿಕೊಂಡಿರುವ ತೊಯ್ದ ಅಕ್ಕಿ ಕೊಡುವ ತಾಯಿ, ಇನ್ನೊಬ್ಬ ತಾಯಿ ಹಸಿ ಕಡಲೆ ಕೊಡುತ್ತಿರುವಳು. ಆಗ ರಾಯಡು ಹೇಳುತ್ತಾನೆ "ಹುಡುಗರು ದಿಕ್ಕು ತೋಚದಂಗ್ಯಾಗರ ಬಾಬು ರಂಗಯ್ಯನ ಮನಿಮ್ಯಾಕ

ಹೋಗಬೇಕಂತಿದ್ದಾರೆ... ನೀವೊಂದು ಬಾರಿ ರಂಗಯ್ಯನ ಮನೀಗೆ ಹೋಗಿ ಬರ್ರಿ ಎಂದ. ನಾನು ಹೋದೆ... ಆದರೆ ರಂಗಯ್ಯ ಹೇಳಿದ. ನಿಮಗೆ ಬೇಕಾದರೆ ಒಂದು ಒಂಬತ್ತು ಸೇರು ಅಕ್ಕಿ ತಗಂಡು ಹೋಗ್ರಿ ಊರಿನ ಉಸಾಬರಿಗೆ ಬರಬ್ಯಾಡ್ರಿ ಎಂದು ವಿಕಾರವಾಗಿ ರಂಗಯ್ಯ ಹೇಳಿದ. 'ಮುಂದೇನು ಮಾಡಬೇಕಂತಿರೀ? ಏನು ಮಾಡುವುದು ತನ್ನಷ್ಟಕ್ಕೆ ತಾನೊಂದು ನಿರ್ಧಾರಕ್ಕೆ ಬಂದು 'ಲೂಟಿ ಮಾಡಬೇಕೆಂದಿರುವುದು ರಂಗಯ್ಯನ್ನಲ್ಲ ಅವನ ದುರಾಸೆಯನ್ನು, ಅವಕಾಶವನ್ನು ದುರುಪಯೋಗ ಪಡಿಸಿಕೊಳ್ಳಬೇಕೆಂಬ ಅವನ ದುರಾಸೆಯನ್ನು.' ಕೋಲು ಬಡಿಗೆ ಹಿಡಿದವರ ಸಂಗಡ ನಾನು ಹೆಜ್ಜೆ ಹಾಕಿದೆ.

ರಂಗಯ್ಯನಿಗೆ ಯಾರೋ ಸುದ್ದಿ ಮುಟ್ಟಿಸಿದರು. ತನ್ನ ರಕ್ಷಣೆಗೆ ಜನರನ್ನು ನೇಮಿಸಿಕೊಂಡ ನಾಯುಡು ಹೇಳಿದ. ಈ ಹಸಿದವರ ಪ್ರವಾಹದ ಮುಂದೆ ಮೂವತ್ತು ಮಂದಿ ಯಾವ ಲೆಕ್ಕ. ಅವರು ಯೋಚಿಸಿದರು. ಈ ಪ್ರವಾಹದ ಸಮಯದಲ್ಲಿ ಊರ ಮಂದೀನ ಎದುರು ಹಾಕಿಕೊಂಡರೆ ನಮ್ಮನ್ನು ಸುಮ್ಮನೆ ಬಿಟ್ಯಾರೆ. ಈ ರಂಗಯ್ಯ ಕೊಡುವ ಐವತ್ತು ರೂಪಾಯಿಗಿಂತ ಊರಿನ ಜನ ಮುಖ್ಯ. ಅವನು ಜನಗಳಿಗೆ ಅಡ್ಡ ಇಟ್ಟ ಕೋಲನ್ನು ತೆಗೆದನು. ಜನ ಎಲ್ಲಾ ಸೇರಿ ಎರಡು ಮೂಟೆ ಅಕ್ಕಿ ತಗೊಂಡು ಹೋದರು. ಕಲ್ಯಾಣಿ ಅವರಿಗೆಲ್ಲಾ ಅನ್ನ ಬಡಿಸುತ್ತಾ ಎರಡು ಹನಿ ಕಣ್ಣೀರು ಹಾಕಿದಳು.[೮] (ಚಿನ್ನದ ತೆನೆ, ಪು. ೧೬-೧೭-೨೨)

ಭಾರತೀಯ ಸಮಾಜದ ವಾಸ್ತವ ಪರಿಸ್ಥಿತಿಯಲ್ಲಿ ಕ್ರಾಂತಿಯು ಇನ್ನೂ ದೂರದ ಆದರ್ಶವಾಗಿದೆ. ಇಂದಿನ ಸಂದರ್ಭದಲ್ಲಿ ನಿರಾಶೆ ಮತ್ತು ವಿಷಾದ ಭಾವನೆಗಳನ್ನೇ ಪರಿಸ್ಥಿತಿಯು ಉಂಟುಮಾಡುವಂತಿದೆ. ಆದರೆ ಇದರಿಂದಲೇ ಕ್ರಾಂತಿ ಮೂಡಬೇಕಾಗಿರುವುದು ಅನಿವಾರ್ಯ. ವಿದ್ಯಾವಂತರಾಗಲೀ, ಮಧ್ಯಮವರ್ಗ ದವರಾಗಲೀ ಅಥವಾ ನಗರದವರಾಗಲೀ ಈ ಬಗ್ಗೆ ತಲೆ ಕೆಡಿಸಿಕೊಂಡರೆ ಸಾಲದು. ಜಾಗೃತಿಯು ಅತಿ ಹೆಚ್ಚಿನ ಶೋಷಣೆಗೊಳಗಾಗಿರುವ ಅತಿ ಕೆಳಗಿನ ಜನಸಮೂಹದಿಂದ ಹುಟ್ಟಬೇಕು. ತೆಲುಗು ಸಾಹಿತಿಗಳು ವಾಸ್ತವತೆಯ ಸರಿಯಾದ ತಿಳಿವಳಿಕೆ ಇಟ್ಟುಕೊಂಡು ಜನರಲ್ಲಿ ತಮ್ಮ ಸ್ಥಿತಿಯ ಕಾರಣಗಳನ್ನು ಅರಿಯುವಂತೆ ಮಾಡಲು ಸಮಾಜ ಶೋಷಕ ದುಷ್ಟಶಕ್ತಿಗಳ ವಿರುದ್ಧ ಬಂಡಾಯ ವೇಳುವಂತೆ ಮಾಡಲು ಸಾಕಷ್ಟು ಪ್ರಯತ್ನ ಮಾಡಿದ್ದಾರೆ. ಜನರ ಜಾಡ್ಯ ಅಜ್ಞಾನಗಳನ್ನು ಕಂಡು ಕಳವಳ ವ್ಯಕ್ತಪಡಿಸಿದ್ದಾರೆ. ಕೆಲವೊಮ್ಮೆ ಕಂಡುಬರುವ ಜಾಗೃತಿಯನ್ನು ಕಂಡು ಹಿಗ್ಗು ತೋರಿದ್ದಾರೆ. ಜನರ ಕ್ರಾಂತಿಯ ಹೋರಾಟಗಳಲ್ಲಿ ತಾವು ಭಾಗವಹಿಸಿ ಅವರಿಗೆ ಮಾರ್ಗದರ್ಶನ ಮಾಡಿದ್ದಾರೆ. ಅದರಲ್ಲೂ ಆಂಧ್ರಪ್ರದೇಶದಲ್ಲಿ ನಡೆದ ತೆಲಂಗಾಣ ಮತ್ತು ಶ್ರೀಕಾಕುಳಂ ರೈತ ಜನ ಹೋರಾಟಗಳಲ್ಲಿ ತೀವ್ರವಾಗಿ ಹೋರಾಡಿದ್ದಾರೆ. ಹಾಗೆಯೇ ಸಾಹಿತ್ಯ ಕೃಷಿ ಮಾಡಿ ಜನರನ್ನು ಪ್ರೇರೆಪಿಸಿದ್ದಾರೆ. ಈ ಹೋರಾಟಗಳಿಂದ ತೆಲುಗು ಸಾಹಿತ್ಯ ಶ್ರೀಮಂತವಾಗಿದೆ.

**'ಕಲ್ಲೊಳಗಿನ ತೇವ':** ಮಧುರಾಂತಕಂ ರಾಜರಾಂ ಅವರ ಈ ಕಥೆ ಹಿಂಸೆಯಿಂದ ಕೂಡಿದ ಕಲ್ಲಿನಂಥ ವ್ಯಕ್ತಿಯನ್ನು ಹೆಂಡತಿ ತಾಳ್ಮೆ ಮತ್ತು ಸಹನೆಯ ಮೂಲಕ ಮನವೊಲಿಸಿ ಅನ್ಯಾಯಕ್ಕೆ ಒಳಗಾದ ಜೋಗ್ಯೇರಿಗೆ ನ್ಯಾಯ ಕೊಡಿಸುವ ಕಥೆಯಾಗಿದೆ. ಈ ಕಥೆಯಲ್ಲಿ ಶೋಷಣೆಗೆ ಒಳಗಾದ ಜನರು ಗಾಂಧೀಜಿಯ ಉಪವಾಸ ಸತ್ಯಾಗ್ರಹ ಮಾಡುವ ಮೂಲಕ ಸಮಸ್ಯೆಯನ್ನು ಪರಿಹರಿಸಿ ಕೊಳ್ಳುವುದು ಆದರ್ಶನೀಯವಾಗಿದೆ. ಎಲ್ಲದಕ್ಕೂ ಹಿಂಸೆಯಿಂದ ಕೂಡಿದ ಬಂಡಾಯವು ಸರಿಯಲ್ಲ. ಆಯುಧ ಇಲ್ಲದೆಯೂ ನ್ಯಾಯ ದೊರಕಿಸಿಕೊಳ್ಳಬಹುದು ಎಂಬುದನ್ನು ಈ ಕಥೆ ನಿರೂಪಿಸುತ್ತದೆ. ಜೋಗ್ಯೇರ ಹುಡುಗರು ರೆಡ್ಯೇರ ಹೊಲದಲ್ಲಿ ಹಂದಿಗಳನ್ನು ಬಿಟ್ಟರು ಎಂಬ ಕಾರಣಕ್ಕೆ ರೆಡ್ಯೇರ ಆಳುಗಳು ಜೋಗ್ಯೇರ ಗುಡಿಸಿಲಿಗೆ ಬೆಂಕಿ ಹಚ್ಚುತ್ತಾರೆ. ಮಕ್ಕಳು ಮರಿಗಳಿಗೆ ನಿಲ್ಲಲ್ಲು ನೆರಳಿಲ್ಲದಂತೆ ಮಾಡುತ್ತಾರೆ. ಆಗ ಅನ್ಯಾಯಕ್ಕೆ ಒಳಗಾದ ಜೋಗ್ಯೇರೆಲ್ಲಾ ರೆಡ್ಡೇರ ಮನೆ ಮುಂದೆ ಮಕ್ಕಳು, ದೊಡ್ಡವರು, ಸಣ್ಣವರು, ಹೆಣ್ಣು, ಗಂಡು, ಮುದುಕರು ಎಲ್ಲರೂ ಬಂದು ಗೇಟಿನ ಮುಂದೆ ಉಪವಾಸ ಕೂಡುತ್ತಾರೆ. ದಿನವಿಡೀ ಬಿಸಿಲಿನಲ್ಲಿ ಆ ಜೋಗ್ಯೇರು ಹಿಂಡು ಮಕ್ಕಳನ್ನು ಮರಿಗಳನ್ನು ಕಟ್ಟಿಕೊಂಡು ಉಪವಾಸ ಕೂತಿರುವುದು ನೋಡುಗರ ಕರುಳು ಕಿವುಚುವಂಥ ದೃಶ್ಯವಾಗಿದೆ. ಈ ದೃಶ್ಯವನ್ನು ನೋಡಿ ಸಹಿಸದ ರೆಡ್ಯೇರ ಆಳುಗಳು ಅವರನ್ನು ದನಕ್ಕೆ ಬಡಿಯುವಂತೆ ಬಡಿಯುತ್ತಾರೆ. ಆಗ ಅದುವರೆಗೆ ಸುಮ್ಮನಿದ್ದು ಸಂಕಟ ಅನುಭವಿಸಿದ ರೆಡ್ಡಿಸಾನಿಗೆ ಇನ್ನು ಸುಮ್ಮನಿರಲಾಗಲಿಲ್ಲ. ಅಡ್ಡ ಬಂದು ಅವರನ್ನು ತಡೆದುನಿಲ್ಲಿಸಿ ಮೇಲಿನ ಮಹಡಿಯಲ್ಲಿರುವ ರೆಡ್ಡಿಯರನ್ನು ಕಾಣಲು ಹೋಗುತ್ತಾಳೆ. ಎಂದೂ ತಮ್ಮ ಕೆಲಸಗಳಿಗೆ ಅಡ್ಡಿಪಡಿಸದ ರೆಡ್ಡಿಸಾನಿ ಇಂದು ತಮ್ಮ ಎದುರು ನಿಂತು ಜ್ಯೋಗ್ಯೇರಿಗೆ ನ್ಯಾಯ ಕೇಳಿದಾಗ ರೆಡ್ಡಿಯವರು ಈ ಸಮಸ್ಯೆಯನ್ನು ನೀನೇ ಸರಿಪಡಿಸು ಎಂದು ಹೇಳುತ್ತಾರೆ.

ರಾಕ್ಷಸನಂಥ ರಡ್ಯೇರು ತನ್ನ ಮನೆಯ ಬಾಗ್ಲೀಗೆ ಬಂದ ದೀನರಾದ ಜ್ಯೋಗ್ಯೇರನ್ನು ರಕ್ತ ಕಾರುವಂತೆ ಬಡಿದಾಗ ಅವರಿಗೆ ಸಮಾಧಾನ ಹೇಳಿ ಅಡುಗೆ ಮಾಡಿ ಉಂಬಾಕಿಟ್ಟ ರೆಡ್ಡಿಸಾನಿ ಅನ್ನಪೂರ್ಣಮ್ಮನ ಅಡುಗೆ ಮಾಡುವಾಕೆ 'ಅಮ್ಮೋರಾ ನೆಂಟಿರ್ಯಾರಾದ್ರು ಬಂದಾರೇನು; ಎಂದು ಕೇಳಿದಕ್ಕೆ' ಇನ್ನೂ ಬರಲಿಲ್ಲಾಂತ ಯಾಕೆ ಕೇಳ್ತೀಯ ಹುಚ್ಚಿ ಯಾವತ್ತೋ ಬಂದಿದ್ದಾರಲ್ಲಾ? ಎಂದು ಹೇಳುತ್ತಾರೆ. ರೆಡ್ಡಿಸಾನಿ ಅಮೃತವಲ್ಲಿ. ಇದನ್ನೆಲ್ಲಾ ಕೇಳಿದ ರಾಕ್ಷಸನಂಥ ರೆಡ್ಡಿ ಚಂಗಪ್ಪಗೆ 'ನಿಮ್ಮ ರೆಡ್ಡಿಸಾನಿ ಹಾಕಿದ್ದೆಲ್ಲಾ ಒಂದು ಹೊತ್ತಿನ ಕೂಳು ಅಲ್ವೇನೋ? ನಾವು ಹಾಗೆ ಮಾಡ್ಲಿಕ್ಕಿಲ್ಲ' ಎನ್ನುತ್ತಾನೆ. ತಮ್ಮ ಹೊಲದಲ್ಲಿ ಆ ಜ್ಯೋಗ್ಯೇರಿಗೆಲ್ಲ ಮನೆ ಕಟ್ಟಿಕೊಳ್ಳಲಿಕ್ಕೆ ಅವಕಾಶ ಮಾಡಿ ಕೊಡುತ್ತಾನೆ.'

ಕ್ರಾಂತಿಮಾರ್ಗದ ಕಾರ್ಯಾಚರಣೆಯಲ್ಲಿ ಎದುರಾಗುವ ಎಲ್ಲ ಬಗೆಯ ಸಮಸ್ಯೆಗಳ ಮತ್ತು ಸಂದರ್ಭಗಳ ಬಗ್ಗೆ ತೆಲುಗು ಸಾಹಿತಿಗಳು ವಾಸ್ತವಿಕತೆಯ ಒಳನೋಟಗಳನ್ನು ತೋರ್ಪಡಿಸಿದ್ದಾರೆ. ನಿರಾಯುಧ ಹೋರಾಟವೇ ಸಮಗ್ರ ಸಾಮಾಜಿಕ ಪರಿವರ್ತನೆಗೆ ಸಾಧನ. ಉಳಿದೆಲ್ಲ ಮಾರ್ಗಗಳು ವ್ಯರ್ಥ ಎಂಬ ತೀವ್ರ ಹಂತಕ್ಕೆ ಸಾಹಿತಿಗಳು ಬಂದು ಮುಟ್ಟಿದ್ದಾರೆ. ಇಂಥ ತೀವ್ರಗಾಮಿತ್ವವನ್ನು ಒಪ್ಪದ ಮಧ್ಯಮಮಾರ್ಗಿಗಳೂ ಇಲ್ಲದಿಲ್ಲ.

ಒಂದು ಪಕ್ಕ ಹಿಂಸೆ, ಇನ್ನೊಂದು ಪಕ್ಕ ಪ್ರೇಮ, ಅಲ್ಲದೆ ದುರ್ಮಾರ್ಗವನ್ನು ಯುಕ್ತಿಯಿಂದ ಎದುರಿಸಬಹುದೆಂದು ಸೂಚಿಸುವ ಕಥೆ 'ತಾಯವ್ವನ ಬಂಡೆ.' ಭೂಪಾಲ್ ಅವರ ಈ ಕಥೆಯಲ್ಲಿ ಬರುವ ರೈತ ಶ್ರೀನಿವಾಸರಾವ ಸ್ವಲ್ಪ ಸ್ಥಿತಿವಂತ ಒಂದು ದಿನ ಕೋರ್ಟಿನ ಕೆಲಸದ ನಿಮಿತ್ತ ಪಟ್ಟಣಕ್ಕೆ ಹೋಗುವ ಸಂದರ್ಭದಲ್ಲಿ ಊರಹೊರಗಿನ ತಾಯವ್ವನ ಬಂಡೆ ಪಕ್ಕದ ಹಳ್ಳದಲ್ಲಿ ಆತನು ಕುಳಿತಿರುವ ಬಂಡಿಯ ಚಕ್ರ ಸಿಕ್ಕಿಹಾಕಿಕೊಳ್ಳುತ್ತದೆ ಅಲ್ಲೇ ಪಕ್ಕದಲ್ಲಿ ಕುರಿ ಕಾಯುತ್ತಿರುವ ಶ್ರೀಶೈಲಂ ಮತ್ತು ಮಹೇಶನನ್ನು ಬಂಡಿ ಹೊಡೆಯುವ ಆಳು ಕೂಗಿ ಕರೆಯುತ್ತಾನೆ. ಅಲ್ಲಿಗೆ ಬಂದ ಅವರಿಬ್ಬರು ಬಂಡಿಯಲ್ಲಿ ಸೊಕ್ಕಿನಿಂದ ಕುಳಿತಿರುವ ಶ್ರೀನಿವಾಸನನ್ನು ನೋಡಿ ಅವನನ್ನು ಕೆಳಗಿಳಿಸಿ ನಂತರ ಕೆಸರಿನಿಂದ ಗಾಲಿಯನ್ನು ತೆಗೆಯಬೇಕು ಎಂದು ಯೋಚಿಸುತ್ತಾರೆ. ಕೆಳಗಿಳಿದರೆ ಎಲ್ಲಿ ತನ್ನ ಗೌರವ ಕಡಿಮೆಯಾಗುತ್ತೋ ಎಂದು ಶ್ರೀನಿವಾಸ ಬಂಡಿಯಲ್ಲಿಯೇ ಕುಳಿತ್ತಿರುತ್ತಾನೆ. ಕೊನೆಗೆ ಕತ್ತಲಾಗುವುದನ್ನು ಗಮನಿಸಿ ಕೆಳಗಿಳಿದು ಅವರಿಂದ ಬಂಡಿಯ ಗಾಲಿಯನ್ನು ಸರಿಪಡಿಸುತ್ತಾರೆ. ಶ್ರೀಶೈಲ. ಇದು ತನಗೆ ಮಾಡಿದ ಅಪಮಾನವೆಂದು ತಿಳಿದ ಶ್ರೀನಿವಾಸ ಆತನ ಕುರಿಗಳು ತನ್ನ ಹೊಲದಲ್ಲಿ ಬೆಳೆ ತಿಂದಿವೆ ಎಂದು ಸುಳ್ಳು ಆಪಾದನೆ ಹೊರೆಸಿ ಶ್ರೀಶೈಲಂನ ಕುರಿಗಳನ್ನು ತಂದು ತೋಟದ ಮನೆಯಲ್ಲಿ ಕೂಡಿಹಾಕುತ್ತಾನೆ.

ಈ ಸಮಸ್ಯೆಯಿಂದ ಹೇಗೆ ಪಾರಾಗುವುದು ಎಂದು ತಿಳಿಯದ ಶ್ರೀಶೈಲಂ ಶ್ರೀನಿವಾಸನ ವಿರೋಧಿಯಾಗಿದ್ದ ಕೇಶವರಾವನ ಸಲಹೆ ಕೇಳಿದ. ಅದಕ್ಕೆ ಆತ ಆ ಶ್ರೀಮಂತನಿಗೆ ತಪ್ಪಾತು ಎಂದು ಹೇಳಿ ಒಂದು ಕುರಿ ತೆಗೆದುಕೊಂಡು ಉಳಿದವನ್ನು ಕೊಡಲು ಕೇಳೆಂದು ಹೇಳಿದ. ಆದರೆ ಆ ಶ್ರೀನಿವಾಸನು ಮೂರು ಕುರಿಗಳನ್ನು ತೆಗೆದುಕೊಂಡು ಉಳಿದ ಕುರಿಗಳನ್ನು ಕೊಟ್ಟನು. ಇದರಿಂದ ಸಂಕಟಗೊಂಡ ಶ್ರೀಶೈಲಂ ಮತ್ತೆ ಕೇಶವನಿಗೆ ಸಲಹೆ ಕೇಳಿದಾಗ ನೀನು ಸೀದಾ ಪಟ್ಟಣಕ್ಕೆ ಹೋಗಿ ಕುರಿ ಕಳೆದಿವೆ ಎಂದು ಕಂಪ್ಲೇಂಟು ಕೊಡು ಎಂದು ಹೇಳಿದನು. ಅದರಂತೆ ಮಾಡಿದಾಗ ಪಟ್ಟಣದಿಂದ ಬಂದ ಸಬ್‌ಇನ್ಸ್‌ಪೆಕ್ಟರ್ ಶ್ರೀಶೈಲಂನ ಮಾತನ್ನು ಕೇಳಿ ಶ್ರೀನಿವಾಸನ ಮನೆಯನ್ನು ಪರಿಶೀಲನೆ ಮಾಡಿದಾಗ ಕುರಿಗಳು ಕಾಣುವುದಿಲ್ಲ. ಸುಳ್ಳು ಹೇಳುತ್ತಿ ಎಂದು ಶ್ರೀಶೈಲಂನನ್ನು ಹೊಡೆಯುತ್ತಾನೆ. ನಂತರ ಶ್ರೀಶೈಲಂ ನಾಲ್ಕು ಮಂದಿ ಯುವಕರನ್ನು

ಕರೆದುಕೊಂಡು ಮತ್ತು ತನ್ನ ಜಾತಿಯ ಎಲ್ಲಾ ಜನರನ್ನು ಕರೆದುಕೊಂಡು ಶ್ರೀನಿವಾಸನ ಮನೆ ಮುಂದೆ ಜಮಾಯಿಸುತ್ತಾನೆ. ಆಗ ಶ್ರೀಮಂತ ಹೆದರಿ ಇನ್ಸ್‌ಪೆಕ್ಟ‌ರಿಗೆ ಫೋನ್ ಮಾಡಿ ಕರೆಯಿಸುತ್ತಾನೆ ಈ ಸಾರಿ ಶ್ರೀಶೈಲಂ ಮತ್ತು ಅವನ ಸಂಗಡಿಗರು ಹಾಗೂ ಅವನ ಪ್ರೀತಿಯ ನಾಯಿಯು ಶ್ರೀನಿವಾಸನ ಮನೆಯಲ್ಲಿ ಅಡುಗೆ ಪಾತ್ರೆಯಲ್ಲಿ ಬೇಯುವ ಕುರಿಗಳನ್ನು ಕಂಡುಹಿಡಿಯುತ್ತಾರೆ. ಆಗ ಜನರೆಲ್ಲಾ ಸಿಟ್ಟಿಗೆದ್ದಾಗ ಎಸ್ಸೈ ಕೂಡ ಪರಿಸ್ಥಿತಿ ನಿಭಾಯಿಸುವುದಕ್ಕೆ ಹೆದರುತ್ತಾನೆ. ಆಗ ಶ್ರೀಶೈಲಂ ತಾಯವ್ವನ ಬಂಡೆಯ ಹತ್ತಿರ ನ್ಯಾಯ ತೀರ್ಮಾನವಾಗಲಿ ಎಂದು ಹೇಳಿ ಹಳ್ಳಿಯ ಎಲ್ಲಾ ಜನರನ್ನು ಅಲ್ಲಿಗೆ ಕರೆಸುತ್ತಾನೆ. ಎಸ್ಸೈ ಶ್ರೀನಿವಾಸನಿಗೆ ಕಾನೂನು ರೀತಿ ಶಿಕ್ಷೆ ಕೊಡಿಸುತ್ತೀನಿ ಎಂದು ಹೇಳಿದಾಗ ನೀನು ಸರಿಯಾದ ಸಮಯಕ್ಕೆ ಬಂದಿದ್ದರೆ ನನ್ನ ಕುರಿಗಳು ಬದುಕಿರುತ್ತಿದ್ದವು ಎಂದು ಹೇಳಿ ಅವನ ಮೇಲಧಿಕಾರಿಗಳಿಗೆ ಅವನನ್ನು ಇಲ್ಲಿಂದ ವರ್ಗಾವಣೆ ಮಾಡಬೇಕೆಂದು ಹಳ್ಳಿಯ ದೈವದ ಸಮ್ಮುಖದಲ್ಲಿ ಎಲ್ಲರೂ ತೀರ್ಮಾನ ತೆಗೆದುಕೊಳ್ಳುತ್ತಾರೆ ಹಾಗೂ ಮಾಡಿದ ತಪ್ಪಿಗೆ ಶ್ರೀನಿವಾಸಂ ಒಂದೇ ಕಾಲಿನಿಂದ ಕುಂಟುತ್ತಾ ತಾಯವ್ವನ ಬಂಡೆಯಿಂದ ಮನೆಗೆ ಹೋಗಬೇಕೆಂದು ಶಿಕ್ಷೆಯನ್ನು ಕೊಡಿಸುತ್ತಾನೆ.[೧೦]

ಸಾಹಿತ್ಯ ಸೃಷ್ಟಿಯ ಸಾಮಾಜಿಕ ಹಿನ್ನೆಲೆಯ ದೃಷ್ಟಿಯಿಂದ ಎರಡು ಬಗೆಯ ಸಂದರ್ಭಗಳನ್ನು ಗುರುತಿಸಬಹುದು. ೧. ಸಾಮಾನ್ಯ ವಾತಾವರಣ, ೨. ವಿಪ್ಲವ ವಾತಾವರಣ. ಸಮಾಜದ ದೈನಂದಿನ ಜೀವನವನ್ನು ಕುರಿತು ಸಾಹಿತಿಯು ಚಿಂತನೆ ಮಾಡುವಾಗ ಸಮಾಜದ ಸಮಗ್ರ ವ್ಯವಸ್ಥೆಯನ್ನು ಸೂಕ್ಷ್ಮವಾಗಿ ವಿಮರ್ಶೆ ಮಾಡಿ ಬದಲಾವಣೆಯ ರೀತಿ ನೀತಿಗಳನ್ನು ನಿರೂಪಿಸುವುದು ಸಾಧ್ಯವಾಗುತ್ತದೆ. ಆದರೆ ಸ್ವಾತಂತ್ರ್ಯ ಹೋರಾಟ, ತೆಲಂಗಾಣ ಹೋರಾಟ, ರಜಾಕಾರರ–ನಿಜಾಮರ ವಿರುದ್ಧ ನಡೆದ ಹೋರಾಟ ಮತ್ತು ಶ್ರೀಕಾಕುಳಂ ರೈತ ಹೋರಾಟಗಳಂಥ ಸಂದರ್ಭಗಳಲ್ಲಿ ತತ್ಕಾಲೀನ ಪರಿಸ್ಥಿತಿಯ ಕಾವು – 'ಏರುಪೇರುಗಳು ಸಾಹಿತಿಯ ಕೃತಿಯನ್ನು ಆವೇಶಗೊಳಿಸುತ್ತದೆ. ತತ್ಕಾಲೀನ ಸಮಸ್ಯೆಗೆ ಪರಿಹಾರವು ಸಾಹಿತಿಗೆ ಗುರಿಯಾಗಿರುವುದೂ ಅನಿವಾರ್ಯ. ಇಂಥ ವಿಪ್ಲವದ ವಾತಾವರಣವನ್ನು ಸಾಮಾನ್ಯ ದೀರ್ಘಕಾಲೀನ ಸಾಮಾಜಿಕ ಹಿನ್ನೆಲೆಗೂ ಆರೋಪಿಸಿ ಸಾಹಿತಿ ವಿಚಾರ ಮಾಡುವುದು ಸಾಧ್ಯವಿದೆ. ಆಧುನಿಕ ತೆಲುಗು ಸಾಹಿತ್ಯಕ್ಕೆ ಇಂಥ ವಿಪ್ಲವ ಸಂದರ್ಭಗಳು ಪ್ರೇರಕವಾಗಿ ಕೆಲಸ ಮಾಡುತ್ತಾ ಬಂದಿವೆ.

### ೫.೪. ಸ್ತ್ರೀಸಂವೇದನೆಯಿರುವ ಕಥೆಗಳು

ರಾಜಕೀಯ ವಾಮಪಕ್ಷಗಳು ಪ್ರತಿಪಾದಿಸಿ ಹೋರಾಡಿದರೂ ಪುರುಷ ಅಹಂಕಾರವಾಗಲೀ ಪಿತೃಪ್ರಧಾನ ವ್ಯವಸ್ಥೆಯಾಗಲೀ ಕಿಂಚಿತ್ ಮಾತ್ರವಾದರೂ ಸಡಿಲಗೊಳ್ಳದ ಕಾರಣದಿಂದಾಗಿಯೇ ಹುಟ್ಟಿಕೊಂಡ ಸ್ತ್ರೀವಾದ ಒಂದು ಚಳುವಳಿಯಾಗಿ ಹೆಣ್ಣಾಗಲಿ, ಗಂಡನ್ನಾಗಲೀ ಮನುಷ್ಯ

ರಂತೆಯೇ ನೋಡಬೇಕು ಎಂದು ಹೇಳುತ್ತದೆ. ಹೆಣ್ಣು ಹೆಣ್ಣಾಗಿ ಅಲ್ಲದೆ ಮಗಳಾಗಿಯೇ ಜನಿಸುತ್ತಾಳೆ. ಆದರೆ ಸಮಾಜ ಆಕೆಯ ಮೇಲೆ ಒತ್ತಡಗಳನ್ನು ಹೇರಿ ಗುಲಾಮಳನ್ನಾಗಿ ಮಾಡುತ್ತದೆ ಎಂಬ ನಿಷ್ಠುರ ಸತ್ಯವನ್ನು ಮದುವೆ, ಸಂತಾನಗಳಾದ ಆನಂದಕರ ಅಂಶಗಳು ಸ್ತ್ರೀ ಸ್ವಾತಂತ್ರ್ಯವನ್ನು ಹರಣ ಮಾಡುವುದಕ್ಕೆ ಯಾವ ರೀತಿ ಪ್ರಯತ್ನ ಮಾಡುತ್ತವೆ ಎಂದು ವಿವರಿಸುವ ಕಥೆಗಳು ಈ ಸಂಕಲದಲ್ಲಿವೆ.

**'ಕಾಗದದ ತುಂಡುಗಳು ಗಾಜಿನ ಚೂರುಗಳು'** ಎನ್ನುವ ಕಥೆಯಲ್ಲಿ ಹೆಣ್ಣಿನ ನವಿರಾದ ಭಾವನೆಗಳು ಹೇಗೆ ಗಂಡಿನ ದರ್ಪದಿಂದ ಘಾಸಿಗೊಳ್ಳುತ್ತವೆ ಎಂಬುದನ್ನು 'ಬುಚ್ಚಿಬಾಬು' ಅವರು ಅತ್ಯಂತ ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ. ದಾಂಪತ್ಯದ ಬಹುದೂರ ಪಯಣದ ನಂತರ ಗಂಡು ತನ್ನ ಭಾವನೆಗಳನ್ನು ಬಹುಬೇಗ ಬದಲಿಸಿಕೊಂಡುಬಿಡುತ್ತಾನೆ. ಹಣ, ಅಂತಸ್ತು ಬಿಗುಮಾನ, ದರ್ಪ ಈ ಭಾವನೆಗಳನ್ನು ಮೈಗೂಡಿಸಿಕೊಂಡು ಮದುವೆಯ ಪ್ರಾರಂಭದಲ್ಲಿ ಇರುವ ಸುಮಧುರ ಭಾವನೆಗಳಿಂದ ಬಹುದೂರ ಸಾಗಿಬಿಟ್ಟಿರುತ್ತಾನೆ ಆದರೆ ಹೆಣ್ಣು ಹಾಗಲ್ಲ ಅವಳು ಯಾವಾಗಲು ಪ್ರೀತಿಯ ಸೆಲೆಯನ್ನು ಕೊಟ್ಟು ಪಡೆಯಬೇಕು ಎನ್ನುವಂಥವಳು. ಅಂಥ ಒಂದು ಸಂದರ್ಭದಲ್ಲಿ ಇಲ್ಲಿನ ಕಥಾನಾಯಕಿ ಅರುಣ ತನ್ನ ಗಂಡ ಮದುವೆಯ ಹೊಸತರಲ್ಲಿ ಬರೆದ ಕಾಗದವನ್ನು ಅತ್ಯಂತ ಜತನದಿಂದ ಕಾಪಾಡಿಕೊಂಡು ಬಂದು ತನಗೆ ಬದುಕಿನ ಏಕತಾನತೆಯಿಂದ ಯಾಂತ್ರಿಕತೆ ಯಿಂದ ಬೇಸರವಾದಾಗಲೆಲ್ಲಾ ಆ ಪತ್ರವನ್ನು ಬಹಳ ಪಾವಿತ್ರ್ಯತೆಯಿಂದ ಓದಲು ತಯಾರಾಗುತ್ತಾಳೆ.

ಒಂದು ದಿನ ಇಂಥದೊಂದು ಪ್ರಯತ್ನದಲ್ಲಿದ್ದ ಆಕೆ ಗಂಡನ ಅನಿರೀಕ್ಷಿತ ಆಗಮನದಿಂದಾಗಿ ಗಾಬರಿಗೊಂಡಳು. ಒಳಗೆ ಬಂದ ಆಕೆಯ ಪತಿ ಚಂದ್ರ ಆ ಪತ್ರವನ್ನು ಕಿತ್ತುಕೊಳ್ಳಲು ನೋಡುತ್ತಾನೆ. ಯಾಕೋ ಆಕೆಗೆ ಚಂಡಿಯಂಥ ಹಟ ಬಂದು ಆ ಪತ್ರವನ್ನು ಕೊಡದೆ ಪ್ರತಿಭಟಿಸುತ್ತಾಳೆ. ಆಗ ಅವಳ ಮೇಲೆ ಬಿದ್ದು ಹಂಟರ್‌ನಿಂದ ಹೊಡೆದು ಆ ಪತ್ರವನ್ನು ಕಿತ್ತುಕೊಂಡು ತನ್ನ ಕೋಣೆಗೆ ಹೋಗಿ ಓದಲು ಶುರುಮಾಡುತ್ತಾನೆ. ಆಗ ಅವನ ಅರಿವಿಗೆ ಬರುತ್ತದೆ. ಆಕೆ ಓದುತ್ತಿರುವ ಪತ್ರ ಬೇರೇ ಯಾರೋ ಪರಪುರುಷ ಬರೆದಿರುವುದಲ್ಲ ಸ್ವತಃ ತಾನೆ ತನ್ನ ಕೈಯಾರೆ ಮದುವೆಯ ಹೊಸತರಲ್ಲಿ ಆಕೆಗೆ ಬರೆದ ಪತ್ರ ಅದಾಗಿರುತ್ತದೆ. ಆ ಪತ್ರ ಬರೆದಾಗಿನ ಚಂದ್ರನೇ ಬೇರೆ. ಆ ಚಂದ್ರ ಪ್ರಿಯಕರ ಯೌವನದ ದಿನಗಳ ಸ್ವಪ್ನಗಳ ಮಾಂತ್ರಿಕ. ಇಂದಿನ ಚಂದ್ರ, ಗಂಡ, ನೌಕರಿ, ಹಣ, ಅಂತಸ್ತು, ಆಳುಕಾಳು ಒಣ ಪ್ರತಿಷ್ಠೆಗಳು ಗೂಡು ಆಕೆಯಾದರೋ ಕೇವಲ ಹೆಂಡತಿ ಅಡುಗೆ ಮಾಡುವ ಗೃಹ ಕರ್ಮಿಣಿ... ಆ ಅಪರೂಪದ ಪ್ರೇಮಪತ್ರವನ್ನು ಆಸ್ವಾದಿಸಬೇಕೆಂದು ಆಕೆ ತಲೆ ಸ್ನಾನ ಮಾಡಿ ಶುಚಿಯಾಗಿ

ಅಲಂಕರಿಸಿಕೊಂಡು ಓದಿ ಆ ಕಾಲದ ಆನಂದವನ್ನು ಆವಾಹಿಸಿಕೊಳ್ಳಲು ತಾನೆಂದಿನಂತೆ ಪ್ರಯತ್ನಿಸಿರುವಳು. ಆದರೆ ಆ ಪ್ರಿಯತಮ ಚಂದ್ರನೇ ಬೇರೆ. ಗಂಡನ ರೂಪದಲ್ಲಿರುವ ಈ ಚಂದ್ರನೇ ಬೇರೆ. ವರ್ತಮಾನದ ರೂಪಕದಂತಿರುವ ಪಂಟರ್ ಸ್ವರೂಪದಲ್ಲಿ ಪ್ರತ್ಯಕ್ಷಗೊಂಡು ತನ್ನ ಕಾಲ್ಪನಿಕ ಸುಂದರ ಜಗತ್ತನ್ನು ನಾಶ ಮಾಡಿಬಿಟ್ಟ ಅರುಣ ಪತ್ರಿಭಟನೆಯ ಮೂಲಕ ಆತನ ನೈಜ ಸ್ವರೂಪವನ್ನು ಅನಾವರಣಗೊಳಿಸುವಲ್ಲಿ ಸಫಲಗೊಂಡಳು. ಎಲ್ಲವನ್ನು ಓದಿದ ಆತನ ಕಣ್ಣಲ್ಲಿ ಒಂದು ಹನಿ ಕಣ್ಣೀರು ಉದುರಿತು. ಅದೊಂದೇ ಹನಿ ಇರುವುದು. ಚೂರುಗಳನ್ನು ಅಂಟಿಸುವ ಶಕ್ತಿ ಆ ಕಣ್ಣೀರೀಗಿದೆ. ಇಲ್ಲಿ ಹೆಣ್ಣಿನ ಸೂಕ್ಷ್ಮ ಭಾವನೆಗಳು, ಗಂಡಿನ ದರ್ಪ ಅತ್ಯಂತ ಮಾರ್ಮಿಕವಾಗಿ ಸಹಜವಾಗಿ ಮೂಡಿಬಂದಿವೆ.೧೧

**'ಸಂಪಿಗೆ ಹೂ':** ಗೋಪಿಚಂದ್ ಅವರು ಬರೆದಿರುವ ಈ ಕಥೆಯಲ್ಲಿ ಹೆಣ್ಣು ಪುರುಷನ ಆಸ್ತಿ ಎಂಬ ಅಭಿಪ್ರಾಯಕ್ಕೆ ತುಂಬಾ ಹತ್ತಿರದಲ್ಲಿದೆ. ಆದಿಕಾಲದಿಂದಲೂ ನಮ್ಮ ಸಮಾಜ ಸ್ತ್ರೀಯರ ಬಗ್ಗೆ ತನ್ನದೇ ಆದಂತಹ ಸಂಪ್ರದಾಯ ರೀತಿ ನೀತಿಯನ್ನು ಇಟ್ಟುಕೊಂಡಿದೆ. ಸ್ತ್ರೀ ಎಂದರೆ ಅವಳು ಹೀಗೇ ಇರಬೇಕು ಎಂದು ಅಲಿಖಿತ ಕಾನೂನು ಹಾಗೂ ಬೋಧನೆಯನ್ನು ಮಾಡಿದೆ. ಇಂಥದರಲ್ಲಿ ಕೆಲವು ಮಹಿಳೆಯರು ಈ ರೀತಿಯ ಸಾಂಪ್ರದಾಯಿಕ ಜೀವನ ವಿಧಾನದಿಂದ ಹೊರಬಂದು ವೈಚಾರಿಕವಾಗಿ ವಿವೇಚಿಸುತ್ತಾ ಹೊಸತನ ಹಾಗೂ ಸ್ವಾತಂತ್ರ್ಯಕ್ಕಾಗಿ ಯೋಚಿಸುವ ಬದುಕುವ ಜೀವನವಿಧಾನವನ್ನು ಅನುಸರಿಸಿದಾಗ ಅಂಥ ಮಹಿಳೆಯು ಗಂಡು ಬೀರಿಯಾಗಿ ಅಥವಾ ವಿಶೇಷವಾಗಿ ಪುರುಷರ ಕಣ್ಣಿಗೆ ಕಾಣಿಸಲಾರಂಭಿಸುತ್ತಾಳೆ. ಈ ಕಥೆಯ ಕಥಾನಾಯಕಿಯು ಹಾಗೆಯೇ ಪುರುಷರ ಜತೆ ಹೋಟೆಲ್‌ಗೆ ಹೋಗುವ, ಸಿನಿಮಾಗೆ ಹೋಗುವ ಅವರ ಜೊತೆ ಮಹಿಳೆಯರ ವ್ಯಕ್ತಿತ್ವವನ್ನು ನಿರ್ಭೀಡೆಯಿಂದ ಮಾತನಾಡುವ ಸಂದರ್ಭದಲ್ಲಿ ಒಬ್ಬ ಸೃಜನಶೀಲ ಲೇಖಕನ ಪರಿಚಯವಾಗುತ್ತದೆ. ಅಂಥ ಒಬ್ಬ ಲೇಖಕನೂ ಸಹ ಸಾಮಾನ್ಯ ಜನ ಹೆಣ್ಣಿನ ಬಗ್ಗೆ ಯೋಚಿಸುವಂತೆ ಯೋಚಿಸಿದಾಗ ಆಕೆಗೆ ಬೇಸರವಾಗುತ್ತದೆ.

'ಬೊಂಬಾಯಿಯಂತೆ. ಇಲ್ಲಿ ಇರಲಿಕ್ಕೆ ಹೇಗೆ ಸಾಧ್ಯ ರೀ' ಎಂದ ಲೇಖಕನಿಗೆ ಆಕೆ ಹೇಳುತ್ತಾಳೆ. ಈ ಹಳ್ಳಿಯಲ್ಲಿ ಜನಗಳು ಓಬಿರಾಯನ ಕಾಲದಲ್ಲಿ ಇರುವಂತೆ ಆಡುತ್ತಾರೆ. ಜನ ಬದಲಾಗುವುದು ಬೇಡ. ಆದರೆ ನಿಮ್ಮಂತ ಸೃಜನಶೀಲ ಲೇಖಕರು ಸಹ ಹೆಣ್ಣನ್ನು ಕುರಿತು ಈ ರೀತಿ ಬದಲಾವಣೆಗೆ ತೆರೆದುಕೊಳ್ಳಬೇಕು. ಹೆಣ್ಣನ್ನು ಅರ್ಥ ಮಾಡಿಕೊಳ್ಳಬೇಕು. ಆಕೆಯ ಸೂಕ್ಷ್ಮ ಸಂವೇದನೆಗಳನ್ನು ಗ್ರಹಿಸಬೇಕು. ಬರೀ ಹೆಣ್ಣನ್ನು ಪ್ರಗತಿಪರವಾಗಿ ಬರಹದಲ್ಲಿ ಕಾಣಿಸುವುದು ಮುಖ್ಯವಲ್ಲ ನಿಮ್ಮಂಥ ಲೇಖರು ಪ್ರಗತಿಪರವಾಗಿ ನಿಜಜೀವನದಲ್ಲಿ ನಡೆದುಕೊಳ್ಳಬೇಕು ಎಂದು ಹೇಳುತ್ತಾಳೆ.೧೨

**'ಊರಬಾವಿ'** ಕೊಲಕೂರಿ ಇನಾಕ್ ಅವರ ಈ ಕಥೆಯಲ್ಲಿ ಮೇಲ್ವರ್ಗ ಮತ್ತು ಕೆಳವರ್ಗದ ಸಂಘರ್ಷವನ್ನು ಕಾಣಬಹುದು. ಊರಬಾವಿಯ ಹತ್ತಿರ ಮಹಿಳೆ ಕೊಡ ಇಟ್ಟುಕೊಂಡು ನೀರಿಗಾಗಿ ಕಾಯುತ್ತಾ ಕೂಡುತ್ತಾಳೆ. ಯಾರಾದರೂ ಮೇಲುವರ್ಗದವರು ಬಂದು ತನ್ನ ಕೊಡಪಾನಕ್ಕೆ ನೀರು ಹಾಕುತ್ತಾರೆ ಎಂದು ದಾರಿ ಕಾಯುತ್ತಾ ಕುಳಿತಿರುವಾಗ ಮೇಲುವರ್ಗದ ಗೌಡರ ಮಗ ಬರುತ್ತಾನೆ. ಆಗ ಆಕೆ ನೀರು ಹಾಕಿಸಿಕೊಂಡ ನಂತರ ಯಾರು ಇಲ್ಲದ ಕಾರಣ ಕೊಡವನ್ನು ತಲೆಯ ಮೇಲೆ ಹೊರಿಸುವಂತೆ ಕೇಳುತ್ತಾಳೆ. ಕೊಡ ಹೊರಿಸುವ ಸಂದರ್ಭದಲ್ಲಿ ಆಕೆಯ ಸಹಜ ಸೌಂದರ್ಯಕ್ಕೆ ಮಾರುಹೋದ ಆತ ಕೊಡವನ್ನು ಕೈ ಬಿಡುತ್ತಾನೆ. ಆಕೆ ಸಿಟ್ಟಿನಿಂದ ಆತನಿಗೆ ಕೆನ್ನೆಗೆ ಹೊಡೆಯುತ್ತಾಳೆ. ನಂತರ ಆ ರಾತ್ರಿ ಒಂದು ತೀರ್ಮಾನಕ್ಕೆ ಬಂದು ಯಾರಿಗೂ ಹೇಳದೆ ಊರ ಹೊರಗೆ ಬಿದ್ದಿರುವ ಸತ್ತ ದನದ ಅಸ್ತಿಪಂಜರವನ್ನು ತಂದು ಆ ಬಾವಿಗೆ ಹಾಕುತ್ತಾಳೆ ಬೆಳಿಗ್ಗೆ ಊರು, ಕೇರಿ ಎಲ್ಲಾ ಇದೇ ಸುದ್ದಿ. ಯಾರು ಇಂಥಾ ಕೆಲಸ ಮಾಡಿರುವರೋ ಎಂದು ಮನಸೋಬ ಹಲ್ಲು ಕಡಿಯುತ್ತಾ ಕೇಳಿದಾಗ ಕೆಲವರು ರಾಮನ ಮಗ ಚಿದಂಬರ ಎಂದು ಹೇಳಿದಾಗ ಗೌಡನು ರಾಮ ಮತ್ತು ಚಿದಂಬರನ್ನು ಹಿಡಿದು ತರಿಸಿ ಅವರನ್ನು ಮನಸೋ ಇಚ್ಛೆ ಹೊಡೆದು ಕಂಬಕ್ಕೆ ಕಟ್ಟಿ ಹಾಕಿದನು. ಆದರೆ ರಾತ್ರಿ ಹೊತ್ತಿನಲ್ಲಿ ಗೌಡರ ಮಗ ಅವರ ಕಟ್ಟು ಬಿಚ್ಚಿ ಹೋಗಿರಿ ಎಂದು ಹೇಳಿದ. ಗೌಡರಿಗೆ ನಿಷ್ಟರಾಗಿರಬೇಕು ಎಂದು ಅವರು ಅಲ್ಲಿಂದ ಹೋಗಲಿಲ್ಲ. ಇತ್ತ ಸಿಹಿ ನೀರಿನ ಬಾವಿಯಿಂದ ಆ ಎತ್ತಿನ ಅಸ್ತಿಪಂಜರವನ್ನು ಹೊರ ಹಾಕಿಸಲು ಗೌಡನು ಆಳನ್ನು ಕಳಿಸಿದನು. ಆದರೆ ಎತ್ತಿನ ಅಸ್ತಿಪಂಜರವನ್ನು ತೆಗೆಯಲು ಹೋದ ಆಳು ಬಾವಿಯಲ್ಲಿ ಬೀಳುತ್ತಾನೆ. ಆಗ ಜನರೆಲ್ಲಾ ಸೇರಿ ಎತ್ತು ಆಹುತಿ ಬೇಡತಾ ಇದೆ ಎಂದು ಹೆದರುತ್ತಾರೆ. ಯಾರೊಬ್ಬರ ಕೈಯಲ್ಲೂ ಆ ಅಸ್ತಿಪಂಜರವನ್ನು ತೆಗೆಯಲು ಆಗುವುದಿಲ್ಲ. ಆಗ ಮನಸೋಬನು ಆ ಬಾವಿಯ ನೀರೇ ನಮಗೆ ಬೇಡ ಅದನ್ನು ನೀವೇ ಉಪಯೋಗಿಸಿ ಎಂದು ಹೇಳಿದ್ದೇ ತಡ ಚಿದಂಬರನ ಹೆಂಡತಿ ತನ್ನ ಎರಡು ಎತ್ತುಗಳನ್ನು ತಂದು ಬಾವಿಯ ಹತ್ತಿರ ನಿಲ್ಲಿಸಿ ಎತ್ತಿನ ಕೊರಳಿನ ಹಗ್ಗವನ್ನು ಸತ್ತ ಎತ್ತಿನ ಅಸ್ತಿಪಂಜರಕ್ಕೆ ಕಟ್ಟಿ ಎಳೆಯುತ್ತಾಳೆ ಎತ್ತುಗಳನ್ನು ಮುಂದೆ ಮುಂದೆ ಹೊಡೆದಂತೆಲ್ಲಾ ಬಾವಿಯೊಳಗಿನ ಅಸ್ತಿಪಂಜರ ಹೊರಕ್ಕೆ ಬರುತ್ತದೆ ನಂತರ ನೆರದ ಮಂದಿಯನ್ನು ಉದ್ದೇಶಿಸಿ ಏನ್ ನೋಡುತ್ತಾ ನಿಂತೀರಿ ಎಲ್ಲರೂ ಸೇರಿ ಬಾವಿಯ ನೀರನ್ನು ಸ್ವಚ್ಚಗೊಳಿಸಿ ಎಂದು ಹೇಳುತ್ತಾಳೆ ಎಲ್ಲರೂ ತಮಗೆ ಸಿಕ್ಕಂಥ ಆ ಬಾವಿಯನ್ನು ಶುದ್ಧಗೊಳಿಸಲು ಒಕ್ಕಟ್ಟಿನಿಂದ ಶ್ರಮಿಸುತ್ತಾರೆ. ಊರಿನ ಮೇಲುವರ್ಗದವರೆಲ್ಲಾ ಈ ದೃಶ್ಯವನ್ನು ನೋಡಿ ವಿಸ್ಮಿತರಾಗುತ್ತಾರೆ. ಹೆಣ್ಣು ಮನಸ್ಸು ಮಾಡಿದರೆ ಎಂಥಾ ಸಾಹಸವನ್ನು ಮಾಡಬಲ್ಲಳು ಮತ್ತು ತಮ್ಮ ಕೇರಿಯ ನೀರಿನ ಸಮಸ್ಯೆಯನ್ನು ಸುಲಭವಾಗಿ ಪರಿಹರಿಸಬಹುದೆಂಬುದು ಈ ಕಥೆಯಲ್ಲಿ ಅತ್ಯಂತ ನೈಜವಾಗಿ ಮೂಡಿಬಂದಿದೆ.

**'ಅಜ್ಜಿ ಮಾಡಿದ ಕ್ರಾಂತಿ'**: ಪೋತಕೂಚಿ ಸಾಂಬಶಿವರಾವ್ ಅವರ ಈ ಕಥೆಯು ವಿಧವಾ ವಿವಾಹದ ಮೇಲೆ ಬೆಳಕು ಚೆಲ್ಲುವ ಕಥೆಯಾಗಿದೆ. ಹೆಣ್ಣು ಸ್ವತಂತ್ರ್ಯವಾಗಿ ತನ್ನ ಬದಕನ್ನು ಮರಳಿ ಕಟ್ಟಿಕೊಳ್ಳುವ ಅವಕಾಶವಿದೆ ಎಂಬುದನ್ನು ಅತ್ಯಂತ ಸಹಜವಾಗಿ ಬಾಲವಿಧವೆಯ ಚಿತ್ರಣದ ಮೂಲಕ ನಿರೂಪಿಸಿದ್ದಾರೆ. ಶೇಷಮ್ಮ ಬಾಲವಿಧವೆ. ಚಿಕ್ಕ ವಯಸ್ಸಿನಲ್ಲಿ ಗಂಡನನ್ನು ಕಳೆದುಕೊಂಡು ಮದುವೆ ಮುಂಜಿ ಇತರ ಕಾರ್ಯಕ್ರಮದಲ್ಲಿ ಮಡಿ ಹುಡಿಯಿಂದ ಅಡುಗೆ ಬೇಯಿಸಿ ಹಾಕುವುದೇ ಆಕೆಯ ಬದುಕಿನ ಭಾಗವಾಗಿತ್ತು. ಸುಮಂಗಲಿಯ ಮಧ್ಯೆ ನಿಂತು ಮದುವೆ ಕಾರ್ಯಕ್ರಮವನ್ನು ನೋಡುವ ಚಿಕ್ಕ ಸಂಭ್ರಮ ಕೂಡ ಆಕೆಯ ಪಾಲಿಗೆ ಇರಲಿಲ್ಲ. ಅಂತಹ ಸಂದರ್ಭದಲ್ಲಿ ಅಲ್ಲಿಯ ಹಿರಿಯರು ಆಕೆಗೆ ಒಳಗೆ ಹೋಗು ಎಂದು ಅವಮಾನಿಸುತ್ತಿದ್ದರು ಇಂತಹ ದೃಶ್ಯವನ್ನು ನೋಡಿದ ಮದುವೆಗೆ ಬಂದ ರಾಜಾರಾಂ ನಿಬ್ಬೆರಾಗಾದ. ಯಾರವರು ಎಂದು ಸ್ನೇಹಿತನನ್ನು ಕೇಳುತ್ತಾನೆ. ಎರಡು ದಿನ ಇರು ನಿನಗೆ ಎಲ್ಲಾ ತಿಳಿಯುತ್ತೇ ಎಂದು ಸ್ನೇಹಿತ ಹೇಳುತ್ತಾನೆ. ಅದೇ ಮದುವೆಯಲ್ಲಿ ಲಲಿತೆ ಎನ್ನುವ ಇನ್ನೊಬ್ಬ ವಿಧವೆಯನ್ನು ರಾಜಾರಾಂ ನೋಡುತ್ತಾನೆ. ಬ್ರಹ್ಮಚಾರಿಯಾದ ಅವನು ಅವಳೆಡೆಗೆ ಆಕರ್ಷಿತನಾಗುತ್ತಾನೆ. ಸ್ನೇಹಿತ ಲಲಿತೆ ನನ್ನ ಚಿಕ್ಕಮ್ಮನ ಮಗಳು ಎರಡು ತಿಂಗಳ ಹಿಂದೆ ಆಕೆಯ ಪತಿ ಸಿಡುಬಿನಿಂದ ತೀರಿದ ಎಂದು ಹೇಳುತ್ತಾನೆ. ನಂತರ ಆ ಎರಡು ದಿನಗಳಲ್ಲಿ ಲಲಿತೆ ಮತ್ತು ರಾಜಾರಾಂ ತುಂಬಾ ಹತ್ತಿರವಾಗುತ್ತಾರೆ. ಅವರಿಗೆ ಅಜ್ಜಿಯು ಸಹಾಯ ಮಾಡುತ್ತಾಳೆ. ನಂತರ ಅವರು ಮನೆಯಿಂದ ಓಡಿ ಹೋಗಿ ಮದುವೆಯಾಗುತ್ತಾರೆ. ಆ ಸಂಪ್ರದಾಯಸ್ಥ ಕುಟುಂಬದಿಂದ ಅಜ್ಜಿಯು ಲಲಿತೆಯನ್ನು ಪಾರು ಮಾಡುತ್ತಾಳೆ. ತನ್ನಂತೆ ಲಲಿತೆಯ ಬದುಕು ಕಮರಿಹೋಗ ಬಾರೆಂದು ನಿರ್ಧರಿಸಿ ಅವರಿಗೆ ಸಹಾಯ ಮಾಡುತ್ತಾಳೆ. ವಿಧವಾವಿವಾಹದ ಮೇಲೆ ಬೆಳಕು ಚೆಲ್ಲುವ ಈ ಕಥೆಯು ಸಮಾಜದಲ್ಲಿ ಎಲ್ಲರಿಗೂ ಸುಂದರವಾಗಿ ಬದಕಲು ಹಕ್ಕಿದೆ ಎಂಬುದನ್ನು ತೋರಿಸುತ್ತದೆ.

**'ಹಾಲು ಕೆಂಪಾಯಿತು'**: ದೇವರಾಜ ಮಹಾರಾಜ ವಿದ್ಯಾಸಾಗರರಾವ್ ಅವರ ಈ ಕಥೆಯು ಮೇಲ್ವರ್ಗದ ಶ್ರೀಮಂತರು ತಮ್ಮ ಮಕ್ಕಳ ಉಳಿವಿಗಾಗಿ ಕೆಳವರ್ಗದ ಮಕ್ಕಳನ್ನು ಹೇಗೆ ಬಲಿ ತೆಗೆದುಕೊಂಡು ಶೋಷಿಸುತ್ತಾರೆ ಎಂಬುದನ್ನು ನೈಜವಾಗಿ ಚಿತ್ರಿಸುತ್ತ ಈ ಕಥೆಯಲ್ಲಿ ಬರುವ ಕೆಳವರ್ಗದ ಮಡಿವಾಳರ ಮಲ್ಲಮ್ಮ ಹತ್ತು ದಿನದ ಹಸಿಬಾಣಂತಿ. ಮನೆಯಲ್ಲಿ ದುಡಿಯುವ ಗಂಡ ಕಾಲು ಮುರಿದುಕೊಂಡು ಬಿದ್ದಿರುವನು. ಮನೆಯಲ್ಲಿ ಚಿಕ್ಕ ಚಿಕ್ಕ ಮಕ್ಕಳು ಹಸಿವಿನಿಂದ ನರಳುತ್ತಿವೆ. ಮಕ್ಕಳ ಹೊಟ್ಟೆಗೆ ಅನ್ನ ಹಾಕುವ ಸಲುವಾಗಿ ಹತ್ತು ದಿನದ ಹಸಿಬಾಣಂತಿಯಾದ ಮಲ್ಲಮ್ಮ ಊರ ಬಟ್ಟೆಗಳನ್ನು ತೆಗೆದುಕೊಂಡು ಹಳ್ಳಕ್ಕೆ ಬಟ್ಟೆ ಗಂಟು ಹೊತ್ತುಕೊಂಡು ಹೋಗುವಾಗ ಹಸಿವಿನಿಂದ ತಲೆ ತಿರುಗಿ ಬೀಳುತ್ತಾಳೆ. ತಲೆಯ

ತುಂಬಾ ಗಂಡನ ಕಾಯಿಲೆ ವಾಸಿ ಮಾಡುವ ಔಷಧಿ ಖರ್ಚಿಗೆ ಹಣ ಹೊಂದಿಸುವ ಚಿಂತೆ ಅವಳನ್ನು ಕಾಡುತ್ತಿರುತ್ತದೆ. ಇಂತಹ ಅಸಹಾಯಕ ಪರಿಸ್ಥಿತಿಯ ಲಾಭ ಪಡೆಯಲು ಆಕೆ ಕೆಲಸ ಮಾಡುವ ಮನೆಯ ಯಜಮಾನಿ ಯೋಚಿಸುತ್ತಾಳೆ. ತನ್ನ ಎದೆಯಲ್ಲಿ ಹಾಲಿಲ್ಲ. ನನ್ನ ಮಗನಿಗೆ ದಿನಾಲು ನೀನು ಹಾಲು ಕೊಡುವುದಾದರೆ ನಾನು ನಿನ್ನ ಕಷ್ಟಕ್ಕೆ ಸಹಾಯ ಮಾಡುತ್ತೇನೆ ಎಂದು ಹೇಳಿ ಹಣವನ್ನು ಕೊಡುತ್ತಾಳೆ. ತನ್ನ ಮಗುವಿಗೆ ಹಾಲು ಕುಡಿಸಿದರೆಲ್ಲಿ ಒಡತಿಯ ಮಗನಿಗೆ ಹಾಲಿನ ಕೊರತೆ ಕಾಡುತ್ತೆ ಎಂದು ತನ್ನ ಹಸು ಕಂದನಿಗೆ ಹಾಲನ್ನು ಕೊಡದೆ ಕಡೆಗಾಣಿಸುತ್ತಾಳೆ. ಜೋಲಿಯಲ್ಲಿ ಆ ಕೂಸು ಹಗಲು ರಾತ್ರಿ ಹಸಿವಿನಿಂದ ನರಳಿ ಅಳುವುದನ್ನು ಕೇಳಲು ಆಕೆಗೆ ಗಂಡನಿಗೆ ಸಾಕಾಗುತ್ತದೆ. ಆದರೆ ಏನೂ ಮಾಡದ ಅಸಹಾಯಕ ಸ್ಥಿತಿಯಲ್ಲಿರುವ ಮಲ್ಲಮ್ಮ ಬಹಳ ಕಠಿಣ ಮನಸ್ಕಳಾಗಿ ಸಹಿಸಿಕೊಳ್ಳುತ್ತಾಳೆ ದಿನದಿಂದ ದಿನಕ್ಕೆ ಆಕೆಯ ಕೂಸು ಸೊರಗಿ ಸಾಯುವ ಸ್ಥಿತಿ ತಲುಪುತ್ತದೆ. ಒಂದು ದಿನ ಒಡತಿಯ ಮಗುವಿಗೆ ಹಾಲು ಕುಡಿಸುವ ಸಂದರ್ಭದಲ್ಲಿ ಆಕೆಗೆ ತನ್ನ ಕಂದನ ದೀನಮುಖ ಮನಸ್ಸಿನಲ್ಲಿ ಮೂಡಿ ಆಕೆ ಓಡಿ ಮಗನ ಹತ್ತಿರ ಬರುವ ಸಂದರ್ಭದಲ್ಲಿ ಮೆಟ್ಟಿಲಿನ ಮೇಲಿಂದ ಬಿದ್ದು ಎಚ್ಚರ ತಪ್ಪುತ್ತಾಳೆ. ಇತ್ತ ಆಕೆಯ ಕೂಸು ಅಸು ನೀಗುತ್ತದೆ. ಬಡವರ ಬದುಕಿನ ದಾರುಣ ಚಿತ್ರಣ ಮತ್ತು ಶ್ರೀಮಂತರ ಹಣದ ಮೋಜು ಎರಡರ ವಿಡಂಬನೆಯಂತಿದೆ ಈ ಕಥೆ[೨](ಚಿನ್ನದ ತೆನೆ, ಪು. ೩೦೭-೩೧೨).

**'ಯಾಷ್ ಟ್ರೇ'** ಚಾಗಂಟಿ ತುಲಸಿಯವರ ಕಥೆ. ಈ ಕಥೆಯಲ್ಲಿ ಹೆಣ್ಣಿನ ಸೂಕ್ಷ್ಮ ಸಂವೇದನೆಯು ಗಂಡಿನ ನಡವಳಿಕೆಯಿಂದ ಎಷ್ಟು ಘಾಸಿಗೊಳ್ಳುತ್ತದೆ ಎಂದರೆ ಮತ್ತೆ ಅವುಗಳನ್ನು ಸರಿಪಡಿಸಲಾರದಷ್ಟು ಭಾವನೆಗಳು ನಾಶವಾಗಿಹೋಗುತ್ತವೆ. ಈ ಕಥೆಯ ನಾಯಕಿ ಕಾಲೇಜೊಂದರಲ್ಲಿ ಪ್ರಿನ್ಸಿಪಾಲ್ ಆಗಿ ಕರ್ತವ್ಯ ನಿರ್ವಹಿಸುತ್ತಿರುವ ಸುಮಾರು ನಲವತ್ತು ವರ್ಷ ವಯಸ್ಸಿನ ಒಬ್ಬ ಮಧ್ಯವಯಸ್ಕ ಸ್ತ್ರೀ. ಆಕೆಗೆ ಮದುವೆ ವಯಸ್ಸಿನಲ್ಲಿ ಶೇಖರ್ ಎನ್ನುವ ವ್ಯಕ್ತಿಯೊಂದಿಗೆ ಮದುವೆ ಗೊತ್ತಾಗಿರುತ್ತದೆ. ಆದರೆ ಹಣದ ಆಮಿಷಕ್ಕೆ, ವಿದೇಶಿ ವಾಸಕ್ಕೆ ಮನಸೋತ ಆತ ಆಕೆಯನ್ನು ತಿರಸ್ಕರಿಸಿ ಬೇರೊಬ್ಬಳನ್ನು ವಿವಾಹವಾಗಿ ವಿದೇಶದಲ್ಲಿ ನೆಲಸಿರುತ್ತಾನೆ. ಸುಮಾರು ಹದಿನೈದು ವರ್ಷಗಳ ನಂತರ ತನ್ನ ಮೊದಲನೆಯ ಹೆಂಡತಿ ತೀರಿಕೊಂಡಾಗ ಒಂದು ಮಗುವಿನ ಜೊತೆ ಸ್ವದೇಶಕ್ಕೆ ಮರಳುತ್ತಾನೆ. ನಂತರ ಆತ ಈ ಕಥಾನಾಯಕಿಯನ್ನು ಆಕೆಯ ಮನೆಯಲ್ಲಿ ಭೇಟಿಯಾಗುತ್ತಾನೆ. ಸಿಗರೇಟು ಸೇದುವ ಹವ್ಯಾಸ ಇರುವ ಆತ ಆಷ್ ಟ್ರೇಗಾಗಿ ಹುಡುಕಾಡಿದಾಗ 'ನಮ್ಮ ಮನೆಯಲ್ಲಿ ಯಾಷ್ ಟ್ರೇ ಅವಶ್ಯಕತೆ ಇಲ್ಲ. ಆದ್ದರಿಂದ ಅದನ್ನು ಇಟ್ಟಿಲ್ಲ' ಎನ್ನುತ್ತಾಳೆ. ನಂತರ ಆತ 'ಈಗ ಅದನ್ನು ಇಡಬಹುದಲ್ಲಾ' ಎಂದು ಕೇಳಿದಾಗ 'ನಮ್ಮ ಮನೆ ಚಿಕ್ಕದು ಯಾಷ್ ಟ್ರೇ ಇಡಲು ಜಾಗವಿಲ್ಲ' ಎಂದು

ಪರೋಕ್ಷವಾಗಿ ಆತನನ್ನು ತಿರಸ್ಕರಿಸುತ್ತಾಳೆ. ಶೇಖರ್ ಯಾವತ್ತೂ ಬದಲಾಗಿಲ್ಲ ಮತ್ತು ತನ್ನ ಸ್ವಾರ್ಥಕ್ಕೋಸ್ಕರ ನನ್ನನ್ನು ಬಯಸುತ್ತಿದ್ದಾನೆ ಎಂದು ಅವನನ್ನು ತಿರಸ್ಕರಿಸುತ್ತಾಳೆ. ಹೆಣ್ಣು ಮತ್ತೆ ಮತ್ತೆ ಇನ್ನೊಬ್ಬರ ಸ್ವಾರ್ಥಕ್ಕೆ ಬಲಿಯಾಗದ ವೈಚಾರಿಕತೆಯಿಂದ, ಬೌದ್ಧಿಕತೆಯಿಂದ ಗಂಡಿಗಿಂತ ಸುಂದರವಾಗಿ ಬದುಕಬಲ್ಲಳು ಎಂಬುದನ್ನು ತೋರಿಸಿಕೊಡುತ್ತಾಳೆ. ಇದು ಮಹಿಳಾ ಓದುಗರಲ್ಲಿ ಬದುಕನ್ನು ಹೇಗೆ ಉನ್ನತೀಕರಿಸಿಕೊಳ್ಳಬಹುದು ಎಂಬುದನ್ನು ತೋರಿಸಿಕೊಡುವ ಕಥೆಯಾಗಿದೆ.[೪]

**'ದುಃಖ"** ಬಿಲ್ಲಾ ಅವರು ಬರೆದಿರುವ ಈ ಕಥೆ 'ಹೆಣ್ಣು ಗಂಡಸಿನಂತೆ ಇರಬಾರದು ಹೆಣ್ಣು ಹೆಣ್ಣಿನಂತೇ ಇರಬೇಕು' ಎಂಬುದನ್ನು ಪ್ರತಿಪಾದಿಸುತ್ತದೆ. ಹೆಣ್ಣಿನ ಒಳಗೆ ಇರುವ ಗಂಡಿನ ವ್ಯಕ್ತಿತ್ವದ ಗಡಸುತನ, ಒರಟುತನ, ಧೈರ್ಯ, ಅತಿಯಾದ ಚಟುವಟಿಕೆ, ಗಟ್ಟಿತನ, ಶಕ್ತಿ ಸಾಮರ್ಥ್ಯ ಇವು ಯಾವುವೂ ಹೆಣ್ಣಿಗೆ ಒಪ್ಪದ ಗುಣಗಳು. ಆದರೆ ಈ ಕಥಾನಾಯಕಿ ಗಂಡಿನ ಎಲ್ಲಾ ಗುಣವುಳ್ಳ ಹೆಣ್ಣು. ಆಕೆಯ ಎತ್ತರವು ಸಾಮಾನ್ಯ ಸ್ತ್ರೀಯರಿಗಿಂತ ಹೆಚ್ಚು. ಶಕ್ತಿ ಸಾಮರ್ಥ್ಯ ಆಕೆಗೆ ಹುಟ್ಟಿನಿಂದ ಬಂದ ಗುಣ. ಅವಳ ಎತ್ತರದ ಹಾಗೆ ಅವಳ ಸ್ವಭಾವವು ಹಾಗೆಯೇ. ಆಕೆಗೆ ನಡೆಯುವುದು ಗೊತ್ತಿಲ್ಲ. ಓಡುವುದು, ಜಿಗಿಯುವುದು, ಹಾರುವುದು ಅವಳ ಅಭ್ಯಾಸ. ಬಾಲ್ಯದಿಂದಲೂ ಹೀಗೆಯೇ. ಆದರೆ ಆಕೆಯ ಈ ಸ್ವಭಾವ ಆಕೆಯ ತಂದೆ ತಾಯಿ ಬಂಧು ಬಳಗ ಯಾರಿಗೂ ಸರಿ ಕಾಣಲಿಲ್ಲ. ಕುಂತರೂ ತಪ್ಪು, ನಿಂತರು ತಪ್ಪು ಹೆಣ್ಣಿನಂತೆ ಇರು ಎಂಬ ಸಲಹೆಗಳು ಹೆಜ್ಜೆ ಹೆಜ್ಜೆಗೆ ಸಿಗಲಾರಂಭಿಸಿದವು. ಕೊನೆಗೆ ಹೇಗೋ ಹಟದಿಂದ ಕಾಲೇಜು ಸೇರಿ ಅಲ್ಪ ಸ್ವಲ್ಪ ಓದಿ ಮನೆಯವರ ವಿರೋಧದ ನಡುವೆಯೂ ಕೆಲಸಕ್ಕೆ ಸೇರುತ್ತಾಳೆ.

ಒಂದು ಒಳ್ಳೆಯ ಮುಹೂರ್ತದಲ್ಲಿ ಆಕೆಗೆ ಒಳ್ಳೆಯ ಲೆಕ್ಚರರ್ ಹುಡುಗನು ಸಿಕ್ಕು ಮದುವೆ ಯಾಗುತ್ತದೆ. ಮದುವೆಯ ನಂತರ ಆಕೆಯ ಅತಿಯಾದ ಚಟುವಟಿಕೆ, ಕ್ರಿಯಾಶೀಲತೆ, ಕುಂದದ ಉತ್ಸಾಹ ಇವೆಲ್ಲಾ ಆಕೆಯ ಗಂಡನಿಗೆ ಸರಿಬರುವುದಿಲ್ಲ. ತನಗಿಂತಲೂ ತನ್ನ ಹೆಂಡತಿ ಹೆಚ್ಚು ಶಕ್ತಿವಂತಳು ಎನ್ನುವ ಸ್ವಭಾವ ಅವನಿಗೆ ಹಿಡಿಸದು. ಅವನ ಮೇಲ್ ಕಾಂಪ್ಲೆಕ್ಸ್ ಆಕೆಯನ್ನು, ಆಕೆಯ ಸ್ವಭಾವವನ್ನು ಒಪ್ಪುವುದಿಲ್ಲ. ಮನೆಯಲ್ಲಿ ಕಿರಿಕಿರಿ ಪ್ರಾರಂಭ ವಾಗುತ್ತದೆ. ಆಕೆಯ ಆರ್ಥಿಕ ಮತ್ತು ದೈಹಿಕ ಶಕ್ತಿಯನ್ನು ಕುಂದಿಸಲು ಆಕೆಯೊಡನೆ ದಿನಾಲು ಜಗಳ ಪ್ರಾರಂಭಿಸುತ್ತಾನೆ ಆಕೆ ಏನು ಮಾಡಿದರೂ ತಪ್ಪು. ಇದರಿಂದ ಬೇಸತ್ತ ಆಕೆ ಮಕ್ಕಳೊಂದಿಗೆ ಬೇರೆ ಮನೆ ಮಾಡಿ ದುಡಿದು ಚೆನ್ನಾಗಿರುತ್ತಾಳೆ. ಆದರೆ ಅದನ್ನು ಸಹಿಸದ ಆಕೆಯ ಗಂಡ ಅವಳಿಂದ ಮಕ್ಕಳನ್ನು ಕಿತ್ತುಕೊಳ್ಳುತ್ತಾನೆ. ಯಾವುದಕ್ಕೂ ಸೋಲದ ಅವಳು ಮಕ್ಕಳಿಗಾಗಿ ಮರುಗುತ್ತಾಳೆ. ಅವರನ್ನು ಪಡೆಯಲು ಕಾನೂನಿನ ಮೊರೆ ಹೋಗಲು

ನಿರ್ಧರಿಸುತ್ತಾಳೆ. ಕಾನೂನು ಸಹ ಮಕ್ಕಳು ಗಂಡನಲ್ಲಿಯೇ ಇರಬೇಕು ಎಂದು ಹೇಳುತ್ತದೆ. ಆಕೆ ಹೆತ್ತವಳಿಗಿಂತ ಗಂಡನಿಗೆ ಕಾನೂನಿನಲ್ಲಿ ಮಕ್ಕಳ ಸಾಕುವ ಅಧಿಕಾರವಿದೆ ಎಂದು ತಿಳಿದು ನೊಂದುಕೊಳ್ಳುತ್ತಾಳೆ. ಮಕ್ಕಳನ್ನು ಪಡೆಯಲು ಎಷ್ಟೇ ಕಷ್ಟವಾದರೂ ಕಾನೂನಿನ ಸಮರಕ್ಕೆ ಸಜ್ಜಾಗುತ್ತಾಳೆ. ಈ ಕಥೆಯು ಮಹಿಳೆಯಲ್ಲಿರುವ ಛಲ ಗಂಡಿನಂತೆ ತಾನು ಸಮರ್ಥನಾಗಿ ಬಾಳಬೇಕು ಎಂಬ ಆಶಯವನ್ನು ಹೃದಯ ತಟ್ಟುವಂತೆ ಈ ಕಥೆ ಚಿತ್ರಿಸುತ್ತದೆ.

**೫.೫. ನಗರ ನೇಪಥ್ಯದ ಕಥೆಗಳು**

ಈ ನಗರ ನೇಪಥ್ಯದ ಕತೆಗಳಲ್ಲಿ ಅನುವಾದಕರು ನಗರ ಪ್ರದೇಶದಲ್ಲಿ ನಡೆಯುವ ಅನ್ಯಾಯಗಳನ್ನು, ಬಡವರನ್ನು ಶೋಷಿಸುವ ಶ್ರೀಮಂತರ ಅನೇಕ ಕ್ರೌರ್ಯದ ಮುಖಗಳನ್ನು ಪರಿಚಯಿಸಿದ್ದಾರೆ. ಹೆಣ್ಣು ಅಥವಾ ಗಂಡು ಯಾರೇ ಆಗಲಿ ಹಣಕ್ಕಾಗಿ ತಮ್ಮ ಸ್ವಾರ್ಥಲಾಭಕ್ಕಾಗಿ ದುರ್ಬಲರನ್ನು ಹೇಗೆ ಶೋಷಣೆ ಮಾಡುತ್ತಾರೆ ಎಂಬುದನ್ನು ಬಿಂಬಿಸುವ ಕಥೆಗಳನ್ನು ಕುಂ.ವೀ. ಅವರು ಇಲ್ಲಿ ಅನುವಾದಿಸಿದ್ದಾರೆ. ಇವರು ಗ್ರಾಮೀಣ ಭಾಗದ ಪ್ರಾದೇಶಿಕ ಭಾಷೆಯಿಂದ ಗ್ರಾಮಗಳ ಕಥೆಯನ್ನು ಸಮರ್ಥವಾಗಿ ಅನುವಾದಿಸಿದಂತೆ ನಗರ ಪ್ರದೇಶದ ಕತೆಗಳನ್ನು ಅನುವಾದ ಮಾಡಿದಾಗ ಅವರ ಭಾಷೆ ನಗರದ ಭಾಷೆಯನ್ನು ಅನುಕರಿಸುವುದರ ಮೂಲಕ ಸಮರ್ಥ ಅನುವಾದಕರಾಗಿ ಕಾಣಿಸಿ ಕೊಳ್ಳುತ್ತಾರೆ.

**'ಕಣ್ಣೀರಿನ ಬೆಲೆ ಎಷ್ಟು':** ಡಿ. ಕಾಮೇಶ್ವರಿ ಬರೆದಿರುವ ಈ ಕಥೆಯಲ್ಲಿ ನಾಯಕಿ 'ಸರೋಜಿನಿದೇವಿ' ಮೆಟರ್ನಿಟಿ ಡಾಕ್ಟರ್ ನಗರದಲ್ಲೇ ಅತ್ಯಂತ ಪ್ರಸಿದ್ಧಿ ಹೊಂದಿದ ಡಾಕ್ಟರ್. ಇಂತಹ ಡಾಕ್ಟರ್ ದಿನಾಲು ನೂರಾರು ರೋಗಿಗಳನ್ನು ನೋಡಿ ಅವರ ಹತ್ತಿರ ನಯವಾಗಿ ಮಾತನಾಡಿ ಅವರನ್ನು ನಂಬಿಸಿ ಹಣವನ್ನು ಸುಲಿಯುವ ಧನಪಿಶಾಚಿ ಹಣದ ಮುಂದೆ ಈಕೆಯಲ್ಲಿ ಮಾನವತೆಯ ಲವಲೇಶವೂ ಕೆಲಸ ಮಾಡುವುದಿಲ್ಲ. ಇಂತಹ ಡಾಕ್ಟರ್ ಹತ್ತಿರ ಆಕೆಯ ಮನೆಯ ಕೆಲಸದಾಳು ರಂಗಯ್ಯ ತನ್ನ ಹೆಂಡತಿಗೆ ಪ್ರತಿ ಹೆರಿಗೆಯಲ್ಲಿಯೂ ಕೂಸು ಸತ್ತು ಹುಟ್ಟುತ್ತಿರುವುದರಿಂದ ಈ ಸಾರಿ ಈ ಪ್ರಸಿದ್ಧ ಡಾಕ್ಟ್ರಮ್ಮನ ಕಾಡಿ ಬೇಡಿ "ಅಮ್ಮ ಹೇಗಾದರೂ ಮಾಡಿ ಈ ಸಾರಿ ನನ್ನ ಹೆಂಡತಿಗೆ ನೀವೇ ಹೆರಿಗೆ ಮಾಡಿಸಿ ಈ ಬಡವನನ್ನು ಕಾಪಾಡಿ" ಎಂದು ಕೇಳಿಕೊಂಡಿರುತ್ತಾನೆ. ಆಕೆ ಅನಿವಾರ್ಯವಾಗಿ ಒಪ್ಪಿಕೊಂಡಿರುತ್ತಾಳೆ. ಅದೇ ಸಂದರ್ಭದಲ್ಲಿ ಆಕೆಯ ಆಸ್ಪತ್ರೆಯಲ್ಲಿ ಶ್ರೀಮಂತ ದಂಪತಿಗಳು ತಮ್ಮ ಗರ್ಭಿಣಿ ಮಗಳನ್ನು ಹೆರಿಗೆ ಮಾಡಿಸಲು ಕರೆದುಕೊಂಡು ಬರುತ್ತಾರೆ. ರಂಗಯ್ಯನ ಹೆಂಡತಿಗೂ ಈ ಶ್ರೀಮಂತರ ಮಗಳಿಗೂ ಏಕಕಾಲಕ್ಕೆ ಹೆರಿಗೆ ನೋವು ಕಾಣಿಸಿಕೊಳ್ಳುತ್ತದೆ. ಡಾಕ್ಟರಮ್ಮ ಶ್ರೀಮಂತರ ಮಗಳಿಗೆ ಹೆಚ್ಚಿನ ಗಮನ ಹರಿಸಿ ರಂಗಯ್ಯನ ಹೆಂಡತಿಯನ್ನು ಸರಿಯಾಗಿ ವಿಚಾರಿಸುವುದಿಲ್ಲ.

ಆದರೂ ದೈವಾನುಗ್ರಹದಿಂದ ರಂಗಯ್ಯನ ಹೆಂಡತಿ ಗಂಡು ಕೂಸನ್ನು ಹಡೆಯುತ್ತಾಳೆ. ಅದು ಆರೋಗ್ಯವಾಗಿ ಹುಟ್ಟುತ್ತದೆ. ಆದರೆ ಶ್ರೀಮಂತನ ಮಗಳ ಕೂಸು ಸತ್ತು ಹುಟ್ಟುತ್ತದೆ. ಡಾಕ್ಟರಮ್ಮ ಶ್ರೀಮಂತರನ್ನು ಮೆಚ್ಚಿಸಲು ಹೆಚ್ಚಿನ ಹಣವನ್ನು ಸುಲಿಯುವ ದುರುದ್ದೇಶದಿಂದ ರಂಗಯ್ಯನ ಮಗನನ್ನು ಆಕೆಯ ಪಕ್ಕಕ್ಕೆ ತೆಗೆದುಕೊಂಡು ಹೋಗಿ ಮಲಗಿಸಿ ಸತ್ತಕೂಸನ್ನು ರಂಗಯ್ಯನ ಹೆಂಡತಿಯ ಪಕ್ಕದಲ್ಲಿ ಹಾಕುತ್ತಾಳೆ. ನಂತರ ಆ ಶ್ರೀಮಂತರು ಕೂಸನ್ನು ನೋಡಿ ಡಾಕ್ಟ್ರನ್ನು ಕರೆದು "ನಮಗೆ ಈ ಮಗು ಬೇಡ. ಯಾವುದಾದರೂ ಅನಾಥಾಶ್ರಮಕ್ಕೆ ಕೊಡಿ. ನಮ್ಮ ಮಗಳಿಗೆ ಇನ್ನೂ ಮದುವೆಯಾಗಿಲ್ಲ" ಎಂದು ಹೇಳಿದಾಗ ಆ ಡಾಕ್ಟ್ರಮ್ಮ ಧರೆಗಿಳಿದು ಹೋಗುತ್ತಾಳೆ. ಹಣದ ಆಸೆಗೆ ಘೋರ ಪಾಪವನ್ನು ಮಾಡಿ ರಂಗಯ್ಯನಿಗೆ ತುಂಬಾ ಅನ್ಯಾಯ ಮಾಡುತ್ತಾಳೆ. ದೇವರು ಆಕೆಯನ್ನು ಕ್ಷಮಿಸಲಾರ. ನಗರದ ಆಸ್ಪತ್ರೆಗಳಲ್ಲಿ ನಡೆಯುವ ಅನ್ಯಾಯದ, ಮೋಸದ, ವಂಚನೆಯ ಮುಖಗಳ ಅನಾವರಣವನ್ನು ಮಾರ್ಮಿಕವಾಗಿ ಈ ಕಥೆಯಲ್ಲಿ ಮೂಡಿಸಿದ್ದಾರೆ[೫] (ಚಿನ್ನದ ತೆನೆ, ಪು. ೨೮೦-೮೧).

ನಗರದ ಅನ್ಯಾಯವನ್ನೇ ನ್ಯಾಯಪರವಾಗಿ ವಿತರಿಸುವ ಇಂತ ವಿತರಣೆಯಿಂದಾಗಿ ತನ್ನ ಆತ್ಮವೇ ತನ್ನ ವಿರುದ್ಧ ಬಂಡಾಯವೆದ್ದು ಹುಚ್ಚನಾಗುವ ಮ್ಯಾಜಿಸ್ಟ್ರೇಟ್, ಶಾಸ್ತ್ರಿಯವರ 'ಮೋಕ್ಷ' ಕಥೆಯಲ್ಲಿ 'ಗವರ್ನಮೆಂಟಿಗೆ ಹುಚ್ಚು ಹಿಡಿದಿದೆ ಪಾಪ' ಎಂದು ತೀರ್ಪು ನೀಡುತ್ತಾನೆ. 'ಕುರ್ಚಿಗಳು' ಆದಿವಿಷ್ಣು ಬರೆದಿರುವ ಹಾಗೂ ಮೂಢನಂಬಿಕೆಗಳು 'ತಮಸೋಮ ಜ್ಯೋತಿರ್ಗಮಯ' ವಾಸಿರೆಡಿ ಸೀತಾದೇವಿಯವರ ಕಥೆ. ಇವೆಲ್ಲ ನಗರ ಪ್ರದೇಶದಲ್ಲಿ ನಡೆಯುವ ಅನ್ಯಾಯವನ್ನು ಬಿಂಬಿಸುವಂತಹ ಕಥೆಗಳು. ಉಚಿತ ಪಾಸುಗಳ ಗೋಜಲಿನಿಂದ ಮಧ್ಯಮವರ್ಗದ ಮನುಷ್ಯ ಹೊರಬರುವುದನ್ನು 'ಸರ್ಕಸ್'(ಯರ್ರಂಶೆಟ್ಟಿ ತಾಯಿ) ವಿವರಿಸುತ್ತದೆ. ವೈದ್ಯ ಋಷಿಯಾ ದಲ್ಲಿ ಆತನ ವಿಜ್ಞಾನ ಹೇಗೆ ಹೊಂದಾಣಿಕೆಯಾಗುವುದು, ಮನಸ್ಸಿಗೂ ಶರೀರಕ್ಕೂ ಇರುವ ಸಂಬಂಧ ಯಾವ ರೀತಿಯದು ಎಂಬುದನ್ನು ವಾಕಾಟಿ ಪಾಂಡುರಂಗರಾವ್ ಇವರ 'ಪ್ಲಸಿಬೊ' ಕಥೆ ನಿರೂಪಿಸುತ್ತದೆ. ವೈದ್ಯಕೀಯ ವ್ಯವಸ್ಥೆ ವ್ಯಾಪಾರವಾದಲ್ಲಿ, ಆಸ್ಪತ್ರೆಗಳು ಹೋಟೆಲ್ಲುಗಳಾದಲ್ಲಿ ವೈದ್ಯರು ರೋಗಿಯ ಪ್ರಾಣಕ್ಕಿಂತ ಹಣವೇ ಮುಖ್ಯವೆಂದು ಭಾವಿಸಿದಲ್ಲಿ ಆಗುವ ಅನಾಹುತಗಳನ್ನು, ಆಸ್ಪತ್ರೆಯ ಶವವ್ಯಾಪಾರವನ್ನು ವಿವಿಧ ಕೋನಗಳ ಮೂಲಕ ವಿವರಿಸುವ ಪ್ರಯತ್ನವನ್ನು 'ಐದು ನಕ್ಷತ್ರಗಳು' ಅಬ್ಬೂರಿ ಛಾಯಾದೇವಿ ಕತೆ ಮಾಡುತ್ತದೆ. ಬೀನಾದೇವಿ ಅವರ 'ಹಣ' ಕತೆ, ಡಿ. ಕಾಮೇಶ್ವರಿ ಅವರ 'ಕಣ್ಣೀರಿನ ಬೆಲೆ ಎಷ್ಟು' ಕಥೆಗಳಲ್ಲಿ ಕಾಣಬಹುದಾಗಿದೆ. ಒಟ್ಟಾರೆ ಈ ಮೂರು ಅನುವಾದ ಕಥೆಗಳಲ್ಲಿ ಕಂಡುಬರುವ ಕಥಾವಸ್ತುಗಳು ಹೆಚ್ಚಾಗಿ ಜಮೀನ್ದಾರಿ ಪದ್ಧತಿ ವಿರುದ್ಧ ಹೋರಾಡು ಕಥೆಗಳ ವರ್ಗಸಂಘರ್ಷದ ಕತೆಗಳು, ಶೋಷಣೆಯ ಕಥೆಗಳು.

ತಮಗಾಗುವ ಅನ್ಯಾಯದ ವಿರುದ್ಧ ಬಂಡೇಳುವ ಸಾಮಾಜಿಕ ನ್ಯಾಯಕ್ಕಾಗಿ ಹೋರಾಡುವ ಪಾತ್ರಗಳ ಮೂಲಕ ಸಮಾಜದಲ್ಲಿ ಬದಲಾವಣೆ ತರಲು ಪ್ರಯತ್ನಿಸುವಂತಹ ಕಥೆಗಳನ್ನು ಕಾಣಬಹುದು. ಸ್ತ್ರೀಯರ ಅನೇಕ ಸಮಸ್ಯೆಗಳಾದ ಬಾಲ್ಯವಿವಾಹ, ವಿಧವಾ ವಿವಾಹ, ಆರ್ಥಿಕ ಸ್ವಾತಂತ್ರ್ಯ ಪಡೆಯಲು ಹೋರಾಡುವ ಮದುವೆಯೆಂಬ ಬಂಧನ ಕಿತ್ತು ಬದುಕುವಂತಹ ಕಥೆಗಳನ್ನು ಕುಂ.ವೀ. ಅವರು ಹೆಚ್ಚಾಗಿ ಅನುವಾದಿಸಿರುವುದನ್ನು ಕಾಣಬಹುದಾಗಿದೆ.

**"ತನ್ನ ಮಾರ್ಗ" – ಅಬ್ಬೂರಿ ಛಾಯಾದೇವಿ, ಕನ್ನಡ ಅನುವಾದ: ಕುಂ. ವೀರಭದ್ರಪ್ಪ**

"ತನ್ನ ಮಾರ್ಗ" ಕೃತಿಯು ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ ತೆಲುಗು ಕಥಾಸಂಕಲನವಾಗಿದೆ. ತೆಲುಗು ಕಥಾಸಾಹಿತ್ಯಕ್ಕೆ ಹಲವು ದಶಕಗಳಿಂದ ಉತ್ತಮ ಕಥೆಗಳನ್ನು ಅಬ್ಬೂರಿ ಛಾಯಾದೇವಿ ನೀಡುತ್ತಾ ಬಂದಿದ್ದಾರೆ. ಇವರ ಪ್ರತಿಯೊಂದು ಕತೆಯೂ ಭ್ರಷ್ಟ ವ್ಯವಸ್ಥೆಗೆ ಕನ್ನಡಿ ಹಿಡಿದಂತೆ ಗೋಚರಿಸುತ್ತದೆ. ಲಿಂಗ ಅಸಮಾನತೆಯನ್ನು ತಮ್ಮ ಕಥೆಗಳ ಉದ್ದಕ್ಕೂ ಪರಿಚಯಿಸುತ್ತಾ ಬಂದಿದ್ದಾರೆ. ಇಲ್ಲಿನ ಕಥೆಗಳ ಸ್ತ್ರೀ ಪಾತ್ರಗಳು ಕೌಟುಂಬಿಕ ಚೌಕಟ್ಟಿನೊಳಗಿದ್ದು ಸಾಮಾಜಿಕ ಸಮಸ್ಯೆಗಳಿಗೆ ಅರ್ಥಪೂರ್ಣ ಪರಿಹಾರಗಳನ್ನು ಶೋಧಿಸುತ್ತವೆ ಪುರುಷಪ್ರಧಾನ ಸಮಾಜದೊಳಗಿನ ಮಹಿಳೆಯ ವೈಯಕ್ತಿಕ ಕನಸುಗಳನ್ನು, ತಲ್ಲಣಗಳನ್ನು, ಭಾವನೆಗಳ ತುಮುಲ ತಣ್ಣನೆಯ ಪ್ರತಿಭಟನೆಯನ್ನು ಪ್ರಕಟಿಸುವ ಕಥೆಗಳು ಇಲ್ಲಿವೆ. ಇಲ್ಲಿಯ ಕತೆಗಳಲ್ಲಿ ಕಂಡುಬರುವ ಸರಳೀಕೃತ ಪರಿಹಾರವಾದರೂ ಗಟ್ಟಿನಿರ್ಧಾರದ ಧ್ವನಿ ಕತೆಗಳಲ್ಲಿ ಕಂಡುಬರುತ್ತದೆ. ಪತಿ, ಪತ್ನಿ, ಸಹೋದರ–ಸಹೋದರಿ, ಅತ್ತೆ– ಸೊಸೆ, ವಿಧುರ–ವಿಧವೆ ಹೀಗೆ ಅನೇಕ ಮುಖಾಮುಖಿಗಳ ಮೂಲಕ ಇಲ್ಲಿನ ಸ್ತ್ರೀ ಸಫಲ ಸಾಮಾಜಿಕ ವ್ಯವಸ್ಥೆಗಾಗಿ ಕನಸು ಕಾಣುತ್ತಾಳೆ. ಈ ಕಾರಣಕ್ಕಾಗಿ ಅಬ್ಬೂರಿ ಛಾಯಾದೇವಿಯವರು ಸಮಕಾಲೀನ ಸಂದರ್ಭದ ಸಂವೇದನಶೀಲ ಕಥೆಗಾರ್ತಿಯಾಗಿದ್ದಾರೆ. ತಮ್ಮ ಮೌಲಿಕ ಕಥೆಗಳ ಮೂಲಕ ಭಾಷಾತೀತವಾಗಿ ಹೆಸರು ಮಾಡಿದ್ದಾರೆ. ಛಾಯಾದೇವಿಯವರ ಕಥೆಗಳ ಅನುವಾದದ ಸಂದರ್ಭದಲ್ಲಿ ಅನುವಾದಕರು ಈ ರೀತಿ ಹೇಳುತ್ತಾರೆ. "ಈಗಾಗಲೇ ತೆಲುಗಿನಿಂದ ನೂರಾರು ಕಥೆಗಳನ್ನು ಕನ್ನಡಕ್ಕೆ ಅನುವಾದಿಸಿರುವ ನನಗೆ ಅಬ್ಬೂರಿ ಛಾಯಾದೇವಿಯವರ ಪ್ರಸ್ತುತ ಸಂಕಲನ 'ತನ್ನ ಮಾರ್ಗ'ದ ಪ್ರತಿಯೊಂದು ಕಥೆ ನೀಡಿದ ಸಂತೋಷ ಮತ್ತು ಸಹಾಯ ಅರ್ಥಪೂರ್ಣವಾದುದು. ಮುಖ್ಯವಾಗಿ ಕನ್ನಡದ ಸೃಜನಶೀಲ ಲೇಖಕರಲೊಬ್ಬನಾಗಿರುವ ನಾನು ಈ ಕಥೆಗಳ ಅನುವಾದದಿಂದ ಸಾಹಿತ್ಯದ ಅರಿವನ್ನು ಪಡೆದುಕೊಂಡಿದ್ದೇನೆ. ತಮ್ಮ ಸರಳತೆಯಿಂದಾಗಿ ಇಲ್ಲಿನ ಕಥೆಗಳು ತ್ರಾಸು ಕೊಡದೆ ಸಲೀಸಾಗಿ ಕನ್ನಡದ ಆವರಣವನ್ನು ಪ್ರವೇಶಿಸಿವೆ. ಕನ್ನಡದ ವಿಶಿಷ್ಟ ಸ್ತ್ರೀ ಧ್ವನಿಗಳ ಜೊತೆ ಜೊತೆಯಲ್ಲಿ ಇಲ್ಲಿನ ಕಥೆಗಳ ಮೂಲಕ ಛಾಯಾದೇವಿಯವರೂ ನಡೆಯಲಿರುವುದರಿಂದ ಕನ್ನಡದ ಸ್ತ್ರೀ ಸಂಬಂಧೀ ವೈಚಾರಿಕ ಮತ್ತು ಸಾಂಸ್ಕೃತಿಕ ಜಗತ್ತು ಇನ್ನಷ್ಟು ಗಟ್ಟಿಗೊಳ್ಳಲಿದೆ."[೧೬]

"ತನ್ನ ಮಾರ್ಗ"ದಲ್ಲಿರುವ ಕತೆಗಳು ಹೆಚ್ಚಾಗಿ ಉತ್ತಮಪುರುಷದಲ್ಲಿ ನಿಂತು ಬರೆದಂತಹ ಕತೆಗಳಾಗಿವೆ. ಸಮಾಜದಲ್ಲಿ ನಡೆಯುವ ಸ್ತ್ರೀಯ ಮೇಲಿನ ಶೋಷಣೆಯನ್ನು ಲೇಖಕಿ ತನ್ನ ಮೇಲೆ ಆರೋಪಿಸಿಕೊಂಡು ಬರೆದ ತಂತ್ರದಲ್ಲಿ ಕತೆಗಳು ಸಾಗುತ್ತ ಹೋಗುತ್ತವೆ. ಈ ಕಥಾ ಸಂಕಲನದ ಪ್ರಾರಂಭದ ಕತೆಯು ಸ್ತ್ರೀಯ ಮೇಲಾಗುವ ಅತ್ಯಾಚಾರ ಕುರಿತಂತಹ ಕತೆಯಾಗಿದೆ. ಆಕೆ ಆಘಾತದಿಂದ ಹೊರಬರುವ ರೀತಿಯು ಅತ್ಯಂತ ವೈಚಾರಿಕ ನೆಲೆಗಟ್ಟಿನ ಮೇಲೆ ನಿರೂಪಿತವಾದಂತಹ  ಕತೆಯಾಗಿದೆ.

**"ಪ್ರಯಾಣ"**

ಈ ಕಥೆಯಲ್ಲಿ ಕಥಾನಾಯಕಿಯಾದ ರಮಾ ತನ್ನೂರಾದ ಹೈದರಾಬಾದ್‌ನಿಂದ ತಾನು ಓದುತ್ತಿರುವ ನಗರ ವಾಲ್ಟೇರಿಗೆ ರೈಲಿನಲ್ಲಿ ಹೊರಟಿರುತ್ತಾಳೆ. ಮಾರ್ಗ ಮಧ್ಯದಲ್ಲಿ ರಾಜಮಂಡ್ರಿಯಲ್ಲಿ ಆಕೆಯ ಗೆಳತಿ ಸ್ಟೇಶನ್ನಿನಲ್ಲಿ ಕಾಣಿಸಿಕೊಂಡು ಅವಳನ್ನು ತನ್ನೂರಿಗೆ ಕರೆದುಕೊಂಡು ಹೋಗುತ್ತಾಳೆ. ಬಹಳ ದಿನಗಳ ನಂತರ ಬಾಲ್ಯಸ್ನೇಹಿತೆಯರು ಭೇಟಿಯಾದ ಕಾರಣ ಅವರು ಕೆಲವು ಬಾಲ್ಯದ ದಿನಗಳನ್ನು ಹಂಚಿಕೊಳ್ಳುತ್ತಾರೆ. ರಾತ್ರಿ ಊಟದ ನಂತರ ಎಲ್ಲರೂ ಮಲಗಿಕೊಳ್ಳುತ್ತಾರೆ. ಅರ್ಧರಾತ್ರಿಯ ಸುಮಾರಿನಲ್ಲಿ ಕಥಾನಾಯಕಿ ಯಾವುದೋ ಕನಸು ಕಾಣುತ್ತಾ ಇರಬೇಕಾದರೆ ಸ್ನೇಹಿತೆಯ ಗಂಡ ಆಕೆಯ ಮೇಲೆ ಅತ್ಯಾಚಾರವೆಸಗುತ್ತಾನೆ. ಇದರಿಂದ ತಪ್ಪಿಸಿಕೊಳ್ಳಲು ಕಥಾನಾಯಕಿ ವಿಫಲಳಾಗುತ್ತಾಳೆ. ನಂತರ ಆಕೆ ತನ್ನ ಪಯಣ ಮುಂದುವರಿಸುತ್ತಾಳೆ. ಆಕೆಯ ಸ್ನೇಹಿತೆ ಆದ ಅನಾಹುತಕ್ಕೆ ಕ್ಷಮೆ ಕೇಳುತ್ತಾಳೆ. ಆದರೆ ತನ್ನ ಗಂಡನಿಗೆ ಇದೊಂದೇ ದೌರ್ಬಲ್ಯ, ಮಿಕ್ಕ ವಿಷಯಗಳಲ್ಲಿ ಆತ ತನ್ನನ್ನು ತುಂಬಾ ಪ್ರೀತಿಸುತ್ತಾನೆ ಎಂದು ತನ್ನ ಗಂಡನನ್ನು ಸಮರ್ಥಿಸಿಕೊಳ್ಳುತ್ತಾಳೆ. ಇದರಿಂದ ರಮಾಗೆ ಮತ್ತೊಂದು ರೀತಿಯ ಆಘಾತವಾದಂತೆ ಆಗುತ್ತದೆ. ಕಾರಣ ಇಂತಹ ಮಹಿಳೆಯರು ಹೇಗೆ ಭ್ರಮೆಯಲ್ಲಿ ಬದುಕುತ್ತಾರೆ ಎಂದು ಅಚ್ಚರಿಪಡುತ್ತಾಳೆ. ನಂತರ ಪಯಣ ಮುಂದುವರಿಸಿ ಕಾಲೇಜಿಗೆ ಹೋದ ಆಕೆಗೆ ತನ್ನ ಪ್ರಿಯಕರನ ಜೊತೆ ಸ್ನೇಹದಿಂದ ಇರಲು ಸಾಧ್ಯವಾಗುವುದಿಲ್ಲ. ಆಕೆ ಒಂದು ನಿರ್ಧಾರಕ್ಕೆ ಬರುತ್ತಾಳೆ. ತಂದೆ ತಾಯಿ ನೋಡಿದ ವರ ಭಾಸ್ಕರನನ್ನು ತಿರಸ್ಕರಿಸಿ ಪ್ರಿಯಕರನಲ್ಲಿ ನಡೆದ ಘಟನೆಯನ್ನು ಹೇಳಿದಾಗ ಆತನ ಪ್ರತಿಕ್ರಿಯೆ ಬಹಳ ನಿರಾಸೆ ಉಂಟುಮಾಡುತ್ತದೆ. ಇಂತಹ ಸಂದರ್ಭದಲ್ಲಿ ಲೇಖಕಿ ರಾಮಕೃಷ್ಣ ಆಶ್ರಮವನ್ನು ಸೇರಲು ನಿರ್ಧರಿಸುತ್ತಾಳೆ. ಆದರೆ ತಂದೆ ತಾಯಿ ನೋಡಿದ ವರ ಭಾಸ್ಕರ ಆಕೆಯ ಮನಸ್ಸಿನ ಗೊಂದಲ ಪರಿಹರಿಸುತ್ತಾನೆ. ಅಪಘಾತವಾದರೆ ವಾಹನವನ್ನು ರಿಪೇರಿ ಮಾಡಿಸಿ, ಇಲ್ಲವೆ ಬೇರೆ ವ್ಯವಸ್ಥೆ ಮಾಡಿಸಿ ಪಯಣ ಮುಂದುವರಿಸುವುದಿಲ್ಲವೆ? ಜೀವನವು ಹಾಗೆಯೇ ಎಂದು ಹೇಳುತ್ತಾ ಮತ್ತೆ ಆಕೆಗೆ ಆಸರೆಯಾಗಿ ನಿಲ್ಲುವ ಭರವಸೆಯನ್ನು ಕೊಡುತ್ತಾನೆ. ಇಲ್ಲಿ ಲೇಖಕಿ ಕೊಡುವ ಬದುಕಿನ ವಿವರಣೆ

ಯೋಚಿಸಬೇಕಾದ ರೀತಿ ಮಹಿಳೆಗೆ ನೆಮ್ಮದಿ ನೀಡುವುದರ ಜೊತೆಗೆ ಆಕೆಗೆ ಆತ್ಮವಿಶ್ವಾಸವನ್ನು ತುಂಬುತ್ತದೆ. ಇಂತಹ ಕಥೆಗಳು ಮಹಿಳೆಯರಿಗೆ ಆದರ್ಶವೂ ಆಗುತ್ತವೆ.

**"ಮೂರು ದಿನದ ಸಂತೆ"**

ಈ ಕಥೆಯಲ್ಲಿ ಮಡಿ ಮೈಲಿಗೆ ಎಂದು ಬೆಳೆದ ಹುಡುಗಿಯರಿಗೆ ಹೇಗೆ ಮಾನಸಿಕ ಖಿನ್ನತೆಯಾಗಿ ನಂಬಿಕೆಗಳು ಕಾಡುತ್ತವೆ ಎಂಬುದನ್ನು ಅತ್ಯಂತ ಸೂಕ್ಷ್ಮವಾಗಿ ಇಲ್ಲಿ ಲೇಖಕಿ ತಿಳಿಸಿಕೊಡುತ್ತಾರೆ. ಕರ್ಮಠ ಬ್ರಹ್ಮಣರ ಕುಟುಂಬದಲ್ಲಿ ಹುಟ್ಟಿ ಬೆಳೆದ ಹುಡುಗಿ ಹೇಗೆ ನಿಸರ್ಗಸಹಜ ಕ್ರಿಯೆ ತಿಂಗಳಿಗೊಮ್ಮೆ ಮುಟ್ಟಾದಾಗ ಹೊರಗೆ ಕೂಡುವ ವ್ಯವಸ್ಥೆಗೆ ತಾಯಿಯಿಂದ ಶಾಸನ ರೀತಿಯಲ್ಲಿ ಪಾಲಿಸಿಕೊಂಡು ಬರುತ್ತಾಳೆ. ಇದರಿಂದ ಸಾಕಷ್ಟು ಪೇಚಿಗೆ ತೊಂದರೆಗೆ ಸಿಲುಕಿಕೊಳ್ಳುತ್ತಾಳೆ. ವಿದೇಶದಲ್ಲಿ ವ್ಯಾಸಂಗ ಮಾಡಿ ಬಂದ ಅಣ್ಣನ ಸಲಹೆಯಂತೆ ಆಧುನಿಕವಾಗಿ ಪ್ರಗತಿಪರ ಧೋರಣೆಯಲ್ಲಿ ಬದುಕುವ ರೀತಿಯನ್ನು ಕಲಿತುಕೊಳ್ಳುತ್ತಾಳೆ. ಆದರೆ ತನ್ನ ಗಂಡನ ಮನೆಯಲ್ಲೂ ಮಡಿಮೈಲಿಗೆ ಬಿಟ್ಟು ಸಹಜವಾಗಿ ಬದುಕುವುದನ್ನು ಗಂಡನಿಂದ ಕಲಿಯುತ್ತಾಳೆ. ತೀರ್ಥಯಾತ್ರೆಯ ನೆಪದಿಂದ ಮನೆಗೆ ತಾಯಿ ಬಂದ ಸಂದರ್ಭದಲ್ಲಿ ಗಂಡನ ಸ್ನೇಹಿತರಿಗೆ ಅತಿಥಿ ಸತ್ಕಾರ ಮಾಡಬೇಕು ಎನ್ನುವಷ್ಟರಲ್ಲಿ ಆಕೆ ಮುಟ್ಟಾಗುತ್ತಾಳೆ. ತಾಯಿ ಆಕೆಯನ್ನು ಕೋಣೆಯಲ್ಲಿ ಬಂಧಿಸುತ್ತಾಳೆ. ಆಗ ಆಕೆ ಬಾಗಿಲು ತೆಗೆಯಮ್ಮ ಬಂದವರಿಗೆ ಆಹಾರ, ತಿಂಡಿ ಕೊಡಬೇಕು ನಮ್ಮ ಮನೆಯವರು ಬಯ್ಯುತ್ತಾರೆ' ಎಂದು ಬಾಗಿಲನ್ನು ಬಡಿಯುತ್ತಾಳೆ. ಆಗ ಆಕೆಯ ಪತಿ ಆಕೆಯನ್ನು ಎಬ್ಬಿಸುತ್ತಾನೆ. 'ಏಕೆ ಏನೇನೋ ಬಡಬಡಿಸುತ್ತಿರುವಿ?' ಎಂದು ಕೇಳಿದಾಗ ವಾಸ್ತವ ಸ್ಥಿತಿಗೆ ಮರಳುತ್ತಾಳೆ. ಈ ರೀತಿ ಆಕೆಗೆ ಬಾಲ್ಯದ ಆ ಕಠಿಣ ದಿನಗಳು ಮಾನಸಿಕವಾಗಿ ಆಕೆಗೆ ಹಿಂಸೆ ಕೊಡುತ್ತವೆ. ಈ ಚಿತ್ರಣವಂತೂ ಅತ್ಯಂತ ಸಹಜವಾದ ವಾಸ್ತವದ ನೆಲೆಗಟ್ಟಿನ ಮೇಲೆ ಚಿತ್ರಿತವಾಗಿದೆ. ಸಂಪ್ರದಾಯದ ಮೌಢ್ಯ ಆಚರಣೆ ಹೇಗೆ ಹೆಣ್ಣು ಮಕ್ಕಳನ್ನು ಹಿಂಸೆ ಮಾಡುತ್ತದೆ ಎಂಬುದರ ಅತ್ಯಂತ ಸಹಜವಾಗಿ ಮೂಡಿ ಬಂದಿದೆ.

**"ಶ್ರೀಮತಿ ಉದ್ಯೋಗಸ್ಥೆ"**

ಪ್ರಸ್ತುತ ಕತೆ ಅತ್ಯಂತ ವಿಡಂಬನಾತ್ಮಕವಾಗಿ ದುಡಿಯುವ ಮಹಿಳೆಯ ಕೌಟುಂಬಿಕ ಜೀವನದ ಬಡಿದಾಟಗಳನ್ನು ಅತ್ಯಂತ ಚೆನ್ನಾಗಿ ವಿವರಿಸುತ್ತದೆ. ಉದ್ಯೋಗಸ್ಥೆ ಮತ್ತು ವಿವಾಹಿತ ಸ್ತ್ರೀಯ ಮನೆಗೆ ಒಬ್ಬ ಸಂಶೋಧನಾ ವಿದ್ಯಾರ್ಥಿ ಬರುತ್ತಾಳೆ. ದುಡಿಯುವ ಮಹಿಳೆಯ ಕೌಟುಂಬಿಕ ಜೀವನ ಸುಖವಾಗಿ ಸಾಗುತ್ತಾ ಆಕೆಯ ಸಮಸ್ಯೆಗಳು ಯಾವುವು, ಆಕೆಯ ಆಸೆ ಅಭಿಲಾಷೆಗಳು ಈಡೇರುತ್ತವೆಯೆ ಎಂಬ ಕೆಲವು ಸಿದ್ಧಮಾದರಿಯ ಪ್ರಶ್ನೆಗಳನ್ನು ಇಟ್ಟುಕೊಂಡು ಶ್ರೀಮತಿ- ಉದ್ಯೋಗಸ್ಥಳನ್ನು ಸಂದರ್ಶನ ಮಾಡುತ್ತಾಳೆ. ಪ್ರಸ್ತುತ ಉದ್ಯೋಗಸ್ಥ ಮಹಿಳೆ

ಗೃಹಿಣಿ ಮತ್ತು ಉದ್ಯೋಗ ಎರಡು ಪಾತ್ರಗಳನ್ನು ಹೇಗೆ ನಿಭಾಯಿಸುತ್ತಾಳೆ ಎನ್ನುವುದು ಆಕೆಯ ರಿಸರ್ಚ್ ಆಗಿರುತ್ತದೆ. ಆ ಸಂದರ್ಶನ ಮಾಡುವ ಹುಡುಗಿ ಬಾಲಿಶ ಪ್ರಶ್ನೆಗಳನ್ನು ಹಾಗೂ ಕೆಲವು ಉತ್ತರ ಕೊಡಲಾಗದ ಪ್ರಶ್ನೆಗಳನ್ನು ಕೇಳಿ ಉದ್ಯೋಗಸ್ಥ ಶ್ರೀಮತಿಯನ್ನು ಪೇಚಿಗೆ ಸಿಲುಕಿಸುತ್ತಾಳೆ. ನೀವು ಮದುವೆಯಾಗಿ ಎಷ್ಟು ವರ್ಷವಾಯಿತು? ನಿಮ್ಮವರಿಗೆ ನೀವು ನೌಕರಿ ಮಾಡುವುದು ಇಷ್ಟವೇ? ನಿಮ್ಮ ಅತ್ತೆ ಮಾವ ಹೇಗೆ ನಿಮ್ಮನ್ನು ನೋಡಿಕೊಳ್ಳುತ್ತಾರೆ? ನೀವು ನೌಕರಿ ಸೇರಿ ಎಷ್ಟು ವರ್ಷವಾಯಿತು? ಇದರಿಂದ ನೀವು ಸುಖವಾಗಿ ಇರುವಿರಾ? ಈ ರೀತಿ ಪ್ರಶ್ನೆಗಳಿಂದ ಲೇಖಕಿಯನ್ನು ತನ್ನ ಬದುಕಿನ ಬಗ್ಗೆ ಮರುಚಿಂತನೆ ಮಾಡುವಂತೆ, ಆಲೋಚಿಸುವಂತೆ ಮಾಡುವ ಕಥನತಂತ್ರ ಇಲ್ಲಿ ಅದ್ಭುತವಾಗಿ ವ್ಯಕ್ತವಾಗುತ್ತದೆ.

**ಉಡ್‌ರೋಜ್**

ಈ ಕಥೆಯು ಮನುಷ್ಯ ಮತ್ತು ಪ್ರಕೃತಿಯ ನಡುವಿನ ಸಂಬಂಧಗಳನ್ನು ಅತ್ಯಂತ ಮಾರ್ಮಿಕವಾಗಿ ತಿಳಿಸುತ್ತದೆ. ಈ ಕಥೆಯ ಎರಡು ಪ್ರಧಾನ ಪಾತ್ರಗಳೆಂದರೆ ಅತ್ತೆ ಮತ್ತು ಸೊಸೆ. ಅತ್ತೆಗೆ ವಯಸ್ಸಾಗಿರುವುದರಿಂದ ಹಾಗೂ ಅವರಿಗೆ ವಿಶ್ರಾಂತಿ ಕೊಡಬೇಕು ಎಂಬ ತಿಳಿವಳಿಕೆಯಿಂದ ಸೊಸೆಯು ಅವರಿಂದ ಯಾವುದೇ ಕೆಲಸ ಕಾರ್ಯಗಳನ್ನು ಮಾಡಿಸುತ್ತಿರಲಿಲ್ಲ. ದಿನಾಲು ಬಾಲ್ಕನಿಯಲ್ಲಿ ಕುಳಿತು ದಾರಿಹೋಕರನ್ನು ನೋಡುವುದು ಅಷ್ಟೆ ಆಕೆಯ ಕೆಲಸ. ಹೀಗಿರುವಾಗ ಸೊಸೆ ಒಂದು ಬಳ್ಳಿ ತಂದು ಬಾಲ್ಕನಿಗೆ ಹಬ್ಬುವಂತೆ ಗುಂಡಿ ತೆಗೆದು ಸಸಿಯನ್ನು ನಾಟಿ ಮಾಡುತ್ತಾಳೆ. ಕುತೂಹಲ ತಡೆಯದೆ ಅತ್ತೆ ಕೇಳುತ್ತಾಳೆ. ಏನು ಗಿಡ? ಯಾವ ಕಾಯಿ ಬಿಡುತ್ತವೆ ಎಂದು. ಆಗ ಸೊಸೆ ಇದರಲ್ಲಿ 'ಉಡ್‌ರೋಜ್' ಎಂಬ ಹೂಗಳು ಬಿಡುತ್ತವೆ. ಅವು ನೋಡಲು ತುಂಬಾ ಸುಂದರವಾಗಿರುತ್ತವೆ. ಆದರೆ ಅವಕ್ಕೆ ವಾಸನೆ ಇರುವುದಿಲ್ಲ ಎಂದು ಹೇಳುತ್ತಾಳೆ. ಕೆಲವು ದಿನಗಳ ನಂತರ ಆ ಬಳ್ಳಿಯು ಬೆಳೆದು ಬಾಲ್ಕನಿ ತುಂಬೆಲ್ಲಾ ಹಬ್ಬಿನಿಂತು ಹೂವುಗಳನ್ನು ಬಿಡುತ್ತದೆ. ಇದರಿಂದ ಅತ್ತೆಗೆ ಆತಂಕವಾಗುತ್ತದೆ. ತಾನು ಹೊರಪ್ರಪಂಚ ನೋಡಲು ಇರುವ ಒಂದೇ ಒಂದು ದಾರಿಯನ್ನು ಬಳ್ಳಿಯೂ ಬಂದ್ ಮಾಡುತ್ತಲ್ಲ ಎಂದು ನೊಂದುಕೊಂಡರು.

ಒಂದು ದಿವಸ ಸೊಸೆ ಮನೆಯೆಲ್ಲಾ ಸ್ವಚ್ಛ ಮಾಡಿ ಊಟದ ಟೇಬಲ್ಲಿನಲ್ಲಿ ಕೆಲವು ತಾಜಾ ಹೂವುಗಳ ಜೊತೆ ಒಣಗಿದ ಗುಲಾಬಿ ಹೂಗಳನ್ನು ಜೋಡಿಸಿದ್ದಳು. ಅವು ನೋಡಲು ಸುಂದರವಾಗಿದ್ದು ಒಂದು ರೀತಿ ವಿಚಿತ್ರವಾಗಿದ್ದವು. ಉಡ್‌ರೋಜ್ ತಾಜಾ ಹೂಗಳು ಯೌವನದ ಸಂಕೇತವಾದರೆ, ಒಣಗಿದಂತೆ ಕಾಣುವ ಈ ಗುಲಾಬಿ ಹೂಗಳು ಮುಪ್ಪಿನ ಸಂಕೇತದಂತೆ ಎಂದು ಸೊಸೆ ಹೇಳಿದಳು. ಈ ರೀತಿ ಅಲಂಕಾರ ಮಾಡುವುದಕ್ಕೆ 'ಇಕೆಬಾನಾ'

ಎಂದು ಕರೆಯುತ್ತಾರೆ ಎನ್ನುವಳು. ಅದಕ್ಕೆ ಅವರು 'ಅತ್ತೆ ಸೊಸೆ ಅಂತ ಹೇಳಬಾರದೇನೆ' ಎಂದು ತಮಾಷೆ ಮಾಡಿದರು. ಅಂದಿನಿಂದ ಆ ಬಳ್ಳಿಯ ಜೊತೆಗೆ ಒಂದು ರೀತಿಯ ತ್ಯಾದ್ಯಾತ್ಮಭಾವ ಬೆಳೆಯುತ್ತಾ ಹೋಯಿತು. ದಿನದಿಂದ ದಿನಕ್ಕೆ ಆ ಬಳ್ಳಿಯ ತುಂಬಾ ಹೂವಿನ ಮೊಗ್ಗುಗಳು ಬಿಡಲು ಪ್ರಾರಂಭಿಸಿದವು. ಆ ದಿವಸ ಉಡ್‌ರೋಜ್ ಅರಳುವ ಸಮಯಕ್ಕೆ ಕೂತು ಯಾವಾಗ ಈ ಹೂವುಗಳು ಅರಳುತ್ತವೆ ಎಂದು ಕಾತರದಿಂದ ನಿರೀಕ್ಷಿಸುತ್ತಾ ಕುಳಿತಿರುವ ಸಮಯದಲ್ಲಿ ಹೊತ್ತು ಹೋದದ್ದೆ ತಿಳಿಯಲಿಲ್ಲ. ಈ ರೀತಿ ಆ ಗಿಡ ಮತ್ತು ಅವರ ನಡುವೆ ಒಂದು ರೀತಿಯ ಭಾವನಾತ್ಮಕ ಬೆಸುಗೆ ಬೆಳೆದು ನಿಂತಿತು. ಒಂದು ದಿನ ಭಾನುವಾರ ಅವರು ಊಟ ಮುಗಿಸಿಕೊಂಡು ಬಾಲ್ಕನಿಗೆ ಹೋದರಾಯಿತು ಎಂದು ಬಂದರು. ಆದರೆ ಮಗ ಆ ಬಳ್ಳಿಯನ್ನು ಕಿತ್ತುಹಾಕಲು ಪ್ರಯತ್ನಿಸುತ್ತಿರುವುದನ್ನು ನೋಡಿ ಯಾಕೆ ಬಳ್ಳಿಯನ್ನು ಕೀಳುತ್ತೀಯ? ಹೂ ಬಿಡುವ ಸಮಯದಲ್ಲಿ ಎಂದು ಕೇಳಿದಾಗ ದುರಗುಟ್ಟಿ ನೋಡುತ್ತಾನೆ. ಕೆಳಗೆ ಬಂದು ಸೊಸೆಗೆ ಹೇಳಿದಾಗ ಅವರು ನನ್ನ ಮಾತೆಲ್ಲಿ ಕೇಳುತ್ತಾರೆ ಏನಾದರೂ ಮಾಡಿಕೊಳ್ಳಲಿ ಎಂದು ಹೇಳಿದಳು. ಆದರೆ ಅವರಿಗೆ ತುಂಬಾ ಸಂಕಟವಾಯಿತು. ವಯಸ್ಸಾದ ನಮ್ಮ ಮಾತು ಮನೆಯಲ್ಲಿ ಯಾರೂ ಕೇಳುತ್ತಿರಲಿಲ್ಲ. ಕೊನೆಗೆ ತಡೆಯದೆ ಊಟಕ್ಕೆ ಕುಳಿತ ಮಗನ ಹತ್ತಿರ ಕೇಳಿದೆ. 'ಯಾಕೋ ಹೂವಿನ ಗಿಡ ಕಿತ್ತು ಹಾಕಿದೆ' ಅದಕ್ಕೆ ಮಗ ಅದು ಬಾಲ್ಕನಿ ತುಂಬೆಲ್ಲಾ ಹಬ್ಬಿ ಬೆಳಕೇ ಬರುತ್ತಿರಲಿಲ್ಲ. ಮುಟ್ಟಿದರೆ ಸೊಳ್ಳೆಗಳೆಲ್ಲಾ ಗುಮ್ಮಂತ ಬರುತ್ತವೆ. ಅದಕ್ಕೆ ಕಿತ್ತೆ' ಎಂದು ಹೇಳಿದ. ಯಾಕೋ ಆ ದಿನ ನನಗೆ ನಿದ್ದೆ ಬರಲಿಲ್ಲ. ಮನುಷ್ಯ ಮನುಷ್ಯನ ನಡುವೆ ಮಮತೆ ಆ ಬಳ್ಳಿಯಂತೆ ಆವರಿಸಿದೆಯೇನೋ. ಬೆಳೆದಂತೆ ಮಕ್ಕಳು ಕೀಳಬಹುದು. ಆದರೆ ತಾಯಿಯಾದವಳಿಗೆ ಹಬ್ಬುವುದು ಮಾತ್ರ ಗೊತ್ತು ಎಂದು ನಿಟ್ಟುಸಿರು ಬಿಟ್ಟರು. ಮುಂದೆ ತನ್ನ ಪಾಡು ಈ ಬಳ್ಳಿಯಂತೆ ನಿರುಪಯುಕ್ತ ಆಗಬಹುದು ಎಂದು ಚಿಂತಿಸುತ್ತಾ ನಿದ್ರೆಗೆ ಜಾರಿದರು.

**"ತನ್ನ ಮಾರ್ಗ"**

ಈ ಕೃತಿಯ ಅತ್ಯಂತ ಸುಂದರವಾದ ಹಾಗೂ ಹೃದಯ ತಟ್ಟುವಂತ ಕಥೆ 'ತನ್ನ ಮಾರ್ಗ'. ಈ ಕತೆಯಲ್ಲಿ ಬರುವ ವರ್ದನಮ್ಮ ಎಂಬ ಹೆಣ್ಣು ತನ್ನ ಹದಿನೈದನೆಯ ವರ್ಷಕ್ಕೆ ಮದುವೆಯಾಗಿ ಗಂಡನ ಮನೆಗೆ ಬಂದ ಆಕೆ ತನಗೊಂದು ವ್ಯಕ್ತಿತ್ವವಿದೆ ಎನ್ನುವುದನ್ನೇ ಮರೆತು ಗಂಡನ ನೆರಳಿನಂತೆ ಬದುಕು ಸವೆಸುತ್ತಾಳೆ. ಕಥಾನಾಯಕಿ ಹೇಳುವಂತೆ ಗಂಡನೆನಿಸಿಕೊಂಡ ವ್ಯಕ್ತಿ ಯಾವಾಗಲೂ ಮುಂದೆ, ನಾನು ಅವರ ನೆರಳಿನಂತೆ ಯಾವತ್ತೂ ಹಿಂದೆ. ಆ ಮನುಷ್ಯ ನನ್ನ ಪಕ್ಕದಲ್ಲಿ ಬರಲೇ ಇಲ್ಲ. ಆಲದ ಮರದಂತೆ ಆತ. ಆ ಮರದ

ನೆರಳಿನಲ್ಲಿ ಆಕೆಯ ಜೀವನ ಸಾಗುತ್ತದೆ. ಆಕೆಗೆ ಇಬ್ಬರು ಗಂಡುಮಕ್ಕಳು. ಮೊದಲನೆಯವನು ಪಟ್ಟಣದಲ್ಲಿ ದೊಡ್ಡ ಹುದ್ದೆಯಲ್ಲಿರುವಾತ. ಗಂಡ ಸತ್ತ ನಂತರ ಆಕೆಗೆ ಬದುಕಿನ ಅರ್ಥ ತಿಳಿಯುತ್ತದೆ. ಅದಕ್ಕೆ ಕಾರಣ ಆಕೆಯ ಹೆಸರಿನಲ್ಲಿ ಗಂಡ ತನ್ನ ಸ್ವಯಾರ್ಜಿತ ಸ್ವತ್ತಾದ ಮನೆಯನ್ನು ಬರೆದಿಟ್ಟು ಹೋದ. ನಂತರ ಆತನ ಮನೆ ತನ್ನ ಹೆಸರಿಗೆ ಸಿಕ್ಕ ನಂತರ ಆಕೆಗೆ ತನ್ನ ಅಸ್ತಿತ್ವದ ಪ್ರಶ್ನೆ ಎದುರಾಗುತ್ತಾ ಸಾಗುವುದು ಈ ಕತೆಯ ವೈಶಿಷ್ಟ್ಯವಾಗಿದೆ. ತಂದೆ ಬದುಕಿರುವಾಗಲೆ ಬೇರೆ ಮನೆ ಮಾಡಿದ ಎರಡನೆಯ ಮಗ. ಮಗಳು ಗಂಡನ ಮನೆಯಲ್ಲಿ ಇರುವಳು. ಮೊದಲನೆಯ ಮಗ ಪಟ್ಟಣದಲ್ಲಿ ದೊಡ್ಡ ಹುದ್ದೆಯಲ್ಲಿ ಇರುವನು. ವರ್ದನಮ್ಮ ಎಲ್ಲ ಬಂಧನಗಳ ಕೊಂಡಿ ಕಳಚಿಕೊಂಡು ಒಂಟಿಯಾಗಿ ಆಕೆ ತನ್ನ ಮನೆಯಲ್ಲಿ ಜೀವನ ಸಾಗಿಸುತ್ತಾಳೆ. ಪಟ್ಟಣದಿಂದ ತಾಯಿಯನ್ನು ನೋಡಲು ಬರುವ ಮಗ ಅದೇ ಊರಿನ ಲಾಡ್ಜ್‌ನಲ್ಲಿ ಉಳಿಯುತ್ತಾನೆ. ತಾಯಿಗೆಂದು ಒಂದು ಹಣ್ಣನ್ನೂ ತರುವುದಿಲ್ಲ. ಮೇಲುಮಾತಿಗೆ ತನ್ನ ಹತ್ತಿರ ಬಾ ಎಂದು ಕರೆಯುತ್ತಾನೆ. ಆದರೆ ವರ್ದನಮ್ಮ ಯೋಚಿಸುತ್ತಾಳೆ. ಅಲ್ಲಿಯೂ ಸಹ ತಾನು ಅವರ ಕೆಲಸ ಮಾಡಿಕೊಂಡು ಜೀವನ ಕಳೆಯಬೇಕು. ಇನ್ನು ಎರಡನೆಯ ಮಗ ಹೆಂಡತಿಯ ಮಾತು ಕೇಳಿ ಬೇರೆ ಮನೆಯನ್ನು ಮಾಡಿದವನು. ನಂತರ ಆತನ ಮಕ್ಕಳು ಬೆಳೆದು ದೊಡ್ಡವರಾದಾಗ ತನ್ನ ತಪ್ಪಿನ ಅರಿವಾಗುತ್ತದೆ. ಈಗ ತಾಯಿಯ ಮನೆಯಲ್ಲಿರಲು ಉತ್ಸಾಹ ತೋರಿಸುತ್ತಾನೆ. ಆದರೆ ವರ್ದನಮ್ಮನಿಗೆ ಇಷ್ಟವಿಲ್ಲ. ಅವರ ಸ್ವಾರ್ಥ ಅವರಿಗೆ ಮುಖ್ಯವಾಗುತ್ತದೆ. ಈ ರೀತಿ ಬದುಕಿನ ಇಳಿ ವಯಸ್ಸಿನಲ್ಲಿ ಆಕೆ ಒಂಟಿ ಬದುಕನ್ನು ತನ್ನಿಚ್ಛೆಯಂತೆ ಆನಂದಿಸುವ ಹೊಸ ಮಾರ್ಗವನ್ನು ಕಂಡುಕೊಳ್ಳುತ್ತಾಳೆ. ಬಾಳ ಮುಸ್ಸಂಜೆಯಲ್ಲಿ ಆಕೆಗೆ ಈ ಎಲ್ಲಾ ಸಂಬಂಧಗಳ ಕೊಂಡಿ ಕಳಚಿಕೊಂಡು ಸ್ವತಂತ್ರವಾಗಿ ಬದುಕುವ ವಾಂಛೆ. ಆ ಮೂಲಕ ತನ್ನ ಅಸ್ತಿತ್ವವನ್ನು ಕಾಪಾಡಿಕೊಳ್ಳಲು ನಿರ್ಧರಿಸುತ್ತಾಳೆ. ಆಕೆ ತನ್ನ ೬೦ ವರ್ಷದ ವಯೋಮಾನದಲ್ಲಿ ಮೊದಲಬಾರಿಗೆ ಸಿನಿಮಾಗೆ ಹೋಗುತ್ತಾಳೆ. ಪಾರ್ಕ್ ಹತ್ತಿರ ವಾಕಿಂಗ್ ಹೋಗುತ್ತಾಳೆ. ಅಲ್ಲಿ ಕಡಲೆ ಕಾಯಿಯನ್ನು ಸ್ವತಂತ್ರವಾಗಿ ಖರೀದಿಸಿ ತಿನ್ನುವ ಮೂಲಕ ತನ್ನ ಜೀವನ ಸ್ವಾತಂತ್ರ್ಯದ ಆನಂದವನ್ನು ಅನುಭವಿಸುತ್ತಾಳೆ. ಇದನ್ನು ಅತ್ಯಂತ ಮನಮುಟ್ಟುವಂತೆ, ಹೃದಯ ತಟ್ಟುವಂತೆ ಹೆಣ್ಣಿನ ಬದುಕಿನ ಪ್ರತಿ ಹಂತವನ್ನು ಅತ್ಯಂತ ನೈಜವಾಗಿ ಕಟ್ಟಿಕೊಟ್ಟಿದ್ದಾರೆ. ಕುಟುಂಬದ ಒಳಗಿನ ರಾಜಕಾರಣವನ್ನು, ಎಲ್ಲಾ ಮನೆಯಲ್ಲಿ ನಡೆಯುವ ಸ್ವಾರ್ಥದ ಪರಮಾವಧಿಯನ್ನು ಅತ್ಯಂತ ಹೃದಯಸ್ಪರ್ಶಿಯಾಗಿ ಈ ಕಥೆಯಲ್ಲಿ ಚಿತ್ರಿಸಿದ್ದಾರೆ.

**೫.೬. ಸಮರ್ಥ ಭಾಷಾಂತರಕಾರರಾಗಿ ಕುಂ.ವೀ.**

೧. ಕುಂ.ವೀ. ಅವರು ವೃತ್ತಿಪರ ಅಥವಾ ವೃತ್ತಿನಿರತ ಭಾಷಾಂತರಕಾರರಲ್ಲ. ಮೂಲತಃ ಅವರೊಬ್ಬ ಸೃಜನಶೀಲ ಬರಹಗಾರರು. ಹೀಗಾಗಿ ಬೇರೆ ಭಾಷೆಗಳಲ್ಲಿರುವ ಸಾಹಿತ್ಯವನ್ನು

ಓದಿಕೊಂಡು ಅದನ್ನು ಕನ್ನಡದ ಓದುಗರಿಗೆ ಸ್ಫೂರ್ತಿಯಿಂದ ಭಾಷಾಂತರಮಾಡಿ ಕನ್ನಡ ಸಾಹಿತ್ಯವಾಹಿನಿಗೆ ನೀಡಿದ್ದಾರೆ.

೨. ವಿಷಯ ಮತ್ತು ಭಾಷೆಯ ಮೇಲೆ ಸಮಾನ ಪ್ರಭುತ್ವ ಇರುವ ವ್ಯಕ್ತಿ ಭಾಷಾಂತರಕ್ಕೆ ಕೈ ಹಾಕಿದಾಗ ಅರ್ಥಪೂರ್ಣವಾದ ಅನುವಾದಗಳನ್ನು ಕೊಡಬಲ್ಲ ಅನ್ನುವುದಕ್ಕೆ ಕುಂ.ವೀ. ಅವರ ಅನುವಾದಗಳ ಸಾಕ್ಷಿಯಾಗುತ್ತವೆ.

೩. ಕುಂ.ವೀ. ಅವರ ಅನುವಾದದ ಗಮನಾರ್ಹವಾದ ಲಕ್ಷಣವೆಂದರೆ ಸಾಧಾರಣ ಓದುಗನನ್ನು ದೃಷ್ಟಿಯಲ್ಲಿರಿಸಿಕೊಂಡು ಭಾಷೆಯನ್ನು ತುಂಬಾ ಸರಳಗೊಳಿಸಿ ಅನುವಾದಿಸಿರು ವುದಾಗಿದೆ.

೪. ಒಬ್ಬ ಸಮರ್ಥ ಭಾಷಾಂತರಕಾರ ಪ್ರಾಮಾಣಿಕತೆ, ಶ್ರದ್ಧೆ, ಎಚ್ಚರ, ವಸ್ತುನಿಷ್ಠತೆ ಮತ್ತು ತನ್ಮಯತೆಗಳನ್ನು ಭಾಷಾಂತರದ ಸಂದರ್ಭದಲ್ಲಿ ಪಾಲಿಸಬೇಕಾಗುತ್ತದೆ ಅವೆಲ್ಲವನ್ನು ನಾವು ಇವರ ಭಾಷಾಂತರದಲ್ಲಿ ಕಾಣಬಹುದು.

೫. ಕುಂ.ವೀ. ಅವರು ಕೃತಿಯಲ್ಲಿ ಮಗ್ನರಾಗಿ ಪರಕಾಯ ಪ್ರವೇಶ ಮಾಡಿ ನಂತರ ಅದರಿಂದ ಹೊರಬಂದು ತಮ್ಮ ಭಾಷೆಯಲ್ಲಿ ಒಡಮೂಡಿಸಿದ್ದಾರೆ. ಕಥೆಯಲ್ಲಿ ಒಡಮೂಡಿದ ಭಾವನೆಗಳಿಗೆ ಎಲ್ಲಿಯೂ ಧಕ್ಕೆಯಾಗದಂತೆ ಸೂಕ್ಷ್ಮಗ್ರಾಹಿಯಾಗಿ ಭಾವನೆಗಳನ್ನು ಗ್ರಹಿಸಿಕೊಂಡು ಆತ್ಮೀಕರಿಸಿಕೊಂಡು ಯಶಸ್ವಿಯಾಗಿ ಭಾಷಾಂತರಿಸಿದ್ದಾರೆ.

೬. ಮೂಲತಃ ಸಾಹಿತಿಯಾದ ಕುಂ.ವೀ. ಅವರಿಗೆ ಭಾಷೆ ಮತ್ತು ಶೈಲಿಯ ಮೇಲೆ ಹಿಡಿತವಿದೆ. ಇವರು ತೆಲುಗು ನಾಡಿನಲ್ಲಿ ತಮ್ಮ ಶಿಕ್ಷಕ ವೃತ್ತಿಯ ಬಹುಭಾಗವನ್ನು ಕಳೆದಿರುವುದರಿಂದ ಆ ಪರಿಸರದ ಭಾಷೆಯ ಸಂವೇದನೆಯನ್ನು ಆತ್ಮೀಕರಿಸಿಕೊಂಡು ಸಮರ್ಥ ಅಭಿವ್ಯಕ್ತಿ ಸಾಮರ್ಥ್ಯವನ್ನು ತಮ್ಮ ಭಾಷಾಂತರದಲ್ಲಿ ವ್ಯಕ್ತಪಡಿಸಿದ್ದಾರೆ.

೭. ಯಾವುದೇ ಭಾಷಾಂತರದ ವಿಷಯದಲ್ಲಿ ಓದಿಸಿಕೊಳ್ಳುವಿಕೆ ಒಂದು ಉತ್ತಮವಾದ ಗುಣ. ಇದು ಓದುಗರು ನಿರೀಕ್ಷಿಸುವ ಬಹು ಮುಖ್ಯವಾದ ಅಂಶ ಕೂಡ. ಭಾಷಾಂತರಕಾರರು ಮೂಲಕ್ಕೆ ಎಷ್ಟು ವಿಧೇಯಕರಾಗಿ ಎಷ್ಟರ ಮಟ್ಟಿಗೆ ಸಹಜಕ್ಕೆ ಹತ್ತಿರವಾಗಿ ಭಾಷಾಂತರಿಸಿದ್ದಾರೆ ಎನ್ನುವುದು ನಮಗೆ ಮುಖ್ಯ ಸಂಗತಿಯಾಗುತ್ತದೆ. ಕುಂ.ವೀ. ಅವರ ತೆಲುಗು ಅನುವಾದ ಕೃತಿಗಳನ್ನು ಓದುವಾಗ ನಮಗೆ ವಿಭಿನ್ನ ಲೇಖಕರ ಬರವಣಿಗೆಯ ಶೈಲಿ, ಭಿನ್ನ ಭಿನ್ನ ಭಾವನೆಗಳ ಅಭಿವ್ಯಕ್ತಿ ಇವು ಪರಿಚಿತವಾಗುತ್ತಾ ಹೋಗುತ್ತವೆಯೇ ವಿನಾ ಕುಂ.ವೀ. ಅವರು ಎಲ್ಲಿಯೂ ತಮ್ಮ ಸೃಜನಶೀಲ ಬರವಣಿಗೆಯಲ್ಲಿ ಅಳವಡಿಸಿಕೊಂಡಂತಹ ಬರವಣಿಗೆಯ ಛಾಪನ್ನು ಈ ಕಥೆಗಳಲ್ಲಿ ಕಾಣಿಸಿದಂತೆ ಕಾಣುವುದಿಲ್ಲ. ಉತ್ತಮ ಅನುವಾದಕನ ನೆಲೆಯಲ್ಲಿ ನಿಂತು ಈ ಕೃತಿಗಳನ್ನು ಅನುವಾದಿಸಿರುವುದು ವಿಶೇಷವಾಗಿದೆ.

೮. ಕುಂ.ವಿ. ಅವರ ಸೃಜನಶೀಲ ಸಾಹಿತ್ಯದ ಪ್ರಭಾವ ಅವರ ಭಾಷಾಂತರ ಸಾಹಿತ್ಯದ ಮೇಲೆ ಪ್ರಭಾವ ಬೀರಿದಂತೆ ಕಾಣುವುದಿಲ್ಲ. ಆದರೆ ಭಾಷಾಂತರ ಸಾಹಿತ್ಯದ ಪ್ರಭಾವ ಕುಂ.ವಿ. ಅವರ ಕಥೆ ಕಾದಂಬರಿಗಳ ಮೇಲೆ ಸಾಕಷ್ಟು ಪರಿಣಾಮ ಬೀರಿರುವುದನ್ನು ಅವರ ಕಥೆಗಳಲ್ಲಿ ಕಾಣಬಹುದು. ಅನುವಾದಕರ ವ್ಯಾಪಕ ಅಧ್ಯಯನದ ಫಲ ಇದಕ್ಕೆ ಕಾರಣ. ವಿಶಾಲ ಲೋಕಾನುಭವ, ಆಂಧ್ರದ ಗಡಿಭಾಗದಲ್ಲಿ ಕಳೆದ ಶಿಕ್ಷಕ ವೃತ್ತಿಯ ಅನುಭವಗಳು ಇವರು ಒಬ್ಬ ಸಮರ್ಥ ಅನುವಾದಕರಾಗಿ ಸಾಹಿತ್ಯ ಕೃಷಿ ಮಾಡಿರುವುದು ಕಂಡುಬರುತ್ತದೆ.

**ಕೊನೆಟಿಪ್ಪಣಿ**

೧. ಕರೀಗೌಡ ಬೀಚನಹಳ್ಳಿ(ಸಂ), ಭಾಷಾಂತರ ಸಾಂಸ್ಕೃತಿಕ ನೆಲೆಗಳು(ಲೇ.), ೨೦೦೯, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೩.

೨. ಅದೇ, ಪು. ೩.

೩. ಕುಂ.ವೀರಭದ್ರಪ್ಪ(ಅನು), ಚಿನ್ನದ ತೆನೆ, ವಾಕಾಟಿ ಪಾಂಡುರಂಗರಾವ್, ವೇದಗಿರಿ ರಾಂಬಾಬು(ಮೂಲ), ಸಾಹಿತ್ಯ ಅಕಾಡೆಮಿ, ೨೦೧೦, ಪು. ೪೦೧-೪೦೨.

೪. ಕುಂ.ವೀರಭದ್ರಪ್ಪ(ಅನು), ಒಂದು ಪೀಳಿಗೆಯ ತೆಲುಗು ಕಥೆಗಳು, ವಿ. ರಾಮಲಿಂಗಂ (ಮೂಲ), ೨೦೦೧, ಪು. ೮೮-೮೯.

೫. ಅದೇ, ಪು. ೧೬-೧೭-೨೨.

೬. ಅದೇ, ಪು. ೨೬೬-೬೭-೭೦.

೭. ಕುಂ.ವೀರಭದ್ರಪ್ಪ(ಅನು), ಚಿನ್ನದ ತೆನೆ, ವಾಕಾಟಿ ಪಾಂಡುರಂಗರಾವ್, ವೇದಗಿರಿ ರಾಂಬಾಬು (ಮೂಲ), ಸಾಹಿತ್ಯ ಅಕಾಡೆಮಿ, ೨೦೧೦, ಪು. ೬೬-೬೭.

೮. ಅದೇ, ಪು. ೧೬-೧೭-೨೨.

೯. ಅದೇ, ಪು. ೬೧-೬೨.

೧೦. ಅದೇ, ಪು. ೮೪-೯೦.

೧೧. ಅದೇ, ಪು. ೨೪೪-೨೪೫.

೧೨. ಅದೇ, ಪು. ೩೦೭-೩೧೨.

೧೩. ಅದೇ, ಪು. ೨೮೦-೨೮೧.

೧೪. ಕುಂ. ವೀರಭದ್ರಪ್ಪ(ಕನ್ನಡ ಅನುವಾದ), ತನ್ನ ಮಾರ್ಗ, ಅಬ್ಬೂರಿ ಛಾಯಾದೇವಿ, ಸಾಹಿತ್ಯ ಅಕಾಡೆಮಿ, ೨೦೧೦, ಪು.೧. ಅನುವಾದಕರ ಮಾತು.

೧೫. ಅದೇ, ಪು. ೧

೧೬. ಅದೇ, ಪು. ಮುನ್ನುಡಿ

ಅಧ್ಯಾಯ ಆರು

# ಕುಂ. ವೀರಭದ್ರಪ್ಪ ಲೇಖಕ–ಅನುವಾದಕ ಅಂತರ್‌ಶಿಸ್ತೀಯ ನೆಲೆಗಳು

೬.೧. ಲೇಖಕ ಅನುವಾದಕ ಪರಿಕಲ್ಪನೆ

೬.೨. ಅಂತರ್‌ಶಿಸ್ತೀಯ ಪರಿಕಲ್ಪನೆ

೬.೩. ಸಂಸ್ಕೃತಿಕ ಪ್ರಜ್ಞೆ

೬.೪. ಇತಿಹಾಸ ಪ್ರಜ್ಞೆ

೬.೫. ಸಾಮಾಜಿಕ ಪ್ರಜ್ಞೆ

೬.೬. ಧಾರ್ಮಿಕ ಪ್ರಜ್ಞೆ

ಅಧ್ಯಾಯ ಆರು

# ಕುಂ. ವೀರಭದ್ರಪ್ಪ ಲೇಖಕ–ಅನುವಾದಕ ಅಂತರ್‌ಶಿಸ್ತೀಯ ನೆಲೆಗಳು

### ೬.೧. ಲೇಖಕ ಅನುವಾದಕ ಪರಿಕಲ್ಪನೆ

ಕುಂ.ವೀ. ಅವರು ಮೂಲತಃ ಸೃಜನಶೀಲ ಲೇಖಕ. ಕಥೆ, ಕಾದಂಬರಿಗಳ ಮೂಲಕ ಈಗಾಗಲೇ ಕನ್ನಡ ಕಥನ ಸಾಹಿತ್ಯಕ್ಷೇತ್ರದಲ್ಲಿ ತಮ್ಮದೇ ಆದ ಛಾಪನ್ನು, ಚಹರೆಯನ್ನು ಸ್ಥಾಪಿಸಿದ್ದಾರೆ. ಎಪ್ಪತ್ತರ ದಶಕದ ನಂತರ ದಲಿತ, ಬಂಡಾಯ ಮಾರ್ಗದಲ್ಲಿ ಕಥೆ, ಕಾದಂಬರಿಗಳನ್ನು ಬರೆಯಲು ಶುರುಮಾಡಿದ ಅವರು ಇಂದಿಗೂ ತಮ್ಮ ಬಂಡಾಯ, ಪ್ರತಿರೋಧದ ಕಥನದ ಬರವಣಿಗೆಯ ಮೂಲಕ ರಚನೆಗಳನ್ನು ಮಾಡುತ್ತಿದ್ದಾರೆ. ಹಾಗೆ ನೋಡಿದರೆ ಬಂಡಾಯದ ಚಳುವಳಿಯ ಮಾರ್ಗದಲ್ಲಿ ಬರೆಯುತ್ತಿದ್ದ ಎಷ್ಟೋ ಲೇಖಕರು ಈಗ ತಮ್ಮ ಬರವಣಿಗೆ ಮುಗಿಯಿತೇನೋ ಎಂಬಂತಾಗಿದ್ದರೆ ಆಶ್ಚರ್ಯವಾಗುವುದಿಲ್ಲ. ಆದರೆ ಕುಂ.ವೀ. ಅವರು ಮಾತ್ರ ಇನ್ನೂ ಬಂಡಾಯದ, ಶೋಷಣೆಯ ಅಸಮಾನತೆಯ, ಅವಮಾನದ, ಪ್ರತಿಭಟನೆಯ, ಹಸಿವಿನ ನೆಲೆಗಳನ್ನು ತಮ್ಮ ಕಥನಗಳಲ್ಲಿ ಶೋಧಿಸುತ್ತಲೇ ಇದ್ದಾರೆ. ವಸ್ತುವಿನ ಮಟ್ಟದಲ್ಲಿ, ಭಾಷೆ, ಶೈಲಿ ಹಾಗೂ ತಂತ್ರದ ಮಟ್ಟದಲ್ಲಿ ಕುಂ.ವೀ. ಅವರು ಸಾಕಷ್ಟು ಬದಲಾವಣೆಯನ್ನು ಹೊಂದಿದ್ದಾರೆ. ಪ್ರಾದೇಶಿಕ ಕನ್ನಡ ಭಾಷೆ ಮತ್ತು ಹಳಗನ್ನಡ ಕಾವ್ಯಗಳ ಭಾಷೆಗಳ ಮಿಲನದಲ್ಲಿ ತಮ್ಮ ಅಭಿವ್ಯಕ್ತಿಗಾಗಿ ತಮ್ಮದೇ ಆದ ವಿಶಿಷ್ಟ ಭಾಷೆಯ ಲಯಗಳನ್ನು ರೂಪಿಸಿಕೊಂಡಿದ್ದಾರೆ. ಕನ್ನಡ ಕಾವ್ಯಗಳಲ್ಲಿ ಬರುವ ವರ್ಣನೆಗಳಿಂದ ಪ್ರೇರಿತರಾಗಿ ಆ ಭಾಷೆಯನ್ನು ಪ್ರಸ್ತುತಗೊಳಿಸುವಲ್ಲಿ ಮತ್ತು ಅದರ ಸಾಧ್ಯತೆಗಳನ್ನು ವಿಸ್ತರಿಸುವಲ್ಲಿ ಅವರು ಸಾಕಷ್ಟು ಕೌಶಲವನ್ನು ತೋರಿಸಿದ್ದಾರೆ. ಇದು ಅವರ ಸೃಜನಶೀಲ ಕಥನದಲ್ಲಿ ನಾವು ಗಮನಿಸಬಹುದಾದ ಸಂಗತಿಗಳಾಗಿವೆ. ಈ ಸನ್ನಿವೇಶ ಸಂದರ್ಭಗಳನ್ನು ಅವರ ಸೃಜನಶೀಲ, ಕಥೆ, ಕಾದಂಬರಿಗಳಲ್ಲಿ ಮುಂದೆ ಗುರುತಿಸಲಾಗುವುದು.

ಇನ್ನು ಅನುವಾದಕರಾಗಿ ಸಹ ಕುಂ.ವೀ. ಅವರು ಕನ್ನಡ ಮತ್ತು ತೆಲುಗು ಭಾಷೆ, ಸಾಹಿತ್ಯ, ಸಂಸ್ಕೃತಿಯ ದ್ವಿಭಾಷಿಕ ನೆಲೆಯಲ್ಲಿ ತಮ್ಮ ವೃತ್ತಿಯನ್ನು ಕಳೆದು ಅನುಭವವನ್ನು ತುಂಬಿಸಿದ್ದಾರೆ. ತೆಲುಗು ಸಾಹಿತ್ಯದ ಕಥನಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಅನುವಾದಕ್ಕೆ ಆಯ್ಕೆ ಮಾಡಿಕೊಳ್ಳುವಾಗ ಕನ್ನಡ ಸಂಸ್ಕೃತಿ, ಬದುಕಿನಲ್ಲಿಯೂ ಕಂಡುಬರಬಹುದಾದ ಜಮೀನ್ದಾರಿ ಪದ್ಧತಿ, ಶೋಷಣೆ, ಹಸಿವು ಮುಂತಾದ ಸಾದೃಶ್ಯವಾದ ವಸ್ತುಗಳನ್ನುಳ್ಳ ಕಥೆಗಳನ್ನೇ ತೆಲುಗು ಸಾಹಿತ್ಯದಿಂದ ಆಯ್ಕೆ ಮಾಡಿಕೊಂಡಿದ್ದಾರೆ. ವಸ್ತು ಮಾತ್ರವಲ್ಲದೆ ಭಾಷೆಯ ನಿರೂಪಣೆಯ ಹಂತದಲ್ಲಿಯೂ ಅವರ ಸೃಜನಶೀಲ ಕಥೆಗಳಲ್ಲಿ ಬಳಸಿರುವ ಕನ್ನಡ ಭಾಷೆಗೂ, ಅವರು ತಮ್ಮ ಅನುವಾದಿತ ಕಥೆಗಳಲ್ಲಿ ಬಳಸಿರುವ ಕನ್ನಡ ಭಾಷೆಗೂ ಮೂಲಭೂತವಾದ ವ್ಯತ್ಯಾಸವಿಲ್ಲ. ಸೃಜನಶೀಲ ಮತ್ತು ಅನುವಾದ ಕಥೆಗಳೆರಡರಲ್ಲೂ ವಸ್ತು, ಸಂಭಾಷಣೆಗಳಲ್ಲಿ ಏಕರೂಪಿಯಾದ ಭಾಷೆಯನ್ನೇ ಬಳಸಿದ್ದಾರೆ. ಅವರ ಬಂಡಾಯದ, ಪ್ರತಿಭಟನೆಯ ಮನೋಧರ್ಮಕ್ಕೆ ಹೊಂದುವಂತಹ ಕತೆಗಳನ್ನೇ ತೆಲುಗಿನಿಂದ ಆಯ್ದುಕೊಂಡು ಕನ್ನಡಕ್ಕೆ ತಂದಿದ್ದಾರೆ. ಹಾಗಾಗಿ ಕುಂ.ವೀ. ಅವರನ್ನು ಲೇಖಕ ಮತ್ತು ಅನುವಾದಕ ಎಂಬ ಪರಿಕಲ್ಪನೆಗಳನ್ನು ಬೇರ್ಪಡಿಸಿ ನೋಡಲಾಗದಷ್ಟು ಮಿಲನ ಅವರ ಈ ಕಥನಗಳ ನಿರೂಪಣೆಯಲ್ಲಿ ಕಂಡುಬರುತ್ತದೆ. ಮುಂದೆ ಅವರ ಸೃಜನಶೀಲ ಮತ್ತು ಅನುವಾದದ ಕಥನಗಳಲ್ಲಿ ಗುರುತಿಸುವ ಪ್ರಯತ್ನವನ್ನು ಮಾಡಲಾಗುವುದು. ಇದು ಈ ಸಂಶೋಧನೆ ಉದ್ದೇಶ ಕೂಡ ಆಗಿದೆ.

**೬.೨. ಅಂತರ್‌ಶಿಸ್ತೀಯ ಪರಿಕಲ್ಪನೆ**

ಕನ್ನಡ ಸಂಶೋಧನ ಕ್ಷೇತ್ರದಲ್ಲಿ ತೌಲನಿಕ ಅಧ್ಯಯನ, ಅಂತರ್‌ಶಿಸ್ತೀಯ ಅಧ್ಯಯನ, ಬಹುಶಿಸ್ತೀಯ ಅಧ್ಯಯನ, ಸಾಹಿತ್ಯದ ಅಧ್ಯಯನ, ಸಾಂಸ್ಕೃತಿಕ ಅಧ್ಯಯನ ಹೀಗೆ ವಿವಿಧ ಪರಿಕಲ್ಪನೆಗಳ ಅಧ್ಯಯನ ಇಂದು ಪ್ರವೃತ್ತವಾಗಿವೆ. ಆದರೆ ಒಂದು ಸಾಹಿತ್ಯಕೃತಿ ವಿಭಿನ್ನವಾದ ನೆಲೆಗಳನ್ನು ಒಳಗೊಂಡು ಮೈದಾಳಿರುತ್ತದೆ. ಅದರ ಹಿಂದೆ ತತ್ವಶಾಸ್ತ್ರ, ವಿಜ್ಞಾನ, ಆರ್ಥಿಕ ಹಾಗೂ ಸಾಮಾಜಿಕ ನೆಲೆ, ಸೌಂದರ್ಯ ಶಾಸ್ತ್ರ, ಹೀಗೆ ಒಂದು, ಎರಡು, ಎರಡಕ್ಕಿಂತ ಹೆಚ್ಚಿನ ಬಹುಮುಖಿ ಶಿಸ್ತುಗಳನ್ನು ಗುರುತಿಸಲು ಸಾಧ್ಯವಿದೆ. ಸಾಹಿತ್ಯಕೃತಿಯ ಸೃಷ್ಟಿ ಸಮಾಜದಲ್ಲಿ ಆಗುವುದರಿಂದ ಅದರ ಹಿಂದೆ ಸಮಾಜ, ರಾಜಕಾರಣ, ಧರ್ಮ, ಜನಜೀವನ, ಭಾಷೆ, ಸಂಸ್ಕೃತಿ ಹೀಗೆ ಹತ್ತಾರು ಶಿಸ್ತುಗಳು ಅದಕ್ಕೆ ಒತ್ತಾಸೆಯನ್ನು ನೀಡುತ್ತಿರುತ್ತವೆ. ಹಲವು ಚಾರಿತ್ರಿಕವಾದ ಹಾಗೂ ಸಮಕಾಲೀನವಾದ ಪ್ರೇರಣೆಗಳ ಪ್ರಭಾವಗಳೂ ಆ ಕೃತಿಯನ್ನು ರೂಪಿಸುತ್ತಿರುತ್ತವೆ.

ಹಾಗಾಗಿ ಸಾಹಿತ್ಯ ಕೃತಿಗೆ ಇತರೆ ಜ್ಞಾನಶಿಸ್ತುಗಳಿಗಿಂತ ಬಹುಮುಖಿ ಆಯಾಮವಿರುತ್ತದೆ. ಆದರೆ ಇಲ್ಲಿ ಕುಂ.ವೀ. ಅವರ ಕಥನಸಾಹಿತ್ಯವನ್ನು ಮುಖ್ಯವಾಗಿ ಅಂತರ್‌ಶಿಸ್ತೀಯ ಅಧ್ಯಯನದ

ನೆಲೆಯಲ್ಲಿ ಗ್ರಹಿಸಲು, ಅರ್ಥೈಸಲು ಯತ್ನಿಸಲಾಗಿದೆ. ಎರಡು ಅಥವಾ ಎರಡಕ್ಕಿಂತ ಹೆಚ್ಚಿನ ಶೈಕ್ಷಣಿಕ ಶಿಸ್ತುಗಳನ್ನು ಸಂಯುಕ್ತಗೊಳಿಸಿಕೊಂಡು ಒಂದು ಘನರೂಪದಲ್ಲಿ ಅಭಿವ್ಯಕ್ತವಾಗುವ ಸಾಹಿತ್ಯಕ ಚಟುವಟಿಕೆಯನ್ನು ಅಂತರ್‌ಶಿಸ್ತೀಯ ಅಧ್ಯಯನದ ಚಟುವಟಿಕೆ ಎಂದು ಪರಿಭಾವಿಸ ಬಹುದಾಗಿದೆ. ಕುಂ.ವೀ. ಅವರ ಕಥನಗಳಲ್ಲಿ ಎರಡು ಭಾಷೆಗಳ ಮತ್ತು ಸಾಂಸ್ಕೃತಿಕ ಗಡಿಗಳ ಎಲ್ಲೆಗಳನ್ನು ಮೀರಿದ ಪರಿಕಲ್ಪನೆ ಪ್ರವೃತ್ತವಾಗಿದೆ. ಅವರ ಈ ಎಲ್ಲೆಗಳನ್ನು ಮೀರುವಿಕೆಯು ಸಾಂಪ್ರದಾಯಿಕ ಗಡಿಗಳ ಭಾಷೆ, ಸಂಸ್ಕೃತಿಯ ಗಡಿಗಳನ್ನು ಮೀರಿ ಹೊಸ ಬಂಡಾಯದ ಚಿಂತನೆಯನ್ನು ಹುಟ್ಟುಹಾಕುತ್ತದೆ. ಈ ಎರಡು ಭಾಷೆ ಮತ್ತು ಸಂಸ್ಕೃತಿಗಳ ಅಂತರ್‌ಶಿಸ್ತೀಯ ಕ್ಷೇತ್ರವು ಇವರ ಕಥನಗಳಲ್ಲಿ ಹೊಸ ಸಾಧ್ಯತೆಗಳನ್ನು ಹೊಸ ಚಿಂತನೆಗಳನ್ನು ಹುಟ್ಟು ಹಾಕುತ್ತಿರುವುದನ್ನು ಕಾಣುತ್ತೇವೆ. ಇದು ತುಂಬಾ ಸಂಕೀರ್ಣವಾದ ಸ್ಥಿತಿ ಎಂಬುದು ಗೊತ್ತು. ಆದರೆ ಎರಡು ಭಾಷೆ, ಸಂಸ್ಕೃತಿ, ಗಡಿಗಳ ಸಂಬಂಧದ ಬದುಕಿನ ರೀತಿ, ಸಮಾಜದ ಗತಿ, ಚಾರಿತ್ರಿಕ ಸಂದರ್ಭಗಳನ್ನು ಅರ್ಥ ಮಾಡಿಕೊಳ್ಳಲು ಹೊಸ ಆಯಾಮಗಳನ್ನು ಒದಗಿಸುತ್ತದೆ. ಕುಂ.ವೀ. ಅವರ ಸೃಜನಶೀಲ ಕಥನ ಮತ್ತು ಅನುವಾದಿತ ಕಥನಗಳನ್ನು ಈ ಬಗೆಯ ಅಂತರ್‌ಶಿಸ್ತೀಯ ಸಂಬಂಧದ ಅಧ್ಯಯನಕ್ಕೆ ಮುಂದೆ ಒಳಪಡಿಸಲಾಗುವುದು.

### ೬.೩. ಸಾಂಸ್ಕೃತಿಕ ಪ್ರಜ್ಞೆ

'ಸಂಸ್ಕೃತಿ' ಎಂಬುದು ಒಂದು ಸಮುದಾಯ ಬದುಕುವ ಆಲೋಚಿಸುವ ಜೀವನ ವಿಧಾನ 'ಸಮುದಾಯ' ಎಂಬುದು ಹಲವು ಗುಂಪುಗಳಿಂದ ಕೂಡಿರುತ್ತದೆ. ಈ ಎಲ್ಲ ಗುಂಪುಗಳ ನಂಬಿಕೆ ಆಚರಣೆಗಳೂ ಒಟ್ಟು ಸೇರಿಯೇ ಅದರ ಸಂಸ್ಕೃತಿ. ಈ ನಾಡಿನಲ್ಲಿರುವ ಬಹುರೂಪಿ ಸಂಸ್ಕೃತಿಗಳ ಒಳಗೆ ಬಹಳ ಕಾಲದಿಂದಲೂ ಕೊಡುಕೊಳ್ಳುವಿಕೆ ನಡೆಯುತ್ತಾ ಬಂದಿದೆ. ನಾಡಿನ ಒಳಗಿನಿಂದ ಮಾತ್ರವಲ್ಲ ಹೊರಗಿನಿಂದಲೂ ಕೊಡುಕೊಳ್ಳುವಿಕೆ ನಡೆಯುತ್ತಾ ಬಂದಿದೆ.

ಕನ್ನಡ ಮತ್ತು ತೆಲುಗು ಜನರ ಸಾಂಸ್ಕೃತಿಕ ಹಿನ್ನೆಲೆ, ಸಾಮಾಜಿಕ ವ್ಯವಸ್ಥೆ, ಆರ್ಥಿಕ ವ್ಯವಸ್ಥೆ ಮುಂತಾದುವೆಲ್ಲಾ ಸಮನಾಗಿಯೇ ಇವೆ ಶ್ರೇಣೀಕೃತ ಜಾತಿವ್ಯವಸ್ಥೆ ಧರ್ಮ–ಮತಪ್ರಧಾನವಾದ ಜೀವನ ರೀತಿ, ನೀತಿ, ಭೇದಗಳು, ಶೋಷಣೆಯ ಬಗೆಗಳು, ವೃತ್ತಿಗಳು, ಪ್ರವೃತ್ತಿಗಳು, ವೈವಿಧ್ಯಮಯ ಜನರು, ಅಸಂಖ್ಯಾತ ನಿರ್ಗತಿಕರು ಕೆಳವರ್ಗದವರು, ಜೀವಿಗಳು, ಕೆಲವೇ ಜನರ ಕೈಯಲ್ಲಿ ಸಿಕ್ಕಿಕೊಂಡಿರುವ ಉತ್ಪನ್ನ ಮೂಲಗಳು ಮೊದಲಾದುವೆಲ್ಲಾ ಹೆಚ್ಚು ಕಡಿಮೆ ಒಂದೇ ಎನ್ನಬಹುದು. ಹಲವು ಕನ್ನಡಗಳು ಕರ್ನಾಟಕದಲ್ಲಿರುವಂತೆಯೇ ಹಲವು ತೆಲುಗುಗಳು ವಿಶಾಲಾಂಧ್ರ ಪ್ರದೇಶದಾದ್ಯಂತ ಇವೆ. ಕೋಸ್ತಾ, ತೆಲಂಗಾಣ, ರಾಯಲಸೀಮ

ಹೀಗೆ ತೆಲುಗು ಭಾಷೆಗೆ ಇಂಥಾ ಹತ್ತಾರು ಸೊಗಸುಗಳಿವೆ. ಈ ಎರಡು ಭಾಷೆಯ ಸಾಂಸ್ಕೃತಿಕ ಸಂಬಂಧಗಳನ್ನು ಈ ಎರಡು ಸಾಹಿತ್ಯದಲ್ಲಿ ಹುಡುಕುವುದೇ ಈ ಪ್ರಬಂಧದ ಪ್ರಮುಖ ಅಂಶವಾಗಿದೆ.

ಮಾನವ ಸಮಾಜಜೀವಿ ಅಷ್ಟೇ ಅಲ್ಲ, ಅವನು ಸಾಂಸ್ಕೃತಿಕ ಜೀವಿಯೂ ಹೌದು. ಸಂಸ್ಕೃತಿ ಇಲ್ಲದ ಸಮಾಜವನ್ನಾಗಲಿ, ಸಾಮಾಜಿಕ ಜೀವನವನ್ನಾಗಲಿ ಊಹಿಸಿಕೊಳ್ಳುವುದು ಕಷ್ಟ. ಸಂಸ್ಕೃತಿಯಲ್ಲಾದ ಪರಿವರ್ತನೆ ಸಮಾಜ ಪರಿವರ್ತನೆಗೆ ಕಾರಣವಾಗುತ್ತದೆ. ಧರ್ಮ, ಕಲೆ, ಭಾಷೆ, ಸಾಹಿತ್ಯ ಲೋಕರೂಢಿಗಳು, ನೈತಿಕ ನಿಯಮಗಳು, ಸಂಸ್ಕೃತಿಯನ್ನು ಪ್ರತಿನಿಧಿಸುತ್ತವೆ. ಭೌತಿಕ ಸಂಸ್ಕೃತಿಯಾಗಲಿ ಅಥವಾ ಅಭೌತಿಕ ಸಂಸ್ಕೃತಿಯಾಗಲಿ ಸಮಾಜದಲ್ಲಿ ಸಾಮಾಜಿಕ ಪರಿವರ್ತನೆಯನ್ನು ತರುತ್ತವೆ. ಪರಿವರ್ತನೆ ತರುವಲ್ಲಿ ಮುಖ್ಯವಾಗಿ ಮೂರು ಪ್ರಕ್ರಿಯೆಗಳನ್ನು ಗಮನಿಸಬಹುದು ೧. ಪರಿಶೋಧನೆ, ೨. ಆವಿಷ್ಕಾರ, ೩. ಪ್ರಸರಣ 'ಪರಿಶೋಧನೆ' ಎಂಬ ಕಲ್ಪನೆಯು ಈಗಾಗಲೇ ಅಸ್ತಿತ್ವದಲ್ಲಿ ಇರುವ ನಮಗೆ ಗೋಚರಿಸದೇ ಇರುವ ಸಂಗತಿಗಳನ್ನು ಕಂಡು ಕೊಳ್ಳುವುದಾಗಿದೆ. 'ಆವಿಷ್ಕರ' ಸಾಮಾಜಿಕ ಬದಲಾವಣೆಯ ಪ್ರಮುಖ ಮೂಲ. ಈ ಮೊದಲು ಅಸ್ತಿತ್ವದಲ್ಲಿ ಇರದ ಯಾವುದನ್ನಾದರೂ ರೂಪಿಸುವುದಕ್ಕೆ ಆವಿಷ್ಕಾರ ಎನ್ನಲಾಗಿದೆ. ಭೌತ ಮತ್ತು ಅಭೌತ ಜಗತ್ತಿನಲ್ಲಿ ಉಂಟುಮಾಡುವ ಆವಿಷ್ಕಾರ ಅನೇಕ ಬದಲಾವಣೆಗಳನ್ನು ಉಂಟುಮಾಡುತ್ತದೆ. ಹಾಗೆಯೇ 'ಪ್ರಸರಣ' ಸಾಂಸ್ಕೃತಿಕ ಅಂಶಗಳು ಒಂದು ಸಂಸ್ಕೃತಿಯಿಂದ ಇನ್ನೊಂದು ಸಂಸ್ಕೃತಿಗೆ ಹರಡುವಿಕೆಯನ್ನು ಪ್ರಸರಣ ಎನ್ನುತ್ತಾರೆ. ಜನರ ಧಾರ್ಮಿಕ ನಂಬಿಕೆಗಳು ಮತ್ತು ಆಚರಣೆಗಳು ಹಾಗೂ ಅವರ ಆರ್ಥಿಕ ಚಟುವಟಿಕೆಗಳ ನಡುವೆ ನೇರ ಸಂಬಂಧವಿದೆ. ಒಂದು ಸಮಾಜದ ಆಚರಣಾ ನೀತಿ ಸಂಹಿತೆಗೂ ಹಾಗೂ ಅದರ ಆರ್ಥಿಕ ವ್ಯವಸ್ಥೆಗೂ ನೇರ ಸಂಬಂಧವಿದೆ. ಆದ್ದರಿಂದ ಸಾಂಸ್ಕೃತಿಕ ಅಂಶವು ಆರ್ಥಿಕ ಪರಿವರ್ತನೆಗೆ ಸಾಧನವಾಗ ಬಹುದು.

**ಮಾನವ ಸಮಾಜ ಮತ್ತು ಸಂಸ್ಕೃತಿಯ ಸಮಾಜಶಾಸ್ತ್ರೀಯ ವಿಶ್ಲೇಷಣೆ**

ಸಮಾಜಶಾಸ್ತ್ರದ ಮುಖ್ಯ ಉದ್ದೇಶವು ಸಮಾಜ ಮತ್ತು ಸಂಸ್ಕೃತಿಗಳ ಬಗ್ಗೆ ಸಮಾಜಶಾಸ್ತ್ರೀಯ ದೃಷ್ಟಿಕೋನದಿಂದ ಕೂಡಿದ ವಿಶ್ಲೇಷಣೆಯೊಂದನ್ನು ನೀಡುವುದಾಗಿರುತ್ತದೆ. ಸಮಾಜ ಮತ್ತು ಸಂಸ್ಕೃತಿಗಳ ವಿಕಾಸಾತ್ಮಕ ಬೆಳವಣಿಗೆ ಮತ್ತು ಈ ಬೆಳವಣಿಗೆಯ ಪ್ರಕ್ರಿಯೆಯಲ್ಲಿನ ಪ್ರಮುಖವಾದ ಹಂತಗಳ ಕುರಿತಾಗಿಯೂ ಅಧ್ಯಯನ ಮಾಡುವುದಾಗಿದೆ. ಸಮಾಜವು ಐತಿಹಾಸಿಕವಾಗಿ ರೂಪಾಂತರಗೊಳ್ಳುತ್ತಾ ಬಂದಿರುವುದಕ್ಕೆ ಕಾರಣವಾದ ಶಕ್ತಿಗಳ ಬಗ್ಗೆಯೂ ಅದು ವಿಶ್ಲೇಷಿಸುವುದು ನಮ್ಮ ಸಾಮಾಜಿಕ ಜೀವನದ ಬಹುಮುಖ್ಯವಾದ ಘಟಕಗಳೆಲ್ಲವೂ ಇಲ್ಲಿ ಅಧ್ಯಯನದ

ವಿಷಯಗಳಾಗುತ್ತವೆ. ಉದಾಹರಣೆಗೆ ಸಾಮಾಜಿಕ ಕ್ರಿಯೆಗಳು, ಸಾಮಾಜಿಕ ಸಂಬಂಧಗಳು ವ್ಯಕ್ತಿಯ ವ್ಯಕ್ತಿತ್ವ, ಎಲ್ಲಾ ಬಗೆಯ ಸಮೂಹಗಳು ಗ್ರಾಮ, ನಗರ ಹಾಗೂ ಆದಿವಾಸಿ ಸಮುದಾಯಗಳು, ಸಂಗಗಳು, ಸಂಗಟನೆಗಳ ಮತ್ತು ಜನಸಂಖ್ಯೆ ಎಲ್ಲವೂ ಸಮಾಜಶಾಸ್ತ್ರದ ವ್ಯಾಪ್ತಿಗೆ ಬರುತ್ತದೆ.

**ಸಂಸ್ಕೃತಿ ಪ್ರಸರಣ**

ಸಂಸ್ಕೃತಿ ಪ್ರಸರಣ(Cultural Diffusion) ಸಾಮಾಜಿಕ ವಿಕಾಸದಲ್ಲಿ ಮುಖ್ಯವಾದ ಅಂಶವೆಂದು ಪರಿಗಣಿಸಲಾಗಿದೆ. "ಜೆ.ಎಲ್.ಗಿಲನ್ ಮತ್ತು ಜೆ.ಪಿ.ಗಿಲನ್" ಪ್ರಸರಣವನ್ನು 'ಅಂತಃ ಸಮಾಜ"(intra society) ಮತ್ತು 'ಅಂತರ ಸಮಾಜ'(intersociety) ಎಂದು ವಿಂಗಡಿಸಿದ್ದಾರೆ. ಅಂತಃ ಸಾಮಾಜಿಕ ಪ್ರಸರಣ ಮೇಲೆ ಪ್ರಭಾವ ಬೀರುವ ಅಂಶಗಳನ್ನು ಈ ರೀತಿ ತಿಳಿಸಿದ್ದಾರೆ. ಅಂತಹ ಪ್ರಸರಣ ಕ್ರಿಯೆಯಲ್ಲಿ ಈ ಕೆಲವು ವಿಷಯಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗುವುದು ಸಾಮಾನ್ಯವಾಗಿ ಸಂಸ್ಕೃತಿಯ ಮೂಲಾಂಶಗಳು ಒಂದು ಸಮಾಜದಿಂದ ಮತ್ತೊಂದು ಸಮಾಜಕ್ಕೆ ಪ್ರಸರಣವಾಗಬೇಕಾದರೆ ವಿವಿಧ ಸಮೂಹಗಳ ಜನರ ಸಂಪರ್ಕದ ಅವಶ್ಯಕತೆ ಇದೆ. ಆದರೆ ಅಂತಹ ಸಂಪರ್ಕವು ಮುಖಾಮುಖಿ ಸಂಬಂಧ ಮಾತ್ರವಾಗಿರಬೇಕೆಂಬ ಕಡ್ಡಾಯವಿರುವುದಿಲ್ಲ. ಭಾಷೆಯ ಮೂಲಕವೂ ಅದರ ಸಾಧ್ಯತೆ ಇವೆ. ಆದ್ದರಿಂದ ವಿವಿಧ ಸಮೂಹದ ಜನರಲ್ಲಿ ಸಾಂಸ್ಕೃತಿಕ ಪ್ರಸರಣ ಕಾರ್ಯವು ನಿರಂತರವಾಗಿ ನಡೆಯುತ್ತಿರುತ್ತದೆ. ಸಂಪರ್ಕ ಸುಗಮವಾದರೆ ಪ್ರಸರಣ ಕಾರ್ಯವು ಸುಗಮವಾಗುವುದು".

ವಲಸೆ ಒಂದು ಸಾಮಾಜಿಕ ಪ್ರಕ್ರಿಯೆ. ಇದು ಒಂದು ದೇಶದ ಅಭಿವೃದ್ಧಿಯಲ್ಲಿ ಮಹತ್ವದ ಪಾತ್ರ ವಹಿಸುತ್ತದೆ. ವಲಸೆ ಪ್ರತಿಯೊಂದು ಸಮಾಜದಲ್ಲೂ ನಿರಂತರವಾಗಿ ನಡೆಯುವ ಪರಿಕಲ್ಪನೆ ಯಾಗಿದೆ. ಒಂದು ನಿರ್ದಿಷ್ಟ ಭೂಪ್ರದೇಶದ ಜನಸಂಖ್ಯೆಯ ಗಾತ್ರದ ಬದಲಾವಣೆ, ನಗರೀಕರಣ ಮುಂತಾದ ಅಭಿವೃದ್ಧಿ ಪ್ರಕ್ರಿಯೆಗಳಲ್ಲಿ ವಲಸೆಯ ಪಾತ್ರ ಮಹತ್ವದ್ದಾಗಿದೆ. ವಲಸೆ ಎಂದರೆ ಒಬ್ಬ ವ್ಯಕ್ತಿ ಇಲ್ಲವೇ ಒಂದು ಭಾಷಿಕ ಸಮುದಾಯ ದೈಹಿಕವಾಗಿ ಒಂದು ಸಾಮಾಜಿಕ ಪರಿಸರದಿಂದ ಇನ್ನೊಂದು ಸಾಮಾಜಿಕ ಪರಿಸರದಲ್ಲಿ ಶಾಶ್ವತವಾಗಿ ನೆಲೆಸುವುದು. ಹೀಗೆ ವಲಸೆಯ ವ್ಯಾಖ್ಯೆಯನ್ನು ಸ್ಥೂಲವಾಗಿ ವ್ಯಾಖ್ಯಾನಿಸಬಹುದು. ವಲಸೆ ಅಲ್ಪಕಾಲದ್ದಾಗಿರಬಹುದು ಅಥವಾ ದೀರ್ಘ ಕಾಲದ್ದಾಗಿರಬಹುದು. ಹಾಗೆಯೇ ಋತುಮಾನ ಕಾಲದ ವಲಸೆ ಇರಬಹುದು. ಸಾಮಾನ್ಯವಾಗಿ ವಲಸೆಗೆ ಅನೇಕ ಕಾರಣಗಳುಂಟು. ಉದಾಹರಣೆಗೆ ಬಡತನ, ಬರಗಾಲ, ಉದ್ಯೋಗ, ವ್ಯಾಪಾರ, ಶಿಕ್ಷಣ, ಅತಿವೃಷ್ಟಿ, ಅನಾವೃಷ್ಟಿ, ಭೂಕಂಪ, ಚಂಡಮಾರುತ, ಬಿರುಗಾಳಿ ಇತ್ಯಾದಿ ಒತ್ತಡದ ಅಥವಾ ಹೊರದೂಡುವ ಕಾರಣಗಳಿಂದ ಜನರು ಒಂದು ಗ್ರಾಮೀಣ

ಪ್ರದೇಶದಿಂದ ಮತ್ತೊಂದು ಗ್ರಾಮೀಣ ಪ್ರದೇಶಕ್ಕೆ, ಗ್ರಾಮೀಣ ಪ್ರದೇಶದಿಂದ ನಗರ ಪ್ರದೇಶಕ್ಕೆ, ನಗರ ಪ್ರದೇಶದಿಂದ ಗ್ರಾಮೀಣ ಪ್ರದೇಶಕ್ಕೆ ಮತ್ತು ಒಂದು ನಗರ ಪ್ರದೇಶದಿಂದ ಮತ್ತೊಂದು ನಗರ ಪ್ರದೇಶಕ್ಕೆ ವಲಸೆ ಹೋಗುವುದು ಸಹಜವಾಗಿದೆ.

ಕುಂ.ವೀ. ಅವರು ತಮ್ಮ ಶಿಕ್ಷಣವೃತ್ತಿಯ ಬಹುಭಾಗವನ್ನು ಕರ್ನಾಟಕ-ಆಂಧ್ರ ಗಡಿ ಭಾಗದಲ್ಲಿ ಕಳೆದಿದ್ದಾರೆ. ಆದ್ದರಿಂದ ಅವರ ಕಥೆ ಮತ್ತು ಕಾದಂಬರಿಗಳಲ್ಲಿ ಕನ್ನಡ ನಾಡು ಹಾಗೂ ತೆಲುಗು ಪ್ರದೇಶದ ಗ್ರಾಮೀಣ ಪರಿಸರದ ದಟ್ಟ ಚಿತ್ರಣವಿದೆ. ಅಲ್ಲಿ ನಡೆದ ದೌರ್ಜನ್ಯ, ದಬ್ಬಾಳಿಕೆ, ಜಮೀನ್ದಾರಿ ವ್ಯವಸ್ಥೆ, ರೈತರ ಹೋರಾಟಗಳು ಅವರ ಕತೆಗೆ ವಸ್ತುವಾಗಿವೆ. ಹಳ್ಳಿಯ ಜನರ ಬಡತನದ ದಾರುಣ ಸ್ಥಿತಿ, ದೇವದಾಸಿ ಪದ್ಧತಿ, ಕರ್ನಾಟಕ ಮತ್ತು ಆಂಧ್ರದಲ್ಲಿ ನಡೆಯುವ ಭಯಂಕರ ಕೊಲೆಗಳು ಇವುಗಳ ಹಸಿ ಹಸಿ ಚಿತ್ರಣವನ್ನು ನಾವು ಅವರ ಸೃಜನಶೀಲ ಸಾಹಿತ್ಯ ಹಾಗೂ ತೆಲುಗು ಅನುವಾದ ಸಾಹಿತ್ಯ ಎರಡರಲ್ಲಿಯೂ ಕಾಣಬಹುದಾಗಿದೆ. ಈ ಹಿನ್ನೆಲೆಯಲ್ಲಿ ತೆಲುಗರು ಕನ್ನಡ ನಾಡಿಗೆ ಏಕೆ ವಲಸೆ ಬರುತ್ತಾರೆ ವಲಸೆಯ ಕಾರಣಗಳೇನು ಎನ್ನುವುದನ್ನು ಅವರ ಕಥೆಗಳ ಹಿನ್ನೆಲೆಯಲ್ಲಿ ಚರ್ಚಿಸುವುದು ಸೂಕ್ತವಾಗಿದೆ.

**ಬಳ್ಳಾರಿ ಜಿಲ್ಲೆಯನ್ನು ತೆಲುಗರು ಏಕೆ ಆಯ್ದುಕೊಂಡರು?**

ವಲಸೆ ಹೊರಟ ತೆಲುಗರು ಹತ್ತಿರದ ಜಿಲ್ಲೆಗಳನ್ನು ಬಿಟ್ಟು ಕರ್ನಾಟಕದ ಬಳ್ಳಾರಿ ಜಿಲ್ಲೆಯನ್ನೇ ಏಕೆ ಹೆಚ್ಚಾಗಿ ಆಯ್ದುಕೊಂಡರು? ಅದರಲ್ಲೂ ಬಳ್ಳಾರಿ ಮತ್ತು ಹೊಸಪೇಟೆ ತಾಲೂಕುಗಳನ್ನು ಏಕೆ ಆಯ್ದುಕೊಂಡರು ಎನ್ನುವುದಕ್ಕೆ ಸಾಮಾನ್ಯವಾದ ಕಾರಣಗಳು ಕೆಳಗಿನಂತಿವೆ.

- ೧೯೬೦ರಿಂದ ೧೯೭೦ರ ದಶಕದಲ್ಲಿ ತುಂಗಭದ್ರಾ ಅಣೆಕಟ್ಟು ನಿರ್ಮಾಣದಲ್ಲಿ ದೊರೆತ ಕೂಲಿ ಮತ್ತು ನಂತರದ ನೀರಾವರಿ ಸೌಲಭ್ಯ.
- ಬಳ್ಳಾರಿ ಮತ್ತು ಹೊಸಪೇಟೆ ತಾಲೂಕುಗಳ ಸುತ್ತಮುತ್ತ ಪ್ರದೇಶದಲ್ಲಿ ಯಥೇಚ್ಛವಾಗಿ ಕಡಿಮೆ ದರದಲ್ಲಿ ಸಿಕ್ಕುತ್ತಿದ್ದ ಭೂಮಿ.
- ಇಲ್ಲಿನ ಮೂಲನಿವಾಸಿಗಳ ಸಹಜೀವನದಿಂದ ದೊರೆತ ಪ್ರೋತ್ಸಾಹ.
- ತಮ್ಮ ಹುಟ್ಟೂರಿನಲ್ಲಿ ಸಂಭವಿಸಿದ ಬರಗಾಲ, ಕೋಮುಗಲಭೆಗಳಿಂದ ತತ್ತರಿಸಿದ ಜನತೆಗೆ ಈ ಪರಿಸರದ ಶಾಂತಿ ನೆಮ್ಮದಿ.
- ಈ ಜಿಲ್ಲೆಯ ಔದ್ಯಮೀಕರಣ, ಆಧುನೀಕರಣದಿಂದ ಸೃಷ್ಟಿಯಾದ ವಿವಿಧ ಚಾಕರಿ.

- ಹೊಸ ಪರಿಸರದಲ್ಲಿ ಜೀವಿಸುವ, ಹೊಸ ಜನರೊಡನೆ ಬೆರೆಯುವ, ಹೊಸದನ್ನು ಸ್ವೀಕರಿಸುವ ಹಂಬಲ.
- ಜೀವನದಲ್ಲಿ ಸುಖವಾಗಿ ಬದುಕುವ ಉತ್ಕಟತೆ.
- ವಲಸೆ ಬಂದ ತೆಲುಗರ ಅಭಿವೃದ್ಧಿ ಮತ್ತಷ್ಟು ತೆಲುಗರನ್ನು ಆಕರ್ಷಿಸಿತು.
- ಬಳ್ಳಾರಿ ಜಿಲ್ಲೆಯ ಭಾಷಿಕ ಪರಿಸರ.

ಜಿಲ್ಲೆಯ ಗಡಿ ಪ್ರದೇಶದ ಹೆಚ್ಚಿನ ಭಾಗವು ಆಂಧ್ರದ ತೆಲುಗು ಭಾಷಿಕ ಪ್ರದೇಶಗಳೊಡನೆ ತಾಗಿಕೊಂಡಿದೆ. ಬಳ್ಳಾರಿ ಜಿಲ್ಲೆ ಒಂದು ದ್ವಿಭಾಷಿಕ ಪ್ರದೇಶ. ಅನೇಕ ಶತಮಾನಗಳ ಕಾಲ ಬಳ್ಳಾರಿ ಜಿಲ್ಲೆ ಹಾಗೂ ಆಂಧ್ರದಲ್ಲಿರುವ ಕರ್ನೂಲು, ಕಡಪ, ಅನಂತಪುರ ಜಿಲ್ಲೆಗಳು ಒಂದೇ ಆಡಳಿತಕ್ಕೊಳಪಟ್ಟಿದ್ದವು. ಈ ಪ್ರದೇಶಗಳನ್ನು ಕ್ರಿ.ಶ.೧೮೦೦ರಲ್ಲಿ ಹೈದರಾಬಾದ್ ನಿಜಾಮನು ಬ್ರಿಟಿಷರಿಗೆ ನೀಡಿದ್ದರಿಂದ ಇವುಗಳನ್ನು 'ಸೀಡೆಡ್ ಡಿಸ್ಟ್ರಿಕ್ಟ್' ಎಂದು ಕರೆಯಲಾಗಿದೆ.

**೬.೪. ಇತಿಹಾಸ ಪ್ರಜ್ಞೆ**

ತೆಲುಗರಿಗೂ ಕನ್ನಡರಿಗೂ ಇರುವ ಸಂಬಂಧ ಅತೀ ಪ್ರಾಚೀನವಾದುದು. ಭಾಷಾ ವಿಷಯಕ ವಾಗಿಯೇ ಅಲ್ಲದೆ ಚಾರಿತ್ರಿಕವಾಗಿಯೂ ಕೂಡ ಇವರ ಮಧ್ಯೆ ಹತ್ತಿರದ ಸಂಬಂಧವಿದೆ. ತೆಲುಗು ನಾಡಿನ ಸರಹದ್ದು ರಾಜ್ಯಗಳಲ್ಲಿ ಕನ್ನಡ ನಾಡು ಕೂಡ ಒಂದಾಗಿದೆ. ಮತ ಹಾಗೂ ಸಾಮಾಜಿಕ ವಿಷಯಗಳಲ್ಲೂ ಕೂಡ ಗಾಢವಾದ ಅನುಬಂಧವಿದೆ. ಬಾದಾಮಿಯ ಚಾಲುಕ್ಯರ ಎರಡನೆಯ ಪುಲಿಕೇಶಿಯ ಕಾಲದಲ್ಲಿ ತೆಲುಗು, ಕನ್ನಡಗಳು ಬಳಕೆಯಲ್ಲಿದ್ದ ಪ್ರಾಂತ್ಯಗಳು ಒಂದಾಗಿದ್ದವು. ಪುಲಿಕೇಶಿಯ ತಮ್ಮನಾದ ಕುಬ್ಜ ವಿಷ್ಣುವರ್ಧನನು ತೆಲುಗಿನ ವೆಂಗಿ ಪ್ರದೇಶವನ್ನು ಆಳುತ್ತಿದ್ದನು. ಅಷ್ಟೇ ಅಲ್ಲ, ಪೂರ್ವ ಚಾಲುಕ್ಯರಿಗೆ ಮೂಲ ಪುರುಷನಾದನು. ಕೃಷ್ಣಾ ಗೋದಾವರಿ ನದಿಗಳ ಮಧ್ಯದಲ್ಲಿದ್ದ ಭೂಭಾಗವೇ ವೆಂಗಿದೇಶ.

ಚಾಲುಕ್ಯರೆಲ್ಲರಿಗೂ ಮೂಲವೆಂಬುದು ಬಾದಾಮಿ(ವಾತಾಪಿ) ರಾಜವಂಶ. ಈ ಬಾದಾಮಿ ಉತ್ತರ ಕರ್ನಾಟಕದಲ್ಲಿನ ಬಾಗಲಕೋಟೆ ಜಿಲ್ಲೆಯಲ್ಲಿದೆ. ಅಂದರೆ ಕನ್ನಡ ದೇಶಕ್ಕೆ ಸೇರಿದವರೇ ಆದರೂ ಪೂರ್ವಚಾಲುಕ್ಯರು ತೆಲುಗು ಭಾಷೆಗೆ ಇನ್ನಿಲ್ಲದ ಸೇವೆಯನ್ನು ಮಾಡಿದರು ಎಂದು ನನ್ನಯ ಚೋಡನು ಹೇಳಿದ ಮಾತುಗಳನ್ನು ಇಲ್ಲಿ ನೆನಪು ಮಾಡಿಕೊಳ್ಳಬಹುದು ಯಾಕೆಂದರೆ ಚಾಳುಕ್ಯರು ಆ ದಿನಗಳಲ್ಲಿ ತೆಲುಗು ನಾಡಿನಲ್ಲಿ ಬಳಕೆಯಲ್ಲಿದ್ದ ದೇಶಿ ಛಂದಸ್ಸನ್ನೇ ಪ್ರೋತ್ಸಾಹಿಸಿದ್ದಾರೆ.

ತೆಲುಗು ಕನ್ನಡಿಗರ ಸಂಬಂಧ ವಿಜಯನಗರ ಸಾರ್ವಭೌಮರ ಆಳ್ವಿಕೆಯಲ್ಲಿ ಹಿಂದೆಂದಿಗಿಂತಲೂ ದೃಢವಾಯಿತು. ಕರ್ನಾಟಕ್ಷಿತಿನಾಥರೆಂದು ಕರ್ನಾಟಕ ರಾಜ್ಯಲಕ್ಷ್ಮಿ ಮನೋಹರರೆಂದು

ಅವರು ಕರೆಯಲ್ಪಟ್ಟಿದ್ದರೂ ಆ ಮಹಾರಾಜರು ಪ್ರದರ್ಶಿಸಿದ ತೆಲುಗು ಭಾಷಾಭಿಮಾನ ಪ್ರಶಂಸಾರ್ಹವಾದುದು. ಕವಿ ಸಾರ್ವಭೌಮ ಶ್ರೀನಾಥನಿಗೆ ಕನಕಾಭಿಷೇಕ ಗೌರವ ಲಭಿಸಿದ್ದು ವಿಜಯನಗರ ಆಸ್ಥಾನದಲ್ಲೇ. 'ದೇಶಭಾಷಲಂದು ತೆಲುಗು ಲೆಸ್ಸ' ಎಂದು ತೆಲುಗು ಭಾಷೆಯನ್ನು ಪ್ರಶಂಸಿಸಿದ ಶ್ರೀ ಕೃಷ್ಣದೇವರಾಯ ವಿಜಯನಗರ ಸಾರ್ವಭೌಮನೆ. ಹಾಗಾಗಿ ಅಂದಿನ ಪ್ರಭುಗಳಿಗೆ ತೆಲುಗು ಭಾಷಾ ಸಾಹಿತ್ಯಗಳ ಬಗ್ಗೆ ಅಪಾರವಾದ ಆದರ ಭಾವನೆ ಇತ್ತೆಂದು ನಿಸ್ಸಂಶಯವಾಗಿ ಹೇಳಬಹುದು. ಹೆಸರಿಗೆ ರಾಯನು ಕನ್ನಡಿಗನೇ ಆದರೂ ಆತನು ತೆಲುಗನ್ನು ಕೀರ್ತಿಸಿದ. ಈ ರೀತಿ ತೆಲುಗಿನಲ್ಲಿ ಮಹಾಕಾವ್ಯ ನಿರ್ಮಾಣಮಾಡುವ ಪಾಂಡಿತ್ಯ ವೈಭವ ನಿಜವಾಗಿಯೂ ಮೆಚ್ಚತಕ್ಕದ್ದಾಗಿದೆ. ಕರ್ನಾಟಕ ಆಂಧ್ರಗಳೆರಡೂ ಒಂದೇ ರಾಜಕೀಯ ಆಳ್ವಿಕೆಗೆ ಒಳಪಟ್ಟು ಬಹಳ ಕಾಲ ಇದ್ದುದರಿಂದ ಎರಡೂ ಭಾಷೆ ಮತ್ತು ಸಂಸ್ಕೃತಿಗಳಲ್ಲಿ ಬಹಳಷ್ಟು ಸಮಾನಾಂಶಗಳು ಬೆಳೆದು ಬಂದಿವೆ. ಶಾತವಾಹನರು ಕ್ರಿ.ಪೂ. ೨೩೦ರಿಂದ ೨೨೫ರವರೆಗೆ ಎರಡೂ ಭಾಗಗಳನ್ನು ಕೂಡಿಯೇ ಆಳಿದರು. ಕ್ರಿ.ಶ. ೬ನೆಯ ಶತಮಾನದಿಂದ ಕ್ರಿ.ಶ.೮ನೇ ಶತಮಾನದವರೆಗೆ ಚಾಲುಕ್ಯರು ಆಳಿದರು. ಕರ್ನಾಟಕ ಚಾಲುಕ್ಯರಲ್ಲೇ ಕವಲೊಡೆದ ಪೂರ್ವ ಚಾಳುಕ್ಯರು ಕ್ರಿ.ಶ. ೭೯ರಿಂದ ಪ್ರತ್ಯೇಕವಾಗಿ ಆಳತೊಡಗಿದಾಗಿನಿಂದ ತೆಲುಗು ಭಾಷೆಗೂ ಮಹತ್ವ ದೊರೆತು ಸ್ವಂತಿಕೆಯನ್ನು ಕಂಡುಕೊಳ್ಳಲು ಅನುಕೂಲವಾಯಿತು. ನಂತರ ಕ್ರಿ.ಶ. ೧೪ನೇ ಶತಮಾನಗಳ ಅವಧಿಯಲ್ಲಿ ಆಳಿದ ವಿಜಯನಗರದ ಅರಸರು ಎರಡೂ ಪ್ರಾಂತ್ಯಗಳನ್ನು ಏಕಛತ್ರದಡಿಯಲ್ಲಿ ಬೆಸೆದರು.

ಆದರೆ ರಾಜಾಶ್ರಯದ ದೃಷ್ಟಿಯಿಂದ ಎರಡೂ ಸಾಹಿತ್ಯಗಳ ಬೆಳವಣಿಗೆಯು ಭಿನ್ನವಾಗಿ ರುವುದು ಕಂಡುಬರುತ್ತದೆ. ಪ್ರಾರಂಭದ ಜೈನಸಾಹಿತ್ಯ ಮತ್ತು ನಂತರದ ಮೈಸೂರು ಅರಸರ ಕಾಲದ ಸಾಹಿತ್ಯಗಳು ಮಾತ್ರ ಕನ್ನಡದಲ್ಲಿ ರಾಜಾಶ್ರಯದಲ್ಲಿ ಬೆಳೆದಿರುವುದು ಕಂಡುಬರುತ್ತದೆಯೇ ಹೊರತು ಉಳಿದಂತೆ ರಾಜಾಶ್ರಯದಿಂದ ದೂರವಾಗಿಯೇ ಇದ್ದು ಬೆಳೆದಿರುವುದು ಒಂದು ವೈಶಿಷ್ಟ್ಯವಾಗಿದೆ. ಪ್ರಾರಂಭದ ಜೈನಕಾವ್ಯವು ರಾಜಾಶ್ರಯದಲ್ಲೇ ಬೆಳೆದರೂ ವೀರಶೈವ ಸಾಹಿತ್ಯ ಕ್ರಾಂತಿಯ ನಂತರ ಕನ್ನಡ ಕಾವ್ಯವು ರಾಜಾಶ್ರಯದಿಂದ ದೂರ ಸರಿಯಿತು. ವಚನ ಸಾಹಿತ್ಯವಂತೂ ಪೂರ್ಣವಾಗಿ ಜನಕಾವ್ಯವೇ ಆಗಿದೆ.

ಕನ್ನಡದ ಈ ಪರಂಪರೆಗೆ ವಿರುದ್ಧವಾಗಿ ತೆಲುಗಿನ ಶಿಷ್ಟಸಾಹಿತ್ಯ ರಾಜಾಶ್ರಯವನ್ನೇ ನಂಬಿ ಬೆಳೆದಿರುವುದು ಎದ್ದು ಕಾಣುತ್ತದೆ. ಕನ್ನಡ ಭೂಮಿಯಲ್ಲಿಯೇ ವಿಶ್ವವಿಖ್ಯಾತವಾಗಿ ಮೆರೆದ ವಿಜಯನಗರದ ಆಸ್ಥಾನದಲ್ಲಿ ಮೆರೆದವರು ಆಂಧ್ರಕವಿಗಳು ಎಂಬುದು ವಿಚಿತ್ರವಾದರೂ ಸತ್ಯ. ತೆಲುಗಿನ ನಾಚನಸೋಮನು ಬುಕ್ಕರಾಯನಿಂದ ಸನ್ಮಾನಿತನಾದವನು. ಶ್ರೀನಾಥ

ಮಹಾಕವಿಯು ಪ್ರೌಢದೇವರಾಯನಿಂದ ಕನಕಾಭಿಷೇಕವನ್ನು ಮಾಡಿಸಿಕೊಂಡನು. ಕೃಷ್ಣದೇವ ರಾಯನ ಆಸ್ಥಾನವಂತೂ ತೆಲುಗಿನ ಅಷ್ಟದಿಗ್ಗಜ ಮಹಾಕವಿಗಳಿಂದ ಪ್ರಸಿದ್ಧವಾಗಿತ್ತು. ಆಗಿನ ಹಿರಿಯ ಕವಿ ಅಲ್ಲಸಾನಿ ಪೆದ್ದನನ ಕಾಲಿಗೆ ತಾನೇ ಮುತ್ತಿನ ಪೆಂಡೆಯನ್ನು ಧರಿಸಿ ಪಲ್ಲಕ್ಕಿಯಲ್ಲಿ ಕೂಡಿಸಿ ಕೃಷ್ಣದೇವರಾಯನು ಹೊತ್ತು ಮೆರೆಸಿದನು.

ಕನ್ನಡದ ಯಾವ ಕವಿಗೂ ಇಂಥ ಸನ್ಮಾನಗಳು ದೊರೆತಿಲ್ಲ. ಈ ಕವಿಗಳಿಗೆ ರಾಜಮರ್ಯಾದೆ ಬೇಕಿರಲಿಲ್ಲ. ತೆಲುಗಿನ ಧೂರ್ಜಟಿ, ಪೋತನರು ಮಾತ್ರ ಈ ದೃಷ್ಟಿಯಿಂದ ಅಪವಾದಗಳಂತೆ ಕಂಡುಬರುತ್ತಾರೆ. ವೇಮನನ ಬಗ್ಗೆ ಈ ಮಾತೇ ಬರುವುದಿಲ್ಲ ಆತನು ಜನಕವಿ. ಕನ್ನಡದ ಸರ್ವಜ್ಞನನ್ನು ಅನೇಕ ಬಗೆಗಳಲ್ಲಿ ಹೋಲುವ ಕವಿ. ರಾಜಾಶ್ರಯದ ತೊಟ್ಟಿಲಲ್ಲಿ ಬೆಳೆದ ತೆಲುಗು ಸಾಹಿತ್ಯವು ಕೆಲವು ವಿಲಕ್ಷಣತೆಗಳನ್ನು ಮೈಗೂಡಿಸಿಕೊಂಡಿರುವುದು ಕಾಣುತ್ತದೆ. ಕವಿಗಳು ತಮ್ಮ ಕಾವ್ಯವನ್ನು ತಮ್ಮ ಆಶ್ರಯದಾತ(ರಾಜ, ಮಂತ್ರಿ, ಮಾಂಡಲಿಕ, ಸೇನಾಪತಿಗಳಿಗೆ)ರಿಗೆ ಅಂಕಿತ ಮಾಡುವ ಪದ್ಧತಿ ಅವುಗಳಲ್ಲೊಂದು. ಕನ್ನಡದಲ್ಲಿ ಇಲ್ಲದ ಪ್ರಬಂಧಕಾವ್ಯ ಎಂಬ ಪ್ರಕಾರ, ಅಷ್ಟಾವಧಾನ, ಶತಾವಧಾನಗಳ ಪಾಂಡಿತ್ಯ ಪ್ರದರ್ಶನ ಪದ್ಧತಿಗಳು ಮೋಡಿ ಹಾಕುವ ಗಂಭೀರ ನಾಟಕೀಯ ವಾಗ್ಮಿತೆ, ಸಂಸ್ಕೃತಭೂಯಿಷ್ಠತೆ ಮುಂತಾದ ವೈಶಿಷ್ಟ್ಯಗಳು ತೆಲುಗು ಭಾಷಾ ಸಾಹಿತ್ಯದಲ್ಲಿ ಕಂಡುಬರುತ್ತವೆ.

**೬.೫. ಸಾಮಾಜಿಕ ಪ್ರಜ್ಞೆ**

ಸಮಾಜವೆಂದರೆ ಕೇವಲ ಮನುಷ್ಯರ ಸಮೂಹವಲ್ಲ. ಪ್ರಕೃತಿ–ಮನುಷ್ಯರ ಪರಸ್ಪರ ಸಂಬಂಧಗಳ ಮೂಲಕ ಸಮಾಜವು ಬೆಳೆದು ಬಂದಿದೆ. ಹಲವರು ವ್ಯಕ್ತಿಗಳು ಒಡನಾಡುತ್ತ ಬಾಳುವ ಸಮಷ್ಟಿ ಅಸ್ತಿತ್ವವು ಸಮಾಜವಾಗುತ್ತದೆ. ಪ್ರಾಣಿಗಳಲ್ಲೂ ಕೂಡಿ ಬಾಳುವ ಲಕ್ಷಣವು ಸಾಮಾನ್ಯವಾಗಿರುವುದು ಕಂಡುಬರುತ್ತದೆ. ಆದರೆ ಬುದ್ಧಿ, ಭಾಷೆ, ಕಲ್ಪನೆ, ವ್ಯವಸ್ಥೆ ಮುಂತಾದವುಗಳ ಬೆಳವಣಿಗೆಗಳು ಪ್ರಾಣಿ ಸಮಾಜಗಳಿಂದ ಮಾನವಸಮಾಜವು ಬೇರೆಯ ರೀತಿಯಲ್ಲಿರುವಂತೆ ಮಾಡಿವೆ.

"ಸಮಾಜದ ಅರ್ಥ–ಜಾತಿ, ಮತ, ಜನಾಂಗ, ಪೌರಾತ್ಯ, ಪಾಶ್ಚಿಮಾತ್ಯ ರಾಷ್ಟ್ರ ರಾಜ್ಯಗಳಿಂದ ವಿಶ್ವದವರೆಗೆ ವ್ಯಾಪಿಸುತ್ತದೆ. ಭೌತಿಕ ನಿಕಟತೆಯಿಂದ ಹಿಡಿದು ಮಾನಸಿಕ ಪರಿಭಾವನೆ ಚಾಚುವವರೆಗೂ ಮಾನವಸಮಾಜದ ಪರಿಧಿಗಳನ್ನು ಗುರುತಿಸಬಹುದು. ಆದರೆ ಅನುಭವಗ್ರಾಹ್ಯ ವಾದ ಒಂದು ಪರಿಕಲ್ಪನೆಯನ್ನು ನಮ್ಮ ಅನುಕೂಲಕ್ಕಾಗಿ ಸ್ವೀಕರಿಸಬೇಕಾಗುತ್ತದೆ. "ಒಂದು ವಿಶಿಷ್ಟ ಭೌಗೋಲಿಕ ಸೀಮೆಯನ್ನು ಹೊಂದಿರುವ, ಸಾಮಾನ್ಯವಾದ ಸಾಂಸ್ಕೃತಿಕ ಸಂಪರ್ಕಗಳ ಹಿನ್ನೆಲೆಯನ್ನು ಪಡೆದಿರುವ ಹಾಗೂ ಒಂದು ವಿಶಿಷ್ಟ ರಾಜಕೀಯ ವ್ಯವಸ್ಥೆಯೊಳಗೆ ಬದುಕುತ್ತಿರುವ

ಜನರ ಸಮೂಹವನ್ನು ಒಂದು ಸಮಾಜ" ಎಂದು ಸ್ವೀಕರಿಸಬಹುದು. ಇದು ರಾಷ್ಟ್ರದ ಪರಿಕಲ್ಪನೆಗೆ ಸಂವಾದಿಯಾಗಿದೆ.

**ಸಾಮಾಜಿಕ ವ್ಯವಸ್ಥೆಯ ದೃಷ್ಟಿಯಿಂದ ಕನ್ನಡ ಮತ್ತು ತೆಲುಗು ಸಾಹಿತ್ಯದಲ್ಲಿ ಕಂಡುಬರುವ ಅಂಶಗಳು:**

೧. ಆದಿಮಾನವ ಹಂತ

೨. ಶ್ರಮವಿಭಜನೆಯ ಹಂತ

೩. ಊಳಿಗಮಾನ್ಯ ಹಂತ

೪. ಬಂಡವಾಳಶಾಹಿ ಹಂತ

೫. ಶ್ರಮಿಕ ಸಮಾಜ ಹಂತ

**೧. ಆದಿಮಾನವ ಹಂತ**

ಮಾನವನು ತನ್ನ ಎರಡು ಕಾಲುಗಳ ಮೇಲೆ ದೃಢವಾಗಿ ನಡೆದಾಡಲು ಹಾಗೂ ಕೈಗಳಲ್ಲಿ ಆಯುಧಗಳನ್ನು ಹಿಡಿದು ಬಳಸಲು ಕಲಿತದ್ದು ವಿಕಾಸದ ಮೊದಲ ಹಂತ. ಶಿಲೆಗಳನ್ನೇ ಆಯುಧಗಳನ್ನಾಗಿ ಮಾಡಿಕೊಂಡು ಬೇಟೆಯಾಡುತ್ತಾ ಗವಿಗಳಲ್ಲಿ ಬದುಕುತ್ತಾ ಇದ್ದ ಆದಿಮಾನವ ಹೆಚ್ಚು ಕಡಿಮೆ ಪ್ರಾಣಿಗಳಂತೆಯೇ ಬಾಳುತ್ತಿದ್ದ. ರಕ್ಷಣೆಯ ಅನುಕೂಲತೆಗಳನ್ನು(ದೇಹ–ವಸತಿ) ಬೆಂಕಿಯ ಉಪಯೋಗವನ್ನು ಕಲಿತುಕೊಂಡ ಅವನು ಕೇವಲ ಉದ್ಗಾರ ರೂಪವಾಗಿದ್ದ ಕೂಗುಗಳಲ್ಲಿ ಭಾಷೆಯನ್ನು ರೂಪಿಸಿಕೊಳ್ಳುತ್ತ ಬಂದನು. ಭಾಷೆಯು ಅವನ ಪ್ರಜ್ಞೆಯು ರೂಪುಗೊಳ್ಳಲು ಪ್ರಧಾನವಾದ ಸಾಧನವಾಯಿತು.

ಗವಿಗಳಿಂದ ಗುಡಿಸಲುಗಳಿಗೆ, ಅಡವಿಯಿಂದ ಊರುಗಳಿಗೆ ಅವನ ಜೀವನ ಸ್ಥಿತ್ಯಂತರಗೊಂಡ ಸಾವಿರಾರು ವರ್ಷಗಳ ಅವಧಿಯಲ್ಲಿ ಸಾಕಷ್ಟು ಬದಲಾವಣೆಗಳು ಅವನ ಬದುಕಿನ ರೀತಿ ನೀತಿಯಲ್ಲಿ ಸಾಕಷ್ಟು ಆಗಿವೆ. ಬೇಟೆಯೊಡನೆಯೇ ಪಶುಪಾಲನೆ, ಬೇಸಾಯ ವೃತ್ತಿಗಳನ್ನು ಕಲಿತು ಊರುಗಳಲ್ಲಿ ಗುಂಪು ಗುಂಪಾಗಿ ವಾಸಿಸುವಷ್ಟು ಹೊತ್ತಿಗೆ ವೃತ್ತಿವಿಭಜನೆಯು ಸರಳ ರೂಪದಲ್ಲಿ ತಲೆದೋರಿತ್ತು ಆದರೆ ಜಾತಿ–ವರ್ಗಗಳ ಕಟ್ಟುಪಾಡಾಗಲೀ ಧಾರ್ಮಿಕ ಬೌದ್ಧಿಕ ಶೋಷಣೆಯಾಗಲೀ, ಹಣ–ಆಸ್ತಿ, ವ್ಯಾಪಾರಗಳ ಪದ್ಧತಿಗಳಾಗಲೀ ರಾಜರುಗಳ ರಾಜ್ಯಭಾರ ವ್ಯವಸ್ಥೆಯಾಗಲೀ ಇನ್ನೂ ಪ್ರವೇಶ ಮಾಡಿಲ್ಲದಂಥ ಹಂತದಲ್ಲಿ ಆದಿಮಾನವ ಸಮಾಜವು ಒಂದು ಬಗೆಯ ಸರಳವಾದ ಸ್ಥೂಲವಾದ ಕಮ್ಯೂನಿಜಂ ವ್ಯವಸ್ಥೆಯಂತಿತ್ತು.

**೨. ಶ್ರಮವಿಭಜನೆಯ ಹಂತ**

ಶಿಲಾಯುಗದ ನಂತರದ್ದು ಕಬ್ಬಿಣಯುಗ, ಕಬ್ಬಿಣದ ಉಪಯೋಗವು ಮಾನವ ಜೀವನದಲ್ಲಿ ಅನೇಕ ಬದಲಾವಣೆಗಳನ್ನು ತಂದಿತು. ಹೋರಾಟ ಆಯುಧಗಳು, ವಾಸ ಉದ್ಯೋಗಗಳ

ಸಾಮಗ್ರಿಗಳು, ವಾಹನಗಳು ಮುಂತಾದುವೆಲ್ಲ ಕಂಡುಹಿಡಿಯಲ್ಪಡುತ್ತ ರಾಜ್ಯಭಾರಕ್ರಮ ಕೋಟೆ ಕೊತ್ತಲುಗಳು, ಪಟ್ಟಣಗಳು, ಆಕ್ರಮಣ, ಯುದ್ಧ, ಸೈನ್ಯವ್ಯವಸ್ಥೆ ಮುಂತಾದವು ನಿಶ್ಚಿತ ವ್ಯವಸ್ಥೆಯಾಗಿ ಸಮಾಜರೂಪ ಹೊಂದುವಂತೆ ಮಾಡಿದವು. ಹಿಂದಿನ ಯುಗದಲ್ಲಿ ಸ್ಥೂಲವಾಗಿ ವೃತ್ತಿವಿಭಜನೆ ಪ್ರಾರಂಭವಾಗಿದ್ದರೂ ಈಗ ಅವು ಹೆಚ್ಚು ವಿಶಿಷ್ಟವೂ ಕ್ರಮಬದ್ಧವೂ ಆದವು. ಲಿಪಿಶೋಧ, ವಿದ್ಯೆ, ಧರ್ಮಾಚರಣೆಗಳು ಒಂದು ಹೊಸ ಶೋಷಕವರ್ಗವು ಹುಟ್ಟಿಕೊಳ್ಳಲು ಕಾರಣವಾದವು.

ಈ ಹಂತದಲ್ಲಿಯೇ ಸ್ವಂತ ಆಸ್ತಿಯನ್ನು ಹೊಂದುವ ಮೇಲಾಟ ಶುರುವಾಯಿತು. ಧರ್ಮ ಪ್ರತ್ಯೇಕತೆ, ಆರ್ಥಿಕ ವಾದ, ವಿಂಗಡಣೆ, ಶ್ರಮವಿಭಜನೆಯ ಪ್ರತ್ಯೇಕ ಪಂಗಡಗಳು ತಲೆದೋರಿದವು. ವೃತ್ತಿಗಳು ಜಾತಿಗಳಾಗಿ ದೇಹಶ್ರಮದಿಂದ ಬದುಕುವ ವರ್ಗಗಳು ರಾಜರು, ಪುರೋಹಿತರು, ವ್ಯಾಪಾರಿಗಳಿಗಿಂತ ಕೀಳಾಗಿ ಪರಿಗಣಿಸಲ್ಪಟ್ಟವು. ಜಾತಿಭೇದಗಳನ್ನು ಮೇಲುಕೀಳುಗಳನ್ನು ತಲೆತಲಾಂತರ ವಾಗಿ ನಡೆಸಿಕೊಂಡು ಹೋಗುವುದೇ ಧರ್ಮ ಎಂದು ಸಾರಲಾಯಿತು. ಅದಕ್ಕೆ ತಕ್ಕಂಥ ಶಾಸ್ತ್ರ, ಪುರಾಣ, ಸ್ಮೃತಿ, ಆಗಮಾದಿಗಳನ್ನು ರಚಿಸಲಾಯಿತು. ಶೂದ್ರರಿಗೆ ಮತ್ತು ಸ್ತ್ರೀಯರಿಗೆ ವಿದ್ಯೆ–ಧರ್ಮಗಳ ಅಧಿಕಾರವನ್ನು ನಿಷೇಧಿಸಲಾಯಿತು.

**೩. ಊಳಿಗಮಾನ್ಯ ಹಂತ**

ಈ ಹಿಂದೆ ಆಯಾ ಗುಂಪುಗಳ ಒಡೆಯರು ಇದ್ದು ಗುಂಪು ಗುಂಪುಗಳ ನಡುವೆ ತಿಕ್ಕಾಟಗಳು ನಡೆಯುತ್ತಿದ್ದವು. ಗೆದ್ದವರು ಸೋತವರನ್ನು ಆಳುವುದು, ಅವರ ಪ್ರಾಂತಗಳನ್ನು ಆಕ್ರಮಿಸುವುದು ನಡೆಯುತ್ತಿತ್ತು. ಜನರು ಹೊಸ ಹೊಸ ಸೌಲಭ್ಯಗಳನ್ನು ಕಂಡುಕೊಂಡಂತೆಲ್ಲ ರಾಜ್ಯಭಾರ ಕ್ರಮವು ವ್ಯವಸ್ಥಿತವಾಗಿ ರೂಪಗೊಂಡು ಸಾಮ್ರಾಜ್ಯಗಳನ್ನು ಬೆಳೆಸುವ ಚರಿತ್ರೆ ಪ್ರಾರಂಭವಾಯಿತು. ಚರಿತ್ರೆ ಎಂದರೆ ರಾಜರ ಹೋರಾಟ, ಸೋಲು–ಗೆಲುವು, ವೈಭವಾದಿಗಳ ವರ್ಣನೆಯೇ ಎಂಬಂತೆ ಕಳೆದ ಶತಮಾನದವರೆಗೂ ಸಾಗಿಬಂದುದನ್ನು ನೋಡುತ್ತೇವೆ. ಚರಿತ್ರೆಕಾರರು ಹೀಗೆಯೇ ಬರೆಯುತ್ತಾ ಬಂದಿದ್ದಾರೆ. ಸಾಮಾನ್ಯ ಜನತೆಯ ದೃಷ್ಟಿಯಿಂದ ನೋಡಿದರೆ ರಾಜನ ನಿರಂಕುಶ ಸಾರ್ವಭೌಮತ್ವ ಧರ್ಮಗುರುಗಳು ಮತ್ತು ಪುರೋಹಿತವರ್ಗದ ಬೌದ್ಧಿಕ ಶೋಷಣೆ ಹಾಗೂ ಧನಿಕರ, ವರ್ತಕರ ಆರ್ಥಿಕ ಶೋಷಣೆ ಈ ರಾಜಸತ್ತೆಯಲ್ಲಿ ಕಾಣಿಸುತ್ತವೆ. ಸಮಾಜದ ಎಲ್ಲಾ ಕೆಳವರ್ಗದವರನ್ನು ಓದಿಲ್ಲದ ಅಜ್ಞಾನದ ರೂಪದಲ್ಲಿ ನೂಕಿ ವ್ಯವಸ್ಥಿತವಾದ ದಬ್ಬಾಳಿಕೆಯು ಸಾಗುತ್ತ ಬಂದಿರುವುದನ್ನು ಕಾಣುತ್ತೇವೆ. ಜನರು ಸಮಾನತೆ, ಸ್ವಾತಂತ್ರ್ಯ ಮತ್ತು ಬೌದ್ಧಿಕ ಸಾಧನೆಗಳಿಗೆ ಎರವಾಗಿ ದಾಸ್ಯವನ್ನೇ ಜೀವನಮಾರ್ಗವಾಗಿ ಕ್ರಮಿಸುತ್ತಾ ಬಂದರು. ಜನರ ಪೌರುಷವನ್ನು ಮತ್ತು ಸಾಹಸ ಮನೋಭಾವವನ್ನು ನಾಶ ಮಾಡುವಂತೆ ಮತಧರ್ಮಗಳ ಬೋಧನೆಗಳು ಮಾಡಿದುದರಿಂದಲೇ ಭಾರತದ ಜನರು

ಪರಕೀಯಾಕ್ರಮಣಗಳಿಗೆ ಸರಿಯಾದ ಪ್ರತಿಕ್ರಿಯೆಯನ್ನು ತೋರಿಸದೆ ಪರದೇಶಿಗಳ ಕೈಯಲ್ಲಿ ದಾಸ್ಯಕ್ಕೆ ತುತ್ತಾಗುವಂತಾಯಿತು.

**೪. ಬಂಡವಾಳಶಾಹಿ ಹಂತ**

ಪಾಶ್ಚಾತ್ಯ ದೇಶಗಳಲ್ಲಿ ವಿಜ್ಞಾನ ತಂತ್ರಜ್ಞಾನಗಳ ಸಂಶೋಧನೆಗಳು ದೊಡ್ಡ ಕೈಗಾರಿಕೆಗಳನ್ನು ಪ್ರಾರಂಭಿಸಲು ತೊಡಗಿದವು. ವ್ಯಾಪಾರಕ್ಕಾಗಿ ವಸಾಹತು ರಾಷ್ಟ್ರಗಳನ್ನು ಶೋಧಿಸಲು ಮತ್ತು ಆಕ್ರಮಿಸಲು ನೆರವಾದವು. ವಿಜ್ಞಾನ ಸೌಲಭ್ಯಗಳ ಬಲದಿಂದ ಯುರೋಪಿನ ಚಿಕ್ಕಪುಟ್ಟ ದೇಶಗಳು ಆ ದೃಷ್ಟಿಯಿಂದ ಹಿಂದುಳಿದಿದ್ದ ಖಂಡಗಳನ್ನು ಆಕ್ರಮಿಸಿಕೊಂಡವು. ಅವುಗಳಲ್ಲಿ ಬ್ರಿಟನ್ನಿನದು ಮೇಲುಗೈಯಾಗಿ 'ಸೂರ್ಯ ಮುಳಗದ ಸಾಮ್ರಾಜ್ಯ'ದ ಸಾಧನೆಯನ್ನು ತೋರಿಸಿತು. ಈ ವಸಾಹತುಶಾಹಿ ಯುಗದಲ್ಲಿ ಕೈಗಾರೀಕರಣ, ಯಾಂತ್ರೀಕರಣ, ನಗರೀಕರಣಗಳು ಮತ್ತು ಜಾಗತಿಕ ವಾಣಿಜ್ಯ ಮಾರುಕಟ್ಟೆಗಳು ಬೆಳೆದವು. ಇದರಿಂದ ಹಿಂದಿನ ಊಳಿಗಮಾನ್ಯ ವ್ಯವಸ್ಥೆಯು ಸಡಿಲಿಸಿತು. ಬಂಡವಾಳಗಾರರು ಮೇಲುಗೈಯಾದರು. ಈ ಹೊಸ ವ್ಯವಸ್ಥೆಯು ಸ್ವತಂತ್ರ ಮಾರುಕಟ್ಟೆಯ ಹೆಸರಿನಲ್ಲಿ ವಸಾಹತು ದೇಶಗಳನ್ನು ದೋಚುವ ಕೆಲಸವನ್ನು ಭರದಿಂದ ಮಾಡಿತು. ಇದರಿಂದ ಗ್ರಾಮೋದ್ಯೋಗಗಳು ನಶಿಸಿದವು. ಮಾನವೀಯ ಸಂಬಂಧಗಳು ಕೃತಕವಾದವು. ಬೃಹತ್ ನಗರಗಳು ಬೆಳೆದವು. ಹಳ್ಳಿಗಳು ಪಟ್ಟಣಗಳ ಮೇಲೆ ಬಡದೇಶಗಳು ಶ್ರೀಮಂತ ದೇಶಗಳ ಮೇಲೆ ಅವಲಂಬಿಸು ವಂತಾಯಿತು. ಶ್ರಮಜೀವಿಯು ಬಂಡವಾಳಗಾರನಿಗೆ ದಾಸನಾಗಿರುವುದಷ್ಟೇ ಅಲ್ಲದೆ ಯಂತ್ರಗಳಿಗೂ ದಾಸನಾಗಬೇಕಾಯಿತು. ಹಣ ಕೈಗೆ ಬಂದಾಗ ಅದಕ್ಕೂ ದಾಸನಾಗಬೇಕಾಯಿತು. ಅವನು ಬೂರ್ಜ್ವಾ ಹಿತಸಾಧಕವಾದ ಕಾನೂನು ನೀತಿ, ಧರ್ಮಗಳ ಬಲಿಪಶುವಾದನು.

ಈ ಬಂಡವಾಳಶಾಹಿ ಯುಗವು ಯುರೋಪಿನಲ್ಲಿ ೧೯ನೇ ಶತಮಾನದಲ್ಲಿಯೇ ಚೆನ್ನಾಗಿ ಬೆಳೆದಿತ್ತು. ಭಾರತದಲ್ಲಿ ಅದು ಪ್ರಾರಂಭವಾದದ್ದು ಈ ಶತಮಾನದಲ್ಲೇ. ಈ ಯುಗವನ್ನು ಆಧುನಿಕ ಯುಗವೆಂದು ಕರೆಯುತ್ತಾರೆ. ಇದು ವಿಜ್ಞಾನದ ಯುಗವೂ ಹೌದು. ಈ ಯುಗದಲ್ಲಿ ಸಂಪರ್ಕ ಸಾಧನೆಗಳಿಂದಾಗಿ ದೇಶಗಳೆಲ್ಲ ಸಮೀಪವಾಗಿವೆ. ವಿಜ್ಞಾನಶಾಸ್ತ್ರಗಳು, ತಂತ್ರಜ್ಞಾನ ಸಾಧನೆಗಳು, ಆಧುನಿಕ ಸೌಲಭ್ಯಗಳು, ಉದ್ದಿಮೆಗಳು ಇವೆಲ್ಲ ಹಿಂದುಳಿದ ರಾಷ್ಟ್ರಗಳಲ್ಲಿ ಹರಡಿದವು. ರಾಷ್ಟ್ರೀಯ ಪ್ರಜ್ಞೆಯು ಬೆಳೆದು ಅವು ಸ್ವತಂತ್ರವಾಗಲು ಸಾಧ್ಯವಾಗಿದ್ದು ಈ ಯುಗದಲ್ಲೇ. ಹಿಂದಿನ ಸಮಾಜದ ವ್ಯವಸ್ಥೆಗಳು ಸಡಿಲವಾಗಿ ಮೌಢ್ಯತೆಗಳು ಕಡಿಮೆಯಾಗಲು ಪಾಶ್ಚಾತ್ಯ ಪ್ರಭಾವವು ಕಾರಣವಾಗಿದೆ. ಜೊತೆಗೆ ಅಲ್ಲಿಯ ದೋಷಗಳೆಲ್ಲ ಹಸಿಹಸಿಯಾಗಿ ಅನುಕರಿಸಲ್ಪಡುವುದಕ್ಕೂ ಕಾರಣವಾಗಿದೆ.

ವಿಜ್ಞಾನದ ಶೋಧಗಳು ಮಾನವಸಮಾಜದ ಕಲ್ಯಾಣದ ಗುರಿಗೆ ಅಂಕಿತವಾಗಿರದೆ ಸ್ವಾರ್ಥ ಸಾಮ್ರಾಜ್ಯಶಾಹಿಗಳ ಸರ್ವಾಧಿಕಾರಶಾಹಿಗಳ ಕೈಗೆ ಸಿಕ್ಕರೆ ಎಂಥ ಭಯಂಕರ ದುಷ್ಪರಿಣಾಮಗಳಾಗುತ್ತವೆಂಬುದನ್ನು ಈ ಶತಮಾನದ ಪೂರ್ವದಲ್ಲಿ ನಡೆದ ಮಹಾಯುದ್ಧಗಳು ಜಗತ್ತಿಗೆ ತೋರಿಸಿಕೊಟ್ಟಿವೆ. ಎಲ್ಲಾ ರಾಷ್ಟ್ರಗಳ ಪರಸ್ಪರ ಸ್ನೇಹ ಸೌಹಾರ್ದತೆಯ ಅನಿವಾರ್ಯತೆಯನ್ನು ಸಿದ್ಧ ಮಾಡಿತೋರಿಸಿವೆ.

**೫. ಶ್ರಮಿಕ ಹಂತ**

ಬೂರ್ಜ್ವಾಶಾಹಿ ವ್ಯವಸ್ಥೆಯಿಂದ ಸಮಾಜವು ಕ್ರಮಿಸಬೇಕಾದ ಹಂತವೇ ಶ್ರಮಜೀವಿಗಳ ಸಮಾಜ. ಇದರಲ್ಲಿ ದುಡಿಮೆಗಾರರಿಗೆ ಅತ್ಯಂತ ಮಹತ್ವವಿದೆ. ಈ ಲೋಕದ ಬದುಕಿಗೆ ಎಲ್ಲರೂ ಸಮಾನರು ಎಂಬ ತತ್ವದ ಕಾರ್ಯರೂಪ ಇದು. ಸಮಾಜದ ವ್ಯಕ್ತಿಗಳ ಎಲ್ಲ ಆಸ್ತಿಯೂ ಇಡೀ ರಾಷ್ಟ್ರದ ಆಸ್ತಿ. ವ್ಯಕ್ತಿ ಆಸ್ತಿಗೆ ಆಸ್ಪದವಿಲ್ಲ. ಎಲ್ಲರೂ ದುಡಿಯಬೇಕಾದುದು ಸಮಾಜಕ್ಕಾಗಿ. ಕಮ್ಯುನಿಸ್ಟ್ ಆಡಳಿತ ವ್ಯವಸ್ಥೆಯು ಎಲ್ಲಾ ಉತ್ಪನ್ನಗಳ ಸಮಾನ ಹಂಚಿಕೆಯನ್ನು ಮಾಡುತ್ತದೆ. ದುಡಿಯದೇ ತಿನ್ನುವುದನ್ನು ಹೇಳುವ ಯಾವುದೇ ನಂಬಿಕೆಗಳಿಗೆ, ಮೌಲ್ಯಗಳಿಗೆ ಪದ್ಧತಿಗಳಿಗೆ ಇಲ್ಲಿ ಸ್ಥಾನವಿಲ್ಲ. ಜಗತ್ತಿನ ತಾತ್ವಿಕತೆಯ(ರಾಜಕೀಯ, ಸಾಮಾಜಿಕ, ಆರ್ಥಿಕ, ಪಾರಮಾರ್ಥಿಕ) ದೃಷ್ಟಿಕೋನವನ್ನೇ ಬದಲಿಸಿ ಹೊಸ ತತ್ವದ ಬೆಳಕನ್ನು ನೀಡಿದ ಕಾರ್ಲ್ ಮಾರ್ಕ್ಸ್‌ನು ಕಮ್ಯುನಿಸ್ಟ್ ಸಿದ್ಧಾಂತದ ಪ್ರವರ್ತಕನಾದರೆ ಇದನ್ನು ಕಾರ್ಯರೂಪಕ್ಕಿಳಿಸಿ ಸಫಲತೆಯನ್ನು ಸಾಧಿಸಿ ತೋರಿಸಿದವರು ರಷ್ಯಾದ ಲೆನಿನ್ ಮತ್ತು ಚೀನಾದ ಮಾವೋ. ಭಾರತಕ್ಕೆ ಇದು ವೈಚಾರಿಕವಾಗಿ ಪ್ರವೇಶಿಸಿದ್ದರೂ ಆಚರಣೆಗೆ ಬರಲಿಲ್ಲ. ಇಲ್ಲಿರುವ ಪ್ರಜಾರಾಜ್ಯ ವ್ಯವಸ್ಥೆಯು ಹಿಂದಿನಿಂದ ಬಂದಿರುವ ಊಳಿಗಮಾನ್ಯ, ಪುರೋಹಿತಶಾಹಿ ಮತ್ತು ಬಂಡವಾಳ ಶಾಹಿಗಳಿಗೂ ಮುಕ್ತ ಅವಕಾಶವನ್ನು ನೀಡಿ ಕೆಳವರ್ಗ ದವರನ್ನು ಮೇಲೆತ್ತುವ ಧ್ಯೇಯವನ್ನು ಹೊಂದಿದೆ. ಕುಂ.ವೀ. ಅವರ ಸಾಹಿತ್ಯದಲ್ಲಿ ಎಲ್ಲರಿಗೂ ಸಮಾನ ಸ್ಥಾನಮಾನ ಕಲ್ಪಿಸುವ ಸಮಾಜ ಬರಬೇಕೆಂಬ ಆಶಯವಿದೆ. ಸಮಾಜದ ಬದಲಾವಣೆಗೆ ತೆರೆದುಕೊಳ್ಳುವ ವೈಚಾರಿಕತೆ ಬರಬೇಕೆಂಬ ಹಪಾಹಪಿಯೂವಿದೆ. ಜಮೀನ್ದಾರಿ ವ್ಯವಸ್ಥೆಯ ವಿರುದ್ಧ ಹೋರಾಡುವ ಕೆಲವು ಕಥೆಗಳ ಹೆಸರುಗಳನ್ನು ಉಲ್ಲೇಖಿಸಿ ಕಥೆಗಳನ್ನು ನಾವು ಅವರ ಸಾಹಿತ್ಯದಲ್ಲಿ ಕಾಣಬಹುದಾಗಿದೆ.

**ರಾಜಕೀಯ ಮತ್ತು ಆರ್ಥಿಕ ಸಂಬಂಧ**

ರಾಜಕೀಯ ರಂಗದ ಏರುಪೇರಾಗಲಿ, ಪರಕೀಯ ಆಕ್ರಮಣಗಳಾಗಲಿ, ತುರ್ತುಪರಿಸ್ಥಿತಿಯಾಗಲಿ, ರಾಜಕೀಯ ಪಕ್ಷವಾದವಾಗಲಿ, ವಿದೇಶಿ ನೀತಿಗಳಾಗಲಿ, ಹಣ ಅಧಿಕಾರಗಳ ಕರಾಳಜಾಲದ ಕಲ್ಪನೆ ಯಾಗಲಿ, ತಮ್ಮನ್ನು ಹಿಂಡುವ ಶೋಷಣೆಯ ವಿಧಾನಗಳ ಅರಿವಾಗಲಿ

ಇವಾವೂ ತಮಗೆ ಸಂಬಂಧಿಸಿಲ್ಲವೆಂಬಂತೆ ಬದುಕಿನ ಯಾತನಾಮಯವಾದ ಹೋರಾಟದಲ್ಲಿ ಹೆಣಗುವ ಜನರು ಈ ದೇಶದಲ್ಲಿ ಕೋಟಿ ಕೋಟಿ ಸಂಖ್ಯೆಯಲ್ಲಿದ್ದಾರೆ.

ನೆಹರು ಅವರು ಕೈಗಾರಿಕೆ, ವಿಜ್ಞಾನ, ಅಣೆಕಟ್ಟುಗಳು, ಸಾರಿಗೆ ಸಂಪರ್ಕ, ವಿದ್ಯಾಭ್ಯಾಸ, ವೈದ್ಯಕೀಯ, ತಾಂತ್ರಿಕ ಅಭಿವೃದ್ಧಿಗಳು, ವಿದೇಶಿ ಸಂಬಂಧ ಮುಂತಾದ ಗಣನೀಯ ಸಾಧನೆಗಳ ಮೂಲಕ ಅತಿ ಹಿಂದುಳಿದ ದೇಶವನ್ನು ಜಗತ್ತಿನ ಮುಂದುವರಿದ ದೇಶಗಳ ನಡುವೆ ಸಮಾಧಾನಕರ ಸ್ಥಾನ ಪಡೆಯುವಂತೆ ಪ್ರಯತ್ನಿಸಿದರು. ಆದರೆ ಈ ಪ್ರಯತ್ನವೇ ದೇಶದಲ್ಲಿ ಬಂಡವಾಳಶಾಹಿತ್ವ ಬೆಳೆಯಲು ಕಾರಣವಾಯಿತು. ಇದರಿಂದ ಗ್ರಾಮೀಣ ಜೀವನ ನಿರ್ಜೀವ ವಾಯಿತು. ನಗರೀಕರಣ ಮತ್ತು ಅದರ ದುಷ್ಪರಿಣಾಮಗಳು ಬೆಳೆದವು. ನೌಕರಶಾಹಿಯ ದೋಷಗಳು ಬೆಳೆಯಲು ವಾತಾವರಣ ನಿರ್ಮಾಣವಾಯಿತು.

ನೆಹರು ಅವಧಿಯಲ್ಲೇ ೧೯೬೦ರಲ್ಲಿ ಚೀನಾ ಆಕ್ರಮಣವು ನಡೆಯಿತು. ದೇಶದ ರಾಷ್ಟ್ರಪ್ರೇಮ ಜಾಗೃತವಾಗಲು ಅದೊಂದು ಕಾರಣವಾಯಿತು. ನೆಹರು ನಂತರ ಲಾಲ್‌ಬಹಾದ್ದೂರ್‌ಶಾಸ್ತ್ರಿಗಳ ಅವಧಿ(೧೯೬೪-೧೯೬೬)ಯಲ್ಲೇ ದುರಾಕ್ರಮಣ ನಡೆಯಿತು. ಗಾಂಧಿವಾದಿಗಳು ಆಶೆ ಇಟ್ಟು ಕೊಂಡಿದ್ದ ಶಾಸ್ತ್ರಿಗಳು ತಾಷ್ಕೆಂಟಿನಲ್ಲಿ ಒಪ್ಪಂದಕ್ಕೆ ಸಹಿ ಹಾಕಿ ದುರ್ಮರಣಕ್ಕೆ ಬಲಿಯಾದುದು ದೇಶಕ್ಕೆ ದೊಡ್ಡ ಆಘಾತಕಾರಿಯಾಗಿತ್ತು.

ನಂತರ ಇಂದಿರಾಗಾಂಧಿಯವರ ಅವಧಿ ತೀವ್ರವಾದ ಏರುಪೇರುಗಳನ್ನು ಕಂಡಿತು. ದಲಿತರ, ಹಿಂದುಳಿದ ವರ್ಗಗಳ ಜನರ ಮನೋಧರ್ಮವನ್ನು ಸರಿಯಾಗಿ ತಿಳಿದಿದ್ದ ಅವರು ಅವರಿಗೆ ಅನುಕೂಲವಾಗುವಂಥ ರೀತಿಯಲ್ಲಿ ಸೌಲಭ್ಯಗಳನ್ನೊದಗಿಸಿದರು. ಇದರಿಂದ ಜನಪ್ರಿಯತೆಯನ್ನು ಗಳಿಸಿ ತನ್ನ ಪಕ್ಷದಲ್ಲಿ ಸಾರ್ವಭೌಮತ್ವವನ್ನು ಗಳಿಸಿಕೊಂಡರು. ತುರ್ತುಪರಿಸ್ಥಿತಿ ಯನ್ನು ೧೯೭೫ರಲ್ಲಿ ಹೇರಿ ೧೯೭೭ರವರೆಗೆ ವಿರುದ್ಧ ಪಕ್ಷಗಳ ಮತ್ತು ಮೇಧಾವಿಗಳ ವಿಚಾರಸ್ವಾತಂತ್ರ್ಯದ ದಮನ ಮಾಡಲು ಪ್ರಯತ್ನಿಸಿದರು.

ತುರ್ತುಪರಿಸ್ಥಿತಿಯನ್ನು ತೆಗೆದು ಚುನಾವಣೆ ನಡೆಸುವಷ್ಟರ ಹೊತ್ತಿಗೆ ಜಯಪ್ರಕಾಶ ನಾರಾಯಣರ ನಾಯಕತ್ವದಲ್ಲಿ ಪ್ರತಿಪಕ್ಷಗಳು ಚುರುಕಾಗಿದ್ದವು. ಜನರು ಅವರ ಜನತಾಪಕ್ಷಕ್ಕೆ ಬೆಲೆ ಕೊಟ್ಟು ಗೆಲ್ಲಿಸಿದರು. ಸುಮಾರು ಮೂರು ವರ್ಷಗಳಲ್ಲಿ ಮೊರಾರ್ಜಿದೇಸಾಯಿ ಅವರ ಪ್ರಧಾನಿ ಪಟ್ಟದಲ್ಲಿ ಒಳಜಗಳಗಳು ತೀವ್ರವಾಗಿ ಜನರು ಬೇಸತ್ತು ಅದನ್ನು ಉರುಳಿಸಿ ಮತ್ತೆ ಇಂದಿರಾಗಾಂಧಿಯನ್ನೇ ಆರಿಸಿದರು(೧೯೮೦ರಲ್ಲಿ). ಈ ರಾಜಕೀಯ ಚದುರಂಗದಾಟದಲ್ಲಿ ನಾವು ಗಮನಿಸಬಹುದಾದ ಅಂಶವೆಂದರೆ ಭಾರತದ ಮತದಾರರ ಜಾಗೃತಿ. ವಿವೇಚನೆಯುಳ್ಳ ಸರ್ವರೂ ಸಮಾನ ಜಾಗೃತಿಯುಳ್ಳವರಲ್ಲ. ಅವರ ಜಾಗೃತಿ ಆಗಾಗ ಉಂಟಾಗುವ ರಾಜಕೀಯ ಗಾಳಿಗೆ ತಕ್ಕಂತೆ ಒಲಿಯುವ ರೀತಿಯಾಗಿದೆ.

ಇಂದಿರಾ ಯುಗವು ದೇಶದಲ್ಲಿ ಅನೇಕ ಸಮಸ್ಯೆಗಳನ್ನು ಹುಟ್ಟುಹಾಕಿತು. ಮತೀಯ ಭಾವನೆಗಳು, ಪ್ರಾಂತೀಯತೆಗಳು, ತೀವ್ರವಾದಿ ರಾಜಕಾರಣ, ಆಡಳಿತಯಂತ್ರವು ಭ್ರಷ್ಟಾಚಾರದ ತವರಾದವು. ಬಂಡವಾಳಶಾಹಿಗಳು, ಸಾಮಂತಶಾಹಿಗಳು, ಧರ್ಮಶಾಹಿಗಳು ಇನ್ನಷ್ಟು ಕೊಬ್ಬುತ್ತಾ ಹೋದರು. ಕಾಳಸಂತೆಕೋರರು, ಗೂಂಡಾಗಳು ಪ್ರಬಲರಾಗುತ್ತಾ ರಾಜಕಾರಣಿಗಳ ಪೂರ್ಣ ಪೋಷಣೆಯನ್ನು ಪಡೆದರು. ರಾಜಕಾರಣ ವ್ಯವಸ್ಥೆಯೇ ಧನಿಕವರ್ಗದ ಕೈಗೊಂಬೆಯಾಗಿ ರೂಪಗೊಂಡಿತು. ದಿಡೀರನೆ ಧನಿಕರಾಗುವ ಅನೇಕ ಮಾರ್ಗಗಳು ತೆರೆದುಕೊಂಡು ಹಣದುಬ್ಬರ, ಕಪ್ಪುಹಣ, ಅಪಮೌಲ್ಯೀಕರಣ, ಬೆಲೆಯೇರಿಕೆ, ಗಲಭೆ, ಅನಿಶ್ಚಿತತೆ, ಅಶಾಂತಿ ಹೆಚ್ಚಾದವು. ಈ ಎಲ್ಲಾ ಅಸಮಾನತೆಯನ್ನು ಬಿಂಬಿಸುವ ಕಥೆಗಳು ತೆಲುಗಿನಲ್ಲಿ ಸಾವಿರ ಸಾವಿರ ಸಂಖ್ಯೆಯಲ್ಲಿ ಪ್ರಕಟಗೊಂಡವು.

## ಕನ್ನಡ ಮತ್ತು ತೆಲುಗು ಸಾಹಿತ್ಯಕ ಸಂಬಂಧ

ಕನ್ನಡ ಮತ್ತು ತೆಲುಗು ಭಾಷೆಯ ಸಾಹಿತಿಗಳು ಕಠೋರ ವಾಸ್ತವತೆಯ ಬಗ್ಗೆಯೇ ಹೆಚ್ಚು ಕಥೆಗಳನ್ನು ತಮ್ಮ ಸಾಮರ್ಥ್ಯಕ್ಕನುಸಾರವಾಗಿ ಬರೆದಿದ್ದಾರೆ. ಎರಡರಲ್ಲಿಯೂ ಸಾಹಿತಿಗಳ ಹೃದಯವು ಜನಪರವಾಗಿ ಜನಶೋಷಣೆಯ ವಿರುದ್ಧವಾಗಿ ಅನುಭೂತಿಯನ್ನು ವ್ಯಕ್ತಪಡಿಸಿವೆ. ಕರ್ನಾಟಕದ ಕನ್ನಡ ಸಾಹಿತ್ಯ ಪರಿಷತ್ತು, ಅಕಾಡೆಮಿಗಳು ಮತ್ತು ಆಂಧ್ರದ ಆಂಧ್ರಸಾರಸ್ವತ ಪರಿಷತ್ತು ಮತ್ತು ಸಾಹಿತ್ಯ ಅಕಾಡೆಮಿಗಳು ಪಟ್ಟಭದ್ರರ ಕೈಯೊಳಗಿದೆ. ಇವು ಸಂಪ್ರದಾಯಶರಣ ಸರ್ಕಾರವನ್ನು ಒಲೈಸುವ ಸಾಹಿತ್ಯಕ ಸಂಸ್ಥೆಗಳಾಗಿ ಬೆಳೆದುಬಂದಿವೆ. ಇವುಗಳಲ್ಲಿ ಹಿಂದಿನ ಕಾವ್ಯ ವಿಮರ್ಶೆಗಳ ಸಂಶೋಧನೆ, ಸಂಪಾದನೆಗಳಂಥ ಕಾರ್ಯಗಳೇ ಅತಿ ಮುಖ್ಯವಾಗಿದೆ. ಕ್ರಾಂತಿಕಾರಿಗಳನ್ನು ಇವು ಹತ್ತಿರ ಕೂಡ ಸೇರಿಸಿಕೊಳ್ಳುವುದಿಲ್ಲ.

ಎರಡು ಭಾಷೆಗಳಲ್ಲೂ ಸಾಹಿತ್ಯ ಪತ್ರಿಕೆಗಳು ಸ್ವಾತಂತ್ರ್ಯಾನಂತರ ಕಾಲದಲ್ಲಿ ಒಳ್ಳೆಯ ಸಾಹಿತ್ಯಕ ಸೇವೆಯನ್ನು ಮಾಡಿವೆ. ಆಂಧ್ರದಲ್ಲಿ 'ಭಾರತಿ', 'ಅಭ್ಯುದಯ', 'ನವತ' ಮೊದಲಾದವು ಅಭ್ಯುದಯ ಪರವಾಗಿಯೂ ಒಳ್ಳೆಯ ವೇದಿಕೆಯನ್ನೊದಗಿಸಿದವು. ಕನ್ನಡದಲ್ಲಿ 'ಸಾಕ್ಷಿ' ಪತ್ರಿಕೆಯೂ ನವ್ಯ ಪಂಥಕ್ಕೂ ಸಂಕ್ರಮಣ, ಶೂದ್ರ, ಬಂಡಾಯ, ಸಮುದಾಯ ಮುಂತಾದವು ಬಂಡಾಯ ದಲಿತ ಚಳುವಳಿಗಳಿಗೂ ವೇದಿಕೆಯಾದವು.

ವಸ್ತು ಮತ್ತು ಧೋರಣೆಗಳಲ್ಲೂ ವಿಪ್ಲವ ಮತ್ತು ಬಂಡಾಯ ಸಾಹಿತ್ಯದಲ್ಲಿ ಬಹಳ ಹೋಲಿಕೆಗಳಿವೆ. ಶೋಷಕರನ್ನು ನಿಂದಿಸುವುದು ಶೋಷಿತರ ಮತ್ತು ದುಡಿಯುವವರ ದುಸ್ಥಿತಿಗಳನ್ನು ಚಿತ್ರಿಸುವುದು ಅವರನ್ನು ಕ್ರಾಂತಿಗೆ ಸಿದ್ಧಗೊಳಿಸುವುದು ಮತಮೌಢ್ಯಗಳನ್ನು ಮತ್ತು ಕೊಳೆತ ವ್ಯವಸ್ಥೆಯನ್ನು ದ್ವೇಷಿಸುವುದು ರಾಜಕಾರಣವನ್ನು ಮತ್ತು ಪ್ರಜಾಪ್ರಭುತ್ವ ವ್ಯವಸ್ಥೆಯನ್ನು

ಜರಿಯುವುದು ಮುಂತಾದ ದೃಷ್ಟಿಗಳಲ್ಲಿ ಸಮಾನ ಅಂಶಗಳಿವೆ. ಆದರೆ ಮುಖ್ಯ ವ್ಯತ್ಯಾಸಗಳೂ ಇವೆ. ತೆಲುಗಿನ ಜನರ ಹೋರಾಟದ ವಾಸ್ತವ ಸಂದರ್ಭಗಳ ನಡುವೆ ವಿಪ್ಲವ ಸಾಹಿತ್ಯ ಹುಟ್ಟಿದೆ. ಕೆಲವು ಕವಿಗಳು ರೈತ ಜನರ ನಡುವೆ ಬೆರೆತು ಹೋರಾಡಿದ್ದಾರೆ. ಸರ್ಕಾರದ ಚಿತ್ರಹಿಂಸೆಗಳಿಗೂ ಗುರಿಯಾಗಿದ್ದಾರೆ. ಪಾಣಿಗ್ರಾಹಿಯಂಥವರು ಹೋರಾಟದಲ್ಲಿ ಪೊಲೀಸರಿಂದ ಕೊಲೆಯಾಗಿದ್ದಾರೆ. ಕೆಲವರು ಜೈಲು ಶಿಕ್ಷೆಗೆ ಗುರಿಯಾಗಿದ್ದಾರೆ. ಅಲ್ಲಿಯ ಕ್ರಾಂತಿಯ ಹಿನ್ನೆಲೆಯಲ್ಲಿ ಹುಟ್ಟಿದ ಸಾಹಿತ್ಯ ಬದುಕಿನ ಸಾಹಿತ್ಯವಾಗಿದೆ.

ಕನ್ನಡದಲ್ಲಿ ಇಂಥ ತೀವ್ರ ಹೋರಾಟ ಸಂದರ್ಭಗಳಲ್ಲಿ ಅಲ್ಲಲ್ಲಿ ನಡೆಯುವ ದಲಿತರ ಮತ್ತು ಬಡವರ ಮೇಲಿನ ದೌರ್ಜನ್ಯಗಳ ಪ್ರಕರಣಗಳನ್ನು ಸಾಹಿತಿಗಳು ತಮ್ಮ ಸಾಹಿತ್ಯದಲ್ಲಿ ಬಳಸಿಕೊಂಡಿದ್ದಾರೆ. ಇನ್ನೊಂದು ಮುಖ್ಯ ವ್ಯತ್ಯಾಸವೆಂದರೆ ತೆಲುಗಿನಲ್ಲಿ ಸಾಹಿತ್ಯಕ್ಕೆ ಕಮ್ಯುನಿಜಂನ ಹೋರಾಟದ ಸೈದ್ಧಾಂತಿಕ ನೆಲೆಗಟ್ಟಿದೆ. ವಿಪ್ಲವ ಸಾಹಿತ್ಯದ ಬಗ್ಗೆ ನಿಶ್ಚಿತ ರೂಪದ ವಿಮರ್ಶೆಯೂ ಬೆಳೆದಿದೆ. ಕನ್ನಡದಲ್ಲಿ ಇಂಥಾ ಸೈದ್ಧಾಂತಿಕವಾದ ಸ್ಪಷ್ಟವಾದ ಹಿನ್ನೆಲೆ ಇಲ್ಲವಾಗಿದೆ.

### ಆಂಧ್ರ ಸಾಹಿತ್ಯಕ್ಕೆ ಪ್ರೇರಣೆನೀಡಿದ ಹೋರಾಟಗಾರರು

#### ಆಂಧ್ರದ ಬುಡಕಟ್ಟು ರೈತರು

ಆಂಧ್ರದ ಶ್ರೀಕಾಕುಳಂ ಒಂದು ಬುಡಕಟ್ಟು ಪ್ರದೇಶ. 'ಸವಾರ ಮತ್ತು ಜಟಾಪು' ಬುಡಕಟ್ಟಿನವರು ಇಲ್ಲಿ ವಾಸಿಸುತ್ತಾರೆ. ಗುಡ್ಡಗಾಡುಗಳ ಈ ಪ್ರದೇಶದಲ್ಲಿ ಪ್ರತಿ ಮೂರು ವರ್ಷಕ್ಕೊಮ್ಮೆ ಭೂಮಿ ಬದಲಾಯಿಸುತ್ತಾ ಹೋಗುವ ಪೋಡು ಸಾಗುವಳಿ ವಿಧಾನವಿದೆ. ಅರಣ್ಯ ಉತ್ಪನ್ನಗಳ ಸಂಗ್ರಹಣೆಯ ಮೇಲೆ ಇವರ ಜೀವನಕ್ರಮ ಅವಲಂಬಿತವಾಗಿದೆ. ಬಹುತೇಕ ಬುಡಕಟ್ಟಿನವರು ಲೇವಾದೇವಿಗಾರರಿಗೆ ಸಾಲಗಾರರಾಗಿದ್ದು ತಮ್ಮ ತುಂಡುಭೂಮಿಯನ್ನು ಅನಿವಾರ್ಯವಾಗಿ ಬಿಟ್ಟುಕೊಡಬೇಕಾದ ಒತ್ತಡಕ್ಕೆ ಒಳಗಾದರು. ಜೊತೆಗೆ ಮಾನಸಿಕ ಹಾಗೂ ದೈಹಿಕ ಹಿಂಸೆಗೂ ಗುರಿಯಾದರು.

ಲಖಿಂಪುರ ಖೇರಿಯ ರೈತರು ಸಹ ಬುಡಕಟ್ಟಿನವರು. ಬೆಟ್ಟದಡಿಯ ತೆರಾಯಿ ಪ್ರದೇಶದಲ್ಲಿರುವ ಇದು ಸಿಲಿಗುರಿಯ ಕಾಡಿಗಿಂತ ಹೆಚ್ಚು ನಿಬಿಡವಾದ ಕಾಡನ್ನು ಹೊಂದಿದೆ. ರೈತರು ಬಹುವಾಗಿ ವಲಸೆ ಬಂದವರಾಗಿದ್ದು ದಾರುಸ್, ರಾಸಿಖ್ ಮತ್ತಿತರ ರೈತರು ಕಾಡಿನ ಚಿಕ್ಕ ಪ್ರದೇಶವನ್ನು ಸವರಿ ತುಂಡುಭೂಮಿಯನ್ನು ಮಾಡಿಕೊಂಡು ಸರ್ಕಾರದ ವಿವಿಧ ಯೋಜನೆಗಳ ಅಡಿಯಲ್ಲಿ ನೆಲೆಗೊಂಡವರಾಗಿದ್ದಾರೆ. ಆದರೆ ೧೯೬೭ರ ಹೊತ್ತಿಗೆ ರಾಜಕೀಯ ಸಂಪರ್ಕವುಳ್ಳ ಭೂಮಾಲೀಕರಿಂದ ಹಲವಾರು ಮಂದಿ ಕಾನೂನುಬಾಹಿರವಾಗಿ ಆಸ್ತಿಯನ್ನು ಕಳೆದುಕೊಂಡ ವಿವರಗಳು 'ಬದ್ನಂ' ಅವರ ಕಥೆ ಮತ್ತು ಕಾದಂಬರಿಗಳಲ್ಲಿ ಕಾಣಬಹುದಾಗಿದೆ.

ಬಿ.ಎಸ್. ರಾಮುಲು ಬರೆದಿರುವ 'ಕಾಡೊಳಗೆ ಬೆಳದಿಂಗಳು' ಎನ್ನುವ ಕಥೆ ಬುಡಕಟ್ಟು ರೈತರ ಜಮೀನನ್ನು ಶ್ರೀಮಂತರು ಹೇಗೆ ಕಿತ್ತುಕೊಳ್ಳುತ್ತಾರೆ ಎಂಬುದನ್ನು ವಾಸ್ತವದ ನೆಲೆಗಟ್ಟಿನ ಮೇಲೆ ಚಿತ್ರಿಸಲಾಗಿದೆ. ಕುಂ.ವೀ. ಅವರು ಅನುವಾದಿಸಿದ ಅನೇಕ ಕಥೆಗಳಲ್ಲಿ ಭೂಮಿಗೆ ಸಂಬಂಧಿಸಿದ ರೈತರ ಕಥೆಗಳೇ ಹೆಚ್ಚಾಗಿವೆ. 'ಕಾಡೊಳಗೆ ಬೆಳದಿಂಗಳು', 'ಮಣ್ಣಿನ ಹೃದಯ', 'ಮರ ಉರುಳುತ್ತಿರುವ ದೃಶ್ಯ', 'ನಂಬಿದ ಭೂಮಿ', 'ಕೆಸರು' ಮುಂತಾದ ಕಥೆಗಳಲ್ಲಿ ರೈತರು ಶೋಷಕರ ದುರಾಸೆಗೆ ಬಲಿಯಾದ ಬದುಕಿನ ದಾರುಣ ಚಿತ್ರಣವನ್ನು ಕಾಣಬಹುದಾಗಿದೆ.

**ವೆಟ್ಟಿಚಾಕರಿ ಎಂಬ ಹೀನ ಪದ್ಧತಿ**

'ವೆಟ್ಟಿಚಾಕರಿ' ಎಂದರೆ 'ಬಿಟ್ಟಿಚಾಕರಿ' ಎಂದರ್ಥ. ಆಂಧ್ರದ ಜಮೀನ್ದಾರಿ ವ್ಯವಸ್ಥೆಯಲ್ಲಿ ಈ ಪದ್ಧತಿ ಎಷ್ಟು ಕ್ರೂರವಾಗಿತ್ತೆಂದರೆ ವೆಟ್ಟಿಚಾಕರಿಗೆ ಬಂದವರನ್ನು ಇಲ್ಲಿನ ಜಮೀನ್ದಾರರು, ಅಮಲ್ದಾರ, ತಹಶೀಲ್ದಾರ, ಶ್ಯಾನುಭೋಗ ಹೀಗೆ ಯಾರಲ್ಲಿಗೆ ಬೇಕಾದರೂ ಚಾಕರಿ ಮಾಡಲು ಕಳಿಸುತ್ತಿದ್ದರು. ಪ್ರತಿ ಗ್ರಾಮದ ಕಸುಬುದಾರರು ಅಂದರೆ ಬಡಿಗ, ಕುಂಬಾರ, ಚಮ್ಮಾರ ಮುಂತಾದವರು ಜಮೀನ್ದಾರರಿಗೆ ಅಗತ್ಯವಾದ ವಸ್ತುಗಳನ್ನು ಪ್ರತಿಫಲಾಪೇಕ್ಷೆ ಇಲ್ಲದೆ ಪೂರೈಸಬೇಕು. ಬೆಸ್ತರು ಪಲ್ಲಕ್ಕಿ ಹೊರಬೇಕು. ಕ್ಷೌರಿಕರು ದಿನಪತ್ರಿ ಜಮೀನ್ದಾರರ ಮುಖ ಕ್ಷೌರ ಮಾಡುತ್ತಿರಬೇಕು. ಅಗಸ ಜಮೀನ್ದಾರರ ಮನೆಯ ಕುಂಟುಂಬದವರೆಲ್ಲರ ಬಟ್ಟೆ ತೊಳೆದು ಕೊಡುತ್ತಿರಬೇಕು. ಈಡಿಗರು ಜಮೀನ್ದಾರರಿಗೆ ಕುಡಿಯಲು ಹೆಂಡವನ್ನು ಉಚಿತವಾಗಿ ಸಾಗಿಸಬೇಕು. ಅಷ್ಟೇ ಅಲ್ಲ, ಜಮೀನ್ದಾರರ ಹೊಲಗಳಲ್ಲಿ ರೈತರು ಪುಕ್ಕಟೆ ಉಳುಮೆ ಮಾಡಬೇಕು. ಹಳ್ಳಿಯ ಹದಿಹರೆಯದ ಹೆಣ್ಣುಮಕ್ಕಳನ್ನು ಜಮೀನ್ದಾರ ತನ್ನ ಬೀಗರು–ಬಿಜ್ಜರಿಗೆ, ಅಧಿಕಾರಿಗಳಿಗೆ ಉಡುಗೊರೆಯಾಗಿ ನೀಡುತ್ತಿದ್ದುದ್ದನ್ನು ಯಾರೂ ಪ್ರಶ್ನಿಸುವಂತಿರಲಿಲ್ಲ. ರಾಮಚಂದ್ರಾರೆಡ್ಡಿ ಪಲ್ಲಕ್ಕಿಯಲ್ಲಿ ತನ್ನ ಸುಪರ್ದಿಯ ನಲ್ಗೊಂಡ ನಲವತ್ತು ಹಳ್ಳಿಗಳನ್ನು ನಿರ್ಭಯವಾಗಿ, ಕಿತ್ತುಕೊಳ್ಳುತ್ತಿದ್ದನೆಂಬುದು ಭಯಾನಕ ಸಂಗತಿ. ಈ ಎಲ್ಲಾ ಘಟನೆಗಳು ಆಂಧ್ರದ ತೆಲುಗು ವಿಪ್ಲವ ಕವಿಗಳ ಮೇಲೆ ತೀವ್ರವಾದ ಪ್ರಭಾವ ಬೀರಿ ಬರವಣಿಗೆಯ ಮೂಲಕ ಅಭಿವ್ಯಕ್ತಗೊಂಡಿದೆ.

**ತೆಲಂಗಾಣ ಹೋರಾಟ**

ಜುಲೈ ೪, ೧೯೪೬ರಂದು ತೆಲಂಗಾಣ ಹೋರಾಟಕ್ಕೆ ಮುಖ್ಯ ತಿರುವು ಸಿಕ್ಕಿತು. ಅದು ಕೇವಲ ಹೋರಾಟಕ್ಕೆ ಮಾತ್ರ ಸಿಮಿತವಾಗಿರಲಿಲ್ಲ. ಅದು ಸಾಹಿತ್ಯಕ್ಕೂ ಅನ್ವಯಿಸುತ್ತದೆ. ಕಾಲದ ದೃಷ್ಟಿಯಿಂದ ಈ ಸಂಕ್ರಮಣ ಸ್ಥಿತಿ ೧೯೪೬ರಿಂದ ೧೯೫೧ರವರೆಗೆ ಹರಡಿದೆ. ೧೯೩೦ರಲ್ಲಿ ಏರ್ಪಟ್ಟ ಆಂಧ್ರ ಮಹಾಸಭೆಯೇ ಈ ಸಂಕ್ರಮಣ ಸ್ಥಿತಿಗೆ ಪೂರ್ವರಂಗವನ್ನು ಸಿದ್ಧ ಮಾಡಿಕೊಟ್ಟಿತು. ಈ ಐದು ವರ್ಷದ ಅವಧಿಯಲ್ಲಿ ಹುಟ್ಟಿಕೊಂಡ ಸಾಹಿತ್ಯ ಜನಸಮುದಾಯವನ್ನು

ಪ್ರತಿಭಟನಾತ್ಮಕವಾಗಿ  ಸಾಂಸ್ಕೃತಿಕವಾಗಿ, ಸೈದ್ಧಾಂತಿಕವಾಗಿ ರೂಪಿಸಿತು. ನೂರಾರು ಮಂದಿ ಪ್ರಜಾಕವಿಗಳು ವೈವಿಧ್ಯಮಯವಾಗಿ ಕಥೆ ಕವಿತೆಗಳನ್ನು ರಚಿಸಿ ಹಾಡಿದರು. ಈ ಕಥೆ ಕವಿತೆಗಳು ಕುಂ. ವೀರಭದ್ರಪ್ಪನವರ ಆರಂಭದ 'ದೀಪಿಸೀಮೆಯ ಹಾಡು' ಮತ್ತು 'ಡೋಮ ಮತ್ತಿತರ ಕಥೆಗಳು' ಕಥಾಸಾಹಿತ್ಯದ ಮೇಲೆ ತೀವ್ರವಾದ ಪ್ರಭಾವವನ್ನು ಬೀರಿದೆ.

ಸುಂಕದ ಸತ್ಯನಾರಾಯಣ, ವಾಸಿರೆಡ್ಡಿ, ಭಾಸ್ಕರ ಮುಂತಾದವರು ನಾಟಕಗಳನ್ನು ರಚಿಸಿದಲ್ಲದೆ ಬುರ್ರಕತೆಗಳನ್ನು, ವೀರಕುಂಕುಮದಂಥ ನಾಟಕಗಳು ಈಗಲೂ ಜನಸಾಮಾನ್ಯರ ಮಾನ್ಯತೆಗೆ ಪಾತ್ರವಾಗಿವೆ. ಕಾಳೋಜಿ, ದಾಶರಥಿಯರಂಥ ಕವಿಗಳು 'ನಾ ಗೊಡವ', 'ಅಗ್ನಿಧಾರೆ ರುದ್ರವೇಣಿ' ಯಂತಹ ಕಾವ್ಯ ರಚಿಸಿದರು. ಈ ಮೂಲಕ ನಿಜಾಮಶಾಹಿಯನ್ನು ಜಮೀನ್ದಾರಿ ಜಹಗೀರ್ದಾರಿ ವ್ಯವಸ್ಥೆಗಳನ್ನು ವಿರೋಧಿಸಿದರು. ಈ ಸಾಹಿತ್ಯ ಅನುದ್ದೇಶಿತವಾದುದಲ್ಲ ಅಥವಾ ಲೇಖಕರು ಆತ್ಮತೃಪ್ತಿಗೆ ಬರೆದದ್ದಲ್ಲ. ತೆಲಂಗಾಣ ಪ್ರಾಂತ್ಯದ ರೈತರ ಹೋರಾಟವನ್ನು ಸದೃಢಗೊಳಿಸಲೆಂದೇ ಅಪಾರ ಸಾಹಿತ್ಯ ಸೃಷ್ಟಿಯಾಯಿತು. ಆದ್ದರಿಂದ ತೆಲುಗು ಸಾಹಿತ್ಯದಲ್ಲಿ ೧೯೪೬ರಿಂದ ೧೯೫೧ರ ನಡುವಿನ ಐದು ವರ್ಷದ ಅವಧಿ ಪರ್ವಕಾಲವಾಗಿದೆ ಎಂಬುದರಲ್ಲಿ ಸಂದೇಹವಿಲ್ಲ.

ಜನಮುಖಿಯಾದ ಸಾಹಿತ್ಯಕ್ಕೆ ದೊರೆತ ಮುಖ್ಯ ಪ್ರೇರಣೆ ಮತ್ತು ಆಯಾಮ ನಮಗೆ ಅರ್ಥ ವಾಗುವುದು ಈ ಐದು ವರ್ಷದ ಅವಧಿಯ ವಿದ್ಯಮಾನಗಳನ್ನು ಅವಲೋಕಿಸಿದಾಗ ಮಾತ್ರ. ತನ್ನಂಥ ಸಾವಿರ ಸಾವಿರ ಕ್ರಾಂತಿಕಾರಿಗಳು ಹುಟ್ಟಿಕೊಳ್ಳಲೆಂದೇ ಒಬ್ಬ ವೀರ ಹೋರಾಟದಲ್ಲಿ ಮರಣವನ್ನು ಅಪ್ಪುತ್ತಾನೆ ಎಂಬುದು ತೆಲಂಗಾಣ ಪ್ರದೇಶದ ಸಾಮಾನ್ಯ ನಂಬಿಕೆಯಾಗಿದೆ.

ನಲ್ಗೊಂಡ ಜಿಲ್ಲೆಯ ಜನಗಾಮ ತಾಲೂಕಿನಲ್ಲಿ ಕಡಿವೆಂಡಿ ಗ್ರಾಮದ ರಾಮಚಂದ್ರಾರೆಡ್ಡಿಯ ದೌರ್ಜನ್ಯ ಮತ್ತು ರಾಕ್ಷಸತನಕ್ಕೆ ಒಳಗಾಗಿದ್ದು ಸತ್ಯಸಂಗತಿಯಾಗಿದೆ. 'ಸಂಘ' ಸಂಘಟನೆ ಆರಂಭಗೊಂಡಿದ್ದೇ ಈ ಕ್ರೂರವರ್ತನೆಯ ಕಾರಣದಿಂದ. ಆತ ನಡೆಸಿದ ಅತ್ಯಾಚಾರ, ದೌರ್ಜನ್ಯಗಳು ಅಸಂಖ್ಯಾತವಾದುವು, ಅದನ್ನು ಪ್ರತಿಭಟಿಸಿದ್ದರಿಂದ ಕಡಿವೆಂಡಿ ನಾಯಕ ದೊಡ್ಡಿ ಕೊಮರಯ್ಯ ದಾರುಣ ಹತ್ಯೆಗೀಡಾದ. ಇದರಿಂದ ಪ್ರಜಾಕೋಟಿಯ ಕ್ರೋಧಾಗ್ನಿ ಹೊತ್ತಿ ಉರಿಯತೊಡಗಿತು. ಸಾವಿರಾರು ಮಂದಿ ಕಡಿವೆಂಡಿ ಗ್ರಾಮಕ್ಕೆ ತಲುಪಿ ಜಮೀನ್ದಾರಿ ವ್ಯವಸ್ಥೆಯ ಪೈಶಾಚಿಕ ಕೃತ್ಯವನ್ನು ಬಗ್ಗು ಬಡಿಯುವ ಉಗ್ರಪಣತೊಟ್ಟು ಕ್ರಮ ಕೈಗೊಂಡರು. ಮುಂದೆ ಇದೇ ನಕ್ಸಲೈಟ್ ಹೋರಾಟಕ್ಕೆ ನಾಂದಿಯಾಗಿರುವ ಘಟನೆಯಾಗಿದೆ.

'ಗುರಜಾಡ ಅಪ್ಪಾರಾವು' ಅವರಿಂದ, 'ತೆಲಂಗಾಣ ರೈತ ಹೋರಾಟ'ದಿಂದ ಶ್ರೀಕಾಕುಳಂ ಸಶಸ್ತ್ರ ಗಿರಿಜನರ ಹೋರಾಟಗಳು ಮುಂದೆ ಎರಡು ಕವಲುಗಳಾದವು ಒಂದು ನಕ್ಸಲೈಟ್ ಚಳುವಳಿಯ ಸ್ವರೂಪ ಪಡೆದುಕೊಂಡರೆ ಮತ್ತೊಂದು ೧೯೭೦ ಜುಲೈ ೪ರಂದು ಶ್ರೀ ಶ್ರೀ

ಅಧ್ಯಕ್ಷತೆಯಲ್ಲಿ 'ವಿಪ್ಲವ ಬರಹಗಾರರ ಸಂಘಂ' ಎಂಬ ಸ್ವರೂಪ ಪಡೆಯಿತು. ಇದು ಚೆರಬಂಡರಾಜ, ವರವರರಾವು, ರಮಣಾರೆಡ್ಡಿ ಮುಂತಾದ ಲೇಖಕರನ್ನು ತೊಡಗಿಸಿಕೊಂಡು ಪ್ರಗತಿಪರ ಆದರ್ಶಗಳನ್ನು ವೈಚಾರಿಕ ಜಾಗೃತಿಯನ್ನು ಜನಸಾಮಾನ್ಯರಲ್ಲಿ ಉಂಟುಮಾಡಿತು. ನಕ್ಸಲೈಟ್ ಚಳುವಳಿಯು ಹಿಂಸಾತ್ಮಕ ದಾರಿಯಲ್ಲಿ ಕಾನೂನನ್ನು ತನ್ನ ಕೈಗೆ ತೆಗೆದುಕೊಂಡು ಪ್ರತೀಕಾರ ತೀರಿಸಿಕೊಳ್ಳುವ ಮನೋಧರ್ಮವನ್ನು ಬೆಳೆಸಿಕೊಂಡಿತು. ಇಂತಹ ವಿಚಾರಗಳಿಂದ ಗಡಿಭಾಗದ ಲೇಖಕರು ಸ್ಫೂರ್ತಿ ಪಡೆದುಕೊಂಡಿದ್ದಾರೆ. ಇವರ ಸಾಹಿತ್ಯದಲ್ಲಿ ಪ್ರತೀಕಾರದ ಹಸಿ ಹಸಿ ಘಟನೆಗಳು ಭಯಾನಕವಾದ ಅನುಭವವನ್ನು ನೀಡುತ್ತವೆ. ಕುಂ.ವೀರಭದ್ರಪ್ಪನವರ "ಎಲುಗನೆಂಬ ಕೊರಚನು ಚೌಡನೆಂಬ ಹಂದಿಯು" ಕಥೆಯಲ್ಲಿ ಗೌಡನು ಮನೆಗೆ ನುಗ್ಗಿದ ತನ್ನ ಹಂದಿ ಚೌಡನನ್ನು ಕೊಂದು ನಡುಮನೆಯಲ್ಲಿ ಹೂತು ಹಾಕಿದ್ದಾನೆ ಎಂದರಿತ ಅವನು ಅವನ ಮಗ ತನ್ನ ಲುಚುಮಿಯನ್ನು ಸೇರಲು ರಾತ್ರಿ ಗುಡಿಸಲಿಗೆ ಬಂದಾಗ ಅವನನ್ನು ಕೊಂದು ತನ್ನ ಗುಡಿಸಲಿನಲ್ಲಿ ಹೂತು ಹಾಕುತ್ತಾನೆ. ಹಾಗೆಯೇ ಕತ್ತಲನು ತ್ರಿಶೂಲ ಹಿಡಿದ ಕಥೆಯಲ್ಲಿ ಕತ್ತಲನು ತನ್ನ ಹೆಂಡತಿಗೆ ಗೌಡನಿಂದ ಹುಟ್ಟಿದ ಮಕ್ಕಳನ್ನು ರಾತ್ರಿ ಹೊತ್ತು ಕತ್ತು ಹಿಸುಕಿ ಸಾಯಿಸುವಾಗ ಹುಟ್ಟಿಸೋನು ಗೌಡ ಸಾಕುವವರು ನಾವಾ ಎಂದು ತಣ್ಣಗೆ ಅವುಗಳನ್ನು ಕೊಂದು ಹಾಕುವ ಪ್ರತಿಭಟನೆ ಭಯಾನಕವಾಗಿ ಮೂಡಿಬಂದಿದೆ.

ಜಮೀನ್ದಾರಿ ವ್ಯವಸ್ಥೆಯ ವಿರುದ್ಧ ಹೋರಾಡಿ ಮಡಿದ ದೊಡ್ಡಿ ಕೊಮರಯ್ಯ ಮತ್ತಿತರ ಅನೇಕ ವೀರರನ್ನು ಆಧರಿಸಿ ಗಂಗನೇನಿ ವೆಂಕಟೇಶ್ವರರಾವು 'ಎರ್ರಜೆಂಡಾಲು'(ಕೆಂಪು ಬಾವುಟ) ಶೀರ್ಷಿಕೆಯಲ್ಲಿ ಮೂರು ಸಂಪುಟಗಳನ್ನು ಹೊರತಂದಿದ್ದಾರೆ. ತೆಲಂಗಾಣ ರೈತ ಹೋರಾಟದ ಯಥಾರ್ಥ ಚಿತ್ರಣವನ್ನು ಆಳ್ವಾರುಸ್ವಾಮಿ ಪೊಟ್ಲಪಲ್ಲಿ ಶಾಮರಾವು ಸಿ.ಸಿ. ಕೃಷ್ಣರಾವು, ಕಾಳೋಜಿ ಮುಂತಾದವರ ಕಥೆಗಳಲ್ಲಿ ಕಾಣಬಹುದು.

ಶಿವರಾಮಕೃಷ್ಣರ 'ಮೃತ್ಯುಂಜಯಲು' ಕಾದಂಬರಿಯಲ್ಲಿ ತೆಲಂಗಾಣದ ಶ್ರಮಜೀವಿಗಳ ಜ್ವಲಂತ ಚಿತ್ರಣವಿದೆ. ೧೯೫೦ರಲ್ಲಿ ಪ್ರಕಟವಾದ ಲಕ್ಷ್ಮೀಕಾಂತ ಮೋಹನ್ ಅವರ 'ಸಿಂಹಗರ್ಜನೆ' ಯಲ್ಲಿ ಕೇಂದ್ರ ಸರ್ಕಾರದ ಮಿಲಿಟರಿ ಪೊಲೀಸರು ರೈತರ ಮೇಲೆ ನಡೆಸಿದ ಹತ್ಯಾಕಾಂಡ ವಿವರಗಳಿವೆ. ಪಟ್ಟಿಕೋಟ ಆಳ್ವಾರು ಸ್ವಾಮಿಯವರು ತಮ್ಮ 'ಪ್ರಜಲ ಮನಿಷಿ' ಕಾದಂಬರಿಯಲ್ಲಿ ೧೯೫೩-೬೦ರ ನಡುವಿನ ತೆಲಂಗಾಣ ಜನಜೀವನವನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ. ಈ ಕೃತಿಯಲ್ಲಿ ತೆಲಂಗಾಣ ರೈತ ಹೋರಾಟದ ಹಲವು ಮುಖಗಳನ್ನೂ ಚಿತ್ರಿಸಿದ್ದಾರೆ. ಅಂದಿನಿಂದ ಇಂದಿನವರೆಗೆ ಅಂದರೆ ೨೦೧೪ರವರೆಗೂ ತೆಲಂಗಾಣ ಹೋರಾಟ ನಿರಂತರವಾಗಿ ನಡೆದು ಅಖಂಡ ಆಂಧ್ರಪ್ರದೇಶ ಒಡೆದು ಎರಡು ಪ್ರತ್ಯೇಕ ರಾಜ್ಯಗಳಾದವು. ೧. ತೆಲಂಗಾಣ,

೨. ಸೀಮಾಂಧ್ರ ಈ ಎಲ್ಲಾ ಹೋರಾಟಗಳ ಮುಖಗಳನ್ನು ಕುಂ.ವೀ. ಅವರ ಸೃಜನಸಾಹಿತ್ಯ ಹಾಗೂ ತೆಲುಗು ಅನುವಾದ ಸಾಹಿತ್ಯದಲ್ಲಿ ಕಾಣಬಹುದಾಗಿದೆ.

**೬.೬. ಧಾರ್ಮಿಕ ಪ್ರಜ್ಞೆ**

ಸಾಮಾನ್ಯವಾಗಿ ಧರ್ಮ ಎನ್ನುವುದನ್ನು ವಿಶಾಲಾರ್ಥದಲ್ಲಿ ಬಳಸಲಾಗುತ್ತದೆ. ಯಾವುದು ಧರಿಸಿದೆಯೋ ಅಥವಾ ಧಾರ್ಯವೋ ಅದೆಲ್ಲ ಧರ್ಮ ಎಂಬುದು ಈ ಪದದ ಮೂಲಾರ್ಥವಾಗಿದೆ. ಪ್ರಕೃತಿಧರ್ಮ, ಪ್ರಾಣಿಧರ್ಮ, ಮಾನವಧರ್ಮ, ವೈದಿಕಧರ್ಮ, ಹಿಂದೂಧರ್ಮ ಎಂದೆಲ್ಲಾ ಸಂಕುಚಿತ ರೂಪವನ್ನು ಧರಿಸುತ್ತ ಬಂದಿದೆ. ಭಾರತದಲ್ಲಿ ಶತಮಾನಗಳಿಂದ ಮೇಲು-ಕೀಳು ಭಾವನೆಯನ್ನೇ ಮೇಲ್ವರ್ಗದ ಜನರು ಪೋಷಿಸುತ್ತಾ ಬಂದು ಮೇಲ್ವರ್ಗದ ಜನರ ಸೇವೆಯನ್ನು ವಿಧೇಯವಾಗಿ ಮಾಡುತ್ತಾ ಬಂದ ಜಾತಿವ್ಯವಸ್ಥೆಯನ್ನೇ ಧರ್ಮವೆಂದು ತಪ್ಪಾಗಿ ಅರ್ಥೈಸಲಾಗಿದೆ. ಕಟ್ಟುಕತೆ ಮತಾಚರಣೆಗಳನ್ನು ನಂಬಿ ನಡೆಸುವುದನ್ನೇ ಸಾರ್ಥಕ ಜೀವನವೆಂದು ಬಿಂಬಿಸಲಾಗಿದೆ. ಜನರಲ್ಲಿ ವಿಚಾರಶಕ್ತಿ ಮೊಳೆಯದಂತೆ ಅವರನ್ನು ಭಯ ದಾಸ್ಯಗಳಲ್ಲಿ ಶಾಶ್ವತವಾಗಿರುವಂತೆ ಮಾಡಿಕೊಂಡ ಬಂದ ಧರ್ಮದ ಶೋಷಣೆಯ ಭೀಕರತೆ ಬಹಳ ಕರಾಳವಾದುದು. ಮತ ಧರ್ಮಗಳು ಸಾಮಾನ್ಯವಾಗಿ ಧನಿಕ ರಾಜವರ್ಗವನ್ನೇ ಓಲೈಸುತ್ತಾ ಬಂದಿವೆ. ಮತ ಧರ್ಮದ ಆಳವಾದ ಬೇರು ಬಡತನ ಮತ್ತು ಅಜ್ಞಾನಗಳಲ್ಲಿದೆ. ಅವುಗಳಲ್ಲಿ ಎಷ್ಟೇ ಸುಂದರವಾದ ಮಾತುಗಳಿದ್ದರೂ ಅವುಗಳಲ್ಲಿ ಏನಿದೆ ಎನ್ನುವುದಕ್ಕಿಂತ ಅವು ಜನತೆಯ ಮೇಲೆ ಏನು ಪರಿಣಾಮವನ್ನು ಉಂಟುಮಾಡಿವೆ? ಅವು ಯಾರ ಹಿತಾಸಕ್ತಿಗಳನ್ನು ರಕ್ಷಿಸಿವೆ ಎನ್ನುವುದನ್ನು ಗುರುತಿಸುವುದರಿಂದಲೇ ಅವುಗಳ ಸಾಚಾತನ ಸಾಬೀತಾಗಲು ಸಾಧ್ಯ.

ಮನುಷ್ಯರಲ್ಲಿಯೇ ಕೆಲವರನ್ನು ಪ್ರಾಣಿಗಿಂತಲೂ ಕೀಳಾಗಿ ಅಸ್ಪೃಶ್ಯರಂತೆ ನಡೆಸಿಕೊಂಡು ಬಂದ ಈ ಧರ್ಮವು ಸಮಾಜಕ್ಕೆ ಮಾಡಿರುವ ದ್ರೋಹಕ್ಕೆ ಒಂದು ಉದಾಹರಣೆ. ಗಾಂಧೀಜಿಯವರು ಇಂತವರನ್ನು ಹರಿಜನರೆಂದು ಗೌರವಿಸಿ ಅವರಿಗೂ ಸಮಾಜದಲ್ಲಿ ಸಮಾನ ಸ್ಥಾನಮಾನಗಳನ್ನು ಕೊಡಲು ಹೋರಾಡಿದರು. ದಲಿತ ವರ್ಗದಿಂದಲೇ ಬಂದ ಡಾ. ಅಂಬೇಡ್ಕರ್‌ರೊಡನೆ ಕೂಡಿಕೊಂಡು ಅವರ ಉದ್ಧಾರಕ್ಕೆ ಅನುಕೂಲವಾಗುವಂತ ಕಾರ್ಯ ಯೋಜನೆಗಳಿಗೆ ಅಸ್ತಿಭಾರ ಹಾಕಿದರು. ಈ ಸಂವಿಧಾನ ಸೂತ್ರಕ್ಕೆ ಅನಿವಾರ್ಯವಾಗಿ ಬದ್ಧವಾಗಿ ಮತ್ತು ಚುನಾವಣೆಗಳಿಗಾಗಿ ಸರ್ಕಾರವು ದಲಿತ ಜನಾಂಗದವರಿಗೆ ಉಚಿತ ವಿದ್ಯೆ, ವಸತಿ, ಉದ್ಯೋಗ, ಮೀಸಲಾತಿ, ಜೀತಪದ್ಧತಿ ನಿವಾರಣೆ, ಸಾಲ ಮುಂತಾದ ಅನುಕೂಲತೆಗಳನ್ನು ಮಾಡುತ್ತ ಬಂದಿದೆ. ಇತರ ಜಾತಿಗಳೂ ತಂತಮ್ಮ ಬಣಗಳನ್ನು ಕಟ್ಟಿಕೊಳ್ಳುತ್ತಾ ಕಾರ್ಯಸಾಧನೆಗೆ ರಾಜಕೀಯವಾಗಿ ಪೈಪೋಟಿ ನಡೆಸಿರುವುದು, ತಮಗೂ ಮೀಸಲಾತಿ ಬೇಕೆಂದು ಪ್ರಯತ್ನಿಸುವುದು, ಜಾತೀಯತೆ ಬೆಳೆಯುತ್ತಿರುವುದು ಈ ಮೀಸಲಾತಿಯ ಪರಿಣಾಮಗಳು.

ತೆಲುಗು ಮತ್ತು ಕನ್ನಡ ನಾಡಿನ ಧಾರ್ಮಿಕತೆಯು ಬೆಳೆಸಿಕೊಂಡು ಬಂದಿರುವ ಬೌದ್ಧಿಕ ದಾಸ್ಯವು ಸುಶಿಕ್ಷಿತರೆಂಬುವವರಲ್ಲಿಯೂ ಹೋಗಿಲ್ಲ. ಕೆಳವರ್ಗಗಳಿಂದ, ಮಧ್ಯಮವರ್ಗಗಳಿಂದ ಆರ್ಥಿಕವಾಗಿ ಮೇಲೆ ಬಂದವರು ಧರ್ಮಾಚರಣೆಗಳನ್ನು ಆದ್ದೂರಿಯಾಗಿ ಮಾಡುತ್ತ ತಮ್ಮ ಕೀಳರಿಮೆಯನ್ನು ಮುಚ್ಚಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಬಾಬಾಗಳಿಗೆ ಮತ್ತು ಸ್ವಾಮಿಗಳಿಗೆ ಶ್ರೀಮಂತರ ಮತ್ತು ವಿದ್ಯಾವಂತರ ಶಿಷ್ಯಸಮೂಹವು ಬೆಳೆಯುತ್ತಿದೆ. ಇದು ಧರ್ಮಕ್ಕೆ ಸೇರಿರುವ ಹೊಸ ಆಯಾಮ. ಹಿಂದಿನಿಂದ ಬಂದ ಭಕ್ತಿಪಂಥವಂತೂ ಇನ್ನಷ್ಟು ವೈಭವಪೂರ್ಣವಾಗಿ ವ್ಯಾಪಕವಾಗಿ ಬೆಳೆದು ಬಂದಿರುವುದು ಕಂಡುಬರುತ್ತದೆ. ಧರ್ಮವು ಮೊದಲಿನಿಂದಲೂ ಹಣವುಳ್ಳವರಿಗೆ ಮೀಸಲು. ಇದನ್ನು ಬೂರ್ಜ್ವಾ ಧರ್ಮವೆನ್ನಬಹುದು. ಭಾರತೀಯ ಧರ್ಮದ ವೇದಾಂತ ಪ್ರಚಾರಕ್ಕೆ ಕಾವಿ ಸ್ವಾಮಿಗಳು ವಿದೇಶಗಳಿಗೆ ಹೋಗಿಬರುವುದು, ಬಿಳಿಯರನ್ನು ತಮ್ಮ ಶಿಷ್ಯರನ್ನಾಗಿ ಮಾಡಿಕೊಳ್ಳುವುದು, ಕಾರು, ಬಂಗಲೆಗಳಲ್ಲಿ ಮೆರೆಯುವುದು ಮುಂತಾದ ಸಂಗತಿಗಳು ಧಾರ್ಮಿಕ ಕರಾಳತೆಯ ಹೊಸ ನಮೂನೆಗಳನ್ನು ತೋರಿಸುತ್ತಿವೆ. ಪುನರ್ಜನ್ಮವಾದ, ವಿಧಿವಾದ, ಅವತಾರವಾದ, ಪ್ರಾಣಿಬಲಿ ಮತ್ತು ಪೂಜಾರಿಗಳಿಗೆ, ಉತ್ಸವಗಳಿಗೆ, ಮದುವೆ, ಮುಂಜಿಗಳಿಗೆ ಹಣದ ಪೋಲು ಮುಂತಾದ ಅನೇಕ ಬಗೆಯ ವಿಚಾರಶೂನ್ಯ ನಂಬಿಕೆಗಳು ಹಿಂದಿಗಿಂತಲೂ ಇಂದು ಹೆಚ್ಚಾಗಿವೆ. ಇವು ಮಾಧ್ಯಮಗಳ ಮೂಲಕ ಜನರನ್ನು ಹೆಚ್ಚು ಹೆಚ್ಚು ಮೌಢ್ಯರನ್ನಾಗಿ ಮಾಡುತ್ತಿರುವುದು ದುರಂತವೇ ಸರಿ. ಬಹುದೊಡ್ಡ ಪ್ರಮಾಣದ ವೈಚಾರಿಕ ಮತ್ತು ಸಾಮಾಜಿಕ ಕ್ರಾಂತಿಯಾಗದೆ ಈ ಧಾರ್ಮಿಕ ವಿಷಜಾಲವನ್ನು ನಾಶ ಮಾಡುವುದು ಸಾಧ್ಯವಿಲ್ಲ. ಇಂತಹ ಮೌಢ್ಯತೆಯ, ಶೋಷಣೆಯ ಕರಾಳ ಚಿತ್ರಣಗಳು ತೆಲುಗು ಕಥೆ ಕಾದಂಬರಿಗಳಲ್ಲಿ ಹಾಗೂ ಕುಂ.ವೀ. ಅವರ ಕಥೆಗಳಲ್ಲಿ ರೋಚಕವಾಗಿ ಮೂಡಿಬಂದಿವೆ.

ವಾಸಿರೆಡ್ಡಿ ಸೀತಾದೇವಿಯವರ 'ತಮಸೋಮಾ ಜ್ಯೋತಿರ್ಗಮಯ' ಈ ಕತೆಯಲ್ಲಿ ಧಾರ್ಮಿಕ ಮೌಢ್ಯತೆಯ ಕರಾಳ ಮುಖಗಳ ಅನಾವರಣ ಮನ ಕಲುಕುವಂತೆ ಚಿತ್ರಣಗೊಂಡಿದೆ. ಪಂಚಾಂಗ ಹೇಳುವ ಅವಧಾನಿಗೂ ಮತ್ತು ಕಥಾನಾಯಕ ಗೋಪಾಲನಿಗೂ ಶಾಸ್ತ್ರ ಪಂಚಾಂಗಗಳ ಮಧ್ಯೆ ಬದುಕು ಹೇಗೆ ಸಾಗುತ್ತದೆ ಎಂಬುದರ ಬಗ್ಗೆ ಚರ್ಚೆ ನಡೆಯುತ್ತದೆ. ಬದುಕಿನ ಕಟು ವಾಸ್ತವತೆಯಲ್ಲಿ ಪಂಚಾಂಗಗಳು ಶಾಸ್ತ್ರಗಳು ಹೇಗೆ ಸೋಲುತ್ತವೆ ಎಂಬುದರ ಚರ್ಚೆಯೂ ಬರುತ್ತದೆ. ಅಂತಹ ಒಂದು ಸಂದರ್ಭದಲ್ಲಿ ಅವರು ಆ ದಿನದ ಸರ್ಕಸ್‌ನ ಪ್ರದರ್ಶವನ್ನು ನೋಡಲು ಹೋಗುತ್ತಾರೆ. ಅಲ್ಲಿ ಹದಿನಾರು ವರ್ಷದ ಹುಡುಗ ಮೈಮೇಲೆ ಪೆಟ್ರೋಲ್ ಸುರುವಿಕೊಂಡು ಬೆಂಕಿ ಹಚ್ಚಿಕೊಂಡು ಮುನ್ನೂರು ಗಜ ಮೇಲಿಂದ ಕೆಳಗಿರೋ ಬಾವಿಗೆ ಬೀಳ್ತಾ ಇರುವ ಪ್ರದರ್ಶನವನ್ನು ನೋಡಲು ಅವಧಾನಿಗಳ ಒತ್ತಾಯದ ಮೇರೆಗೆ ಗೋಪಾಲನು ಹೋಗುತ್ತಾನೆ. ಆಗ ಅವರಿಬ್ಬರಿಗೆ ಪ್ರದರ್ಶನ ಕೊಡುವ ಹುಡುಗ ನಾಗೇಶನ ಪರಿಚಯವಾಗುತ್ತದೆ.

ಅವಧಾನಿಗಳೇ ಸ್ವಲ್ಪ ನಾಗೇಶನ ಹಸ್ತ ಪರಿಶೀಲಿಸಿ ಎಂದು ಕೇಳಿದ ಗೋಪಾಲ. ನಾಗೇಶ ಕುತೂಹಲದಿಂದ ಅವರ ಕಡೆಗೂ ಅವರ ಕೈಯಲ್ಲಿದ್ದ ಪಂಚಾಂಗದ ಕಡೆಗೂ ನೋಡಿ ಬಲಗೈ ಚಾಚಿದ.

"ಅವನ ಹಸ್ತವನ್ನು ಹಿಡಿದುಕೊಂಡು ಪರಿಶೀಲಿಸಲಾರಂಭಿಸಿದ ಅವಧಾನಿ ಆಹ್ಹಾ... ಎಷ್ಟೊಂದು ಅದೃಷ್ಟದ ಜಾತಕದನವಪ್ಪಾ ನೀನು! ನೀನು ಖಂಡಿತ ಕಲೆಕ್ಟರಾಗ್ತಿ... ಆಗ ನೀನು ನನಗೇನು ದಕ್ಷಿಣೆ ಕೊಡುವಿಯೋ ನೋಡ್ತೀನಿ!" ಎಂದರು.

ಗೋಪಾಲನಿಗೆ ಆ ಹುಡುಗ ಹೇಳುತ್ತಾನೆ. ಮನೆಯಲ್ಲಿ ಸ್ನೇಹಿತನ ಮನೆಗೆ ಹೋಗುತ್ತೇನೆಂದು ಸುಳ್ಳು ಹೇಳಿ ಬಂದಿದ್ದೇನೆ. ನಮ್ಮ ತಾತ ಮತ್ತು ನಮ್ಮ ತಂದೆ ಈ ಪ್ರದರ್ಶನ ಕೊಡುವಾಗಲೇ ಸಾವನ್ನಪ್ಪಿದರು. ನನ್ನ ತಾಯಿ ತಂದೆಗೆ ನಾನು ಈ ಪ್ರದರ್ಶನ ಕೊಡುವುದು ಇಷ್ಟವಿಲ್ಲ. ಅವರಿಗೆ ತಿಳಿಯದಂತೆ ಕೊಡುತ್ತಿದ್ದೇನೆ. ಈ ದಿನದ ಪ್ರದರ್ಶನದಿಂದ ನನಗೆ ಹಣ ಸಿಕ್ಕುತ್ತದೆ. ರಜೆಯಲ್ಲಿ ಈ ರೀತಿ ಸಂಪಾದನೆ ಮಾಡಿ ನಾನು ಐ.ಎ.ಎಸ್. ಓದಬೇಕು ಎಂದು ಬಹಳ ಉತ್ಸಾಹದಿಂದ ಹೇಳಿದ. ಗೋಪಾಲನ ತಲೆ ಒಳಗೆ ಒಂದು ವಿಚಾರ ಬಂತು. "ಅವಧಾನಿಗಳೇ ನಾಗೇಶ ಎಷ್ಟು ವರ್ಷ ಬದುಕಬಹುದು ಕೈ ನೋಡಿ ಹೇಳಿ" ಎಂದ ಅವಧಾನಿಗಳು ನಾಗೇಶನ ಹಸ್ತ ಪರಿಶೀಲಿಸಿ ಎಂಬತ್ತು ವರ್ಷ ಯೋಚಿಸಬೇಕಿಲ್ಲ ಎಂದರು. ಸರಿಯಾಗಿ ನೋಡಿ ಎಂದ ಗೋಪಾಲ ಆತಂಕದಿಂದ.

ಹೌದಪ್ಪ ಈ ರೇಖೆ ಹೇಗೆ ನೇಗಿಲು ಹೊಲದಲ್ಲಿ ಮಾಡಿದ ಗೆರೆಯಂತೆ ನೆಟ್ಟಗೆ ಹೋಗಿದೆ ನೋಡು ಎಂದರು. ಅಷ್ಟೊತ್ತಿಗೆ ಪ್ರದರ್ಶನದ ಪ್ರಚಾರಕ ಹೇಳುತ್ತಾ ಇದ್ದ ಪ್ರಪಂಚದಲ್ಲಿ ಇಲ್ಲಿ ತನಕ ನೋಡದ, ಕೇಳದ ವಿಚಿತ್ರ... ಹದಿನಾರು ವರ್ಷದ ಹುಡುಗನೋರ್ವ ನೂರು ಗಜ ಎತ್ತರದಿಂದ ಅಗ್ನಿ ಗೋಳದಂತಾಗಿ ಸರಾಸರಿ ಮೃತ್ಯುಗುಹೆಯೊಳಗೆ ಹೇಗೆ ಜಿಗಿಯುವನು ಎಂಬುದನ್ನು ಕಣ್ಣಾರೆ ನೋಡಿ ಕೇವಲ ಒಂದು ಪಾವಲಿ ಮಾತ್ರ ಎಂದು ಹೇಳುತ್ತಾ 'ವೆಲ್ ಆಫ್ ಡೆತ್' ಎಂದು ಕೂಗುತ್ತಿದ್ದ. ಒಂದು, ಎರಡು.. ಮೂರು... ಬಡವನ ಹಸಿವೆಯಂತೆ ಅಗ್ನಿದೇವ ಭಗ್ ಎಂದ ನಾಲಗೆಗಳನ್ನು ಚಾಚಿದ್ದ ಅಗ್ನಿಜ್ವಾಲೆಯ ಜೊತೆಗೆ ಅದಕ್ಕಿಂತ ಮಿಗಿಲಾದ ಆರ್ತನಾದ ಕೇಳಿಬಂತು. ಉರಿಯತೊಡಗಿದ ಆಕಾರ ಗಿರ್ರನೆ ತಿರುಗತ್ತ ಕೆಳಗೆ ಇದ್ದ ವೆಲ್ ಆಫ್ ಡೆತ್ ಬಾವಿಯಲ್ಲಿ ಬೀಳದೆ ನೇರವಾಗಿ ಪ್ರೇಕ್ಷಕರ ಮೇಲೆ ಬಿತ್ತು. ಜನರು ಕಕ್ಕಾಬಿಕ್ಕಿಯಾಗಿ ಓಡತೊಡಗಿದರು. ಕೆಲವರು ಬೆಂಕಿ ಹತ್ತಿಸಿಕೊಂಡರು. ಗೋಪಾಲನ ಹೃದಯ ಚೂರು ಚೂರಾಯಿತು. ಅವಧಾನಿಗಳು ಸೊಂಟದಲ್ಲಿ ಇದ್ದ ಪಂಚಾಂಗವನ್ನು ನಾಯಿಯ ಮೇಲೆ ಎಸೆದರು. ಆ ಪ್ರದರ್ಶನದ ಹುಡುಗ ಕೊಟ್ಟ ಐದು ರೂಪಾಯಿಯನ್ನು ಭಿಕ್ಷುಕರ ತಟ್ಟೆಗೆ ಹಾಕಿ ಏನೊ ಜ್ಞಾನೋದಯವಾದಂತೆ ಮುಂದೆ ಮುಂದೆ ನಡೆದರು.

ಪ್ರಸ್ತುತ ಕತೆಯಲ್ಲಿ ವೈಚಾರಿಕ ಪ್ರಜ್ಞೆಯನ್ನು ಬೆಳೆಸಿಕೊಂಡು ಬದುಕಿನಲ್ಲಿ ಜ್ಞಾನವನ್ನು ಸಂಪಾದಿಸಬೇಕೇ ಹೊರತು ಮೌಢ್ಯದಿಂದ ಜಡ್ಡುಗಟ್ಟಿದ ಶಾಸ್ತ್ರ, ಸಂಪ್ರದಾಯ ಎನ್ನಲ್ಲ ಎಂಬುದನ್ನು ಸೂಚಿಸುತ್ತದೆ. ಮೊರೆ ಹೋಗಬಾರದು ಪ್ರಜ್ಞಾವಲಯವನ್ನು ವಿಸ್ತರಿಸಿಕೊಂಡು ಮನುಷ್ಯ ಬದುಕಬೇಕೇ ಹೊರತು ತಾನೂ ಮೋಸ ಹೋಗುತ್ತಾ ಇತರರನ್ನು ಮೋಸಗೊಳಿಸುತ್ತಾ ಕೇವಲ ಹಣದ ಆಮಿಷಕ್ಕೆ ಒಳಗಾಗಿ ಸಮಾಜದ ಸ್ವಾಸ್ಥ್ಯವನ್ನು ಧರ್ಮ ಕೆಡಿಸಬಾರದು ಎಂಬುದನ್ನು ಕಠಿಣವಾಗಿ ಸೂಚಿಸುತ್ತದೆ. (ಚಿನ್ನದ ತೆನೆ, ಪು. ೨೭೦-೭೧)

**ಕೊನೆ ಟಿಪ್ಪಣಿ**

೧. ಡಿ.ಕೆ. ಶಿವಣ್ಣ, ಮಾನವಶಾಸ್ತ್ರ, ೧೯೮೪, ಕಲಾ ಪ್ರಕಾಶನ, ಪು. ೧೧೩.

೨. ಪಿ. ಮಹದೇವಯ್ಯ, ಬಳ್ಳಾರಿ ಜಿಲ್ಲೆಗೆ ತೆಲುಗರ ವಲಸೆ, ೧೯೯೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೦

ಅಧ್ಯಾಯ ಏಳು

# ಸಮಕಾಲೀನ ಲೇಖಕರ ಸಂದರ್ಭದಲ್ಲಿ ಕುಂ.ವೀರಭದ್ರಪ್ಪ ಅವರ ಸ್ಥಾನ ಹಾಗೂ ಅನನ್ಯತೆ

೭.೧. ಸಮಕಾಲೀನ ಲೇಖಕರ ಸಂದರ್ಭದಲ್ಲಿ ಕುಂ.ವೀ. ಅವರ ಸ್ಥಾನ

೭.೨. ಕುಂ.ವೀ. ಅವರ ಸಾಹಿತ್ಯದ ಅನನ್ಯತೆ

ಅಧ್ಯಾಯ ಏಳು

# ಸಮಕಾಲೀನ ಲೇಖಕರ ಸಂದರ್ಭದಲ್ಲಿ ಕುಂ. ವೀರಭದ್ರಪ್ಪ ಅವರ ಸ್ಥಾನ ಹಾಗೂ ಸಾಹಿತ್ಯದ ಅನನ್ಯತೆ

ಹೈದರಾಬಾದ್ ಕರ್ನಾಟಕ ಭಾಗವಾದ ಬಳ್ಳಾರಿ ಜಿಲ್ಲೆಯ ಪ್ರಮುಖ ಗದ್ಯ ಬರಹಗಾರರಾದ ಕುಂ.ವೀ. ಅವರು ತಮ್ಮ ಸಣ್ಣಕಥೆ, ಕಾದಂಬರಿ, ಜೀವನಚರಿತ್ರೆ, ಆತ್ಮಚರಿತ್ರೆ ಹಾಗೂ ಅನುವಾದಗಳ ಮೂಲಕ ಮಹತ್ವದ ಲೇಖಕರಾಗಿ ಕನ್ನಡ ಸಾಹಿತ್ಯಕ್ಕೆ ಬಹುದೊಡ್ಡ ಕೊಡುಗೆಯನ್ನು ನೀಡಿದ್ದಾರೆ. ಇವರ ಸಾಹಿತ್ಯದ ಮಹತ್ವವನ್ನು ಗುರುತಿಸುವ ಪೂರ್ವದಲ್ಲಿ ಇದುವರೆಗಿನ ಕನ್ನಡ ಸಾಹಿತ್ಯ ಬೆಳೆದು ಬಂದ ಬಗೆ, ಬದಲಾವಣೆಗೆ ತೆರೆದುಕೊಂಡ ರೀತಿಯನ್ನು ಗಮನಿಸುತ್ತಾ, ಕುಂ.ವೀ. ಅವರು ಸಮಕಾಲೀನ ಸಾಹಿತಿಗಳಲ್ಲಿ ಹೇಗೆ ಬಿನ್ನರಾಗಿ ಕಾಣಿಸುತ್ತಾರೆ ಎಂಬುದನ್ನು ಈ ಅಧ್ಯಾಯದಲ್ಲಿ ತಿಳಿಸಲಾಗಿದೆ.

'ಓ ಕಾನರ್ ಸಣ್ಣ ಕತೆಯನ್ನು ಕುರಿತು ಬರೆದ ತನ್ನ ಪುಸ್ತಕಕ್ಕೆ 'ಒಂಟಿದನಿ'(The Lonely Voice) ಎಂಬ ಸಾಂಕೇತಿಕ ಹೆಸರಿಟ್ಟಿದ್ದಾನೆ. ಅವನ ಪ್ರಕಾರ 'ಸಣ್ಣಕತೆ ತನ್ನ ಸ್ವರೂಪದಲ್ಲೇ ಜನಾಂಗದಿಂದ ಜನಸಮೂಹದಿಂದ ದೂರವಾದದ್ದು ಮತ್ತು ಅದರ ಪರಾಮರ್ಶೆಯ ಚೌಕಟ್ಟು ಸಮಗ್ರ ಮಾನವ ಜೀವನವಾಗಲಾರದು ಎನ್ನುವ ಕಾನರ್ ಸಣ್ಣಕತೆಗೆ ನಿಜವಾದ ಅರ್ಥದಲ್ಲಿ 'ನಾಯಕ'ನಿಲ್ಲ. ಅವನು ಧೀರೋದಾತ್ತನೂ ಅಲ್ಲ ಧೀರಲಲಿತನೂ ಅಲ್ಲ, ಸಣ್ಣಕತೆಯಲ್ಲಿ ಕಾಣಿಸಿಕೊಳ್ಳುವ ಮುಖ್ಯ ಪಾತ್ರಗಳು ಮುಳುಗಿಹೋದ ಜನರ ಗುಂಪಿಗೆ(Submerged Population group) ಸೇರಿದವರು. ಲೇಖಕನಿಂದ ಲೇಖಕನಿಗೆ ಪೀಳಿಗೆಯಿಂದ ಪೀಳಿಗೆಗೆ ಇವರ ಸ್ವಭಾವ ಬದಲಾಗುತ್ತ ಹೋದರೂ ಅವರು ಮೂಲತಃ ಮುಳುಗಿ ಹೋದವರೇ ಇರುತ್ತಾರೆ. ಸಮಾಜದಿಂದ ಬಹಿಷ್ಕೃತರಾದವರು ಹಾಗಾಗಿ ಸಮಾಜದ ಹೊರ ಅಂಚಿನಲ್ಲಿಯೇ ಸುಳಿದಾಡುವವರು.

ಬರ್ನಾರ್ಡ್ ಬರ್ಗೊಂಜಿ(೧೯೭೦) ಎಂಬ ವಿಮರ್ಶಕ ಓ ಕಾನರ್‌ನ ವಾದವನ್ನು ಬೆಳೆಸುತ್ತಾ ಸಣ್ಣಕತೆಯ ಪಾತ್ರಗಳು ಬದುಕಿನ ಬಲಿಪಶುಗಳು. ಅವಮಾನಿತರು, ನೊಂದವರು, ಹತಾಶರು ಮತ್ತು ಅನಾಥರು ಎನ್ನುತ್ತಾನೆ(ಪು.೨೧೪). ಇದು ಬಹುಮಟ್ಟಿಗೆ ನಿಜ. ಆರೋಗ್ಯದ ಜೀವನೋತ್ಸಾಹದ ಬದುಕನ್ನು ಗೆಲ್ಲುವ ಛಲದ ಪಾತ್ರಗಳು ಸಣ್ಣಕತೆಯಲ್ಲಿ ಅಪರೂಪ. ಬರ್ಗೊಂಜಿ ಹೇಳಿದಂತೆ ಮಹತ್ವದ ಸಣ್ಣಕತೆಗಳೆಲ್ಲಾ ಪಾಶವೀ ಪರಿಸರದ ಹಿಡಿತದಲ್ಲಿ ಸಿಕ್ಕು ಸೋತ ಮಾನವೀಯ ಆಶೋತ್ತರಗಳ ಕಲಾತ್ಮಕ ಚಿತ್ರಣಗಳಾಗಿವೆ.[೧] ಬರ್ಗೊಂಜಿ ಹೇಳಿದಂತೆ ನೋಡುವುದಾದರೆ ನಮ್ಮ ಭಾರತೀಯ ಸಣ್ಣಕಥೆಗಳಲ್ಲಿ ಸೋಲೇ ಮುಖ್ಯವಾದ ಅಂಶವಾಗಿದ್ದರೆ ಮಾಸ್ತಿಯವರ ಕಥೆಗಳು ಇದಕ್ಕೆ ಹೊರತಾಗಿವೆ. ಏಕೆಂದರೆ ಪಶ್ಚಿಮದ ಆದುನಿಕ ಸಣ್ಣಕತೆಗಿಂತ ಭಿನ್ನವಾದ ಜೀವನದೃಷ್ಟಿಯನ್ನು ಅವರ ಕತೆಗಳಲ್ಲಿ ಕಾಣಬಹುದಾಗಿದೆ. ಆದರೆ ಯಾವಾಗ ಕನ್ನಡ ಸಣ್ಣಕತೆ ಭಾರತೀಯ ಮಾದರಿಯಿಂದ ದೂರ ಸರಿಯತೊಡಗಿತೋ ಯಾವಾಗ ಪಶ್ಚಿಮದ ಮಾದರಿಗೆ ಹೆಚ್ಚು ಹೆಚ್ಚು ಸಮೀಪವಾಗುತ್ತ ಹೋಯಿತೋ ಆಗ ಅದು ಸೋಲಿನ, ಗೋಳಿನ ಕತೆಯಾಗುತ್ತ ಹೋಯಿತು.

ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಹಳೆಯ ಸಾಹಿತ್ಯ ಸಂಪ್ರದಾಯ ಬದ್ಧತೆಯನ್ನು ಮುರಿದು ನವೋದಯ ಸಾಹಿತ್ಯ ಮೂಡಿ ಬಂತು. ಪ್ರಕೃತಿ ಪ್ರೇಮ, ಸೌಂದರ್ಯೋಪಾಸನೆ, ಮಾನವೀಯತೆ, ಅನುಕಂಪ, ತತ್ವನಿಷ್ಠೆ, ಆದರ್ಶ ಹಾಗೂ ಆಶಾವಾದಗಳು ನವೋದಯ ಸಾಹಿತಿಗಳಲ್ಲಿ ವಿಜೃಂಭಿಸಿವೆ. ಇಂಗ್ಲಿಷ್ ಸಾಹಿತ್ಯದಿಂದ ಪ್ರಭಾವಿತರಾದರೂ ವಾಸ್ತವದಿಂದ ಇವರೇನೂ ಸಂಪೂರ್ಣವಾಗಿ ವಿಮುಖರಾಗಲಿಲ್ಲ. ಅನ್ಯಾಯದ ವಿರುದ್ಧ ಇವರ ಲೇಖನಿಯನ್ನು ಎತ್ತಿದ್ದೂ ಉಂಟು. ಗೇಯತೆ, ಭಾಷೆಯಲ್ಲಿ ಮಿಂಚಿದ ಲಾಸ್ಯ, ಕಲ್ಪನೆಯ ವಿಲಾಸ ಇತ್ಯಾದಿ ಅಂಶಗಳು ಈ ಕವಿಗಳ ಶ್ರೇಷ್ಟತೆ ಹಾಗೂ ವೈಶಿಷ್ಟ್ಯಗಳನ್ನು ಮೆರೆದಿವೆ. ಕನ್ನಡ ಕಥಾಸಾಹಿತ್ಯಕ್ಕೆ ಶ್ರೇಷ್ಠವಾದ ಕೊಡುಗೆಯನ್ನು ನವೋದಯ ಸಾಹಿತ್ಯ ಕೊಟ್ಟಿದೆ.

ನವೋದಯ ಸಾಹಿತ್ಯಕ್ಕೆ ಪ್ರತಿಭಟನೆಯಾಗಿ ಪ್ರಗತಿಶೀಲ ಸಾಹಿತ್ಯ ತಲೆ ಎತ್ತಿತು. ಪ್ರಗತಿಶೀಲರು ಮಾರ್ಕ್ಸ್‌ವಾದದಿಂದ ಮಾಕ್ಸಿಂ ಗಾರ್ಕಿ ಮುಂತಾದ ರಶಿಯನ್ ಲೇಖಕರಿಂದ ಪ್ರಭಾವಿತರಾಗಿ ನವೋದಯದ ವಿರುದ್ಧ ಬಂಡೆದ್ದರು. ನವೋದಯದವರು ರಾಜಕೀಯದಿಂದ ದೂರವಿರಲು ಪ್ರಯತ್ನಿಸಿದರು. ಪ್ರಗತಿಶೀಲರು ರಾಜಕಾರಣ ಸಾಹಿತ್ಯದಲ್ಲಿಯೂ ನಿವೇದಿತವಾಗಬೇಕು ಎನ್ನುವವರು. ಕೂಲಿಕಾರರ ಸಮಸ್ಯೆ, ರೈತರ ಸಂಕಷ್ಟಗಳು ಸಾಹಿತ್ಯದಲ್ಲಿ ಬಿಂಬಿತವಾಗಬೇಕು ಎನ್ನುವವರು. ದೌರ್ಜನ್ಯ ದಬ್ಬಾಳಿಕೆ ದಲಿತರ ಶೋಷಣೆಯನ್ನು ಸಾಹಿತ್ಯದ ಮೂಲಕ ಎದುರಿಸಬೇಕು ಎಂದು ಹಠ ತೊಟ್ಟವರು. ಇದರಿಂದ ಆಧುನಿಕ ಕನ್ನಡ ಸಾಹಿತ್ಯಕ್ಕೆ ಇನ್ನೊಂದು

ಆಯಾಮ ಬಂದಂತಾಯಿತು. ವಾಸ್ತವಿಕತೆಗೆ ಸಾಹಿತ್ಯದಲ್ಲಿ ಹೆಚ್ಚು ಪ್ರಾಶಸ್ತ್ಯ ದೊರಕಿದಂತಾಯಿತು. ಮಡಿವಂತಿಕಗೆ ಸೊಪ್ಪು ಹಾಕದೆ, ಅನ್ಯಾಯ ಅಸಮತೆಗಳ ವಿರುದ್ಧ ಇವರು ದನಿಯೆತ್ತಿದರು. ನವೋದಯ ಸಾಹಿತ್ಯ ಪ್ರಮುಖವಾಗಿ ಮಧ್ಯಮವರ್ಗದತ್ತ ಮುಖ ಮಾಡಿತು. ಪ್ರಗತಿಶೀಲ ಸಾಹಿತ್ಯ ವಿಶೇಷವಾಗಿ ಕೆಳವರ್ಗದ ಶೋಷಿತ ಮಂದಿಯ ಬದುಕನ್ನು ಪ್ರತಿಪಾದಿಸಿತು. ಆದರೆ ವಸ್ತುನಿಷ್ಠೆಯ ಅಭಾವ ಮತ್ತು ಭಾವತಿರೇಕಗಳಿಗೆ ಈ ಸಾಹಿತ್ಯ ಹೆಚ್ಚು ಹೆಚ್ಚು ಪ್ರಾಶಸ್ತ್ಯ ಪಡೆಯಲು ಅವಕಾಶ ನೀಡಲಿಲ್ಲ. ಬಹುತೇಕ ಸಮಸ್ಯೆಗಳು ಅನುಭವವಾಗಿ ದಾಖಲಾಗಲಿಲ್ಲ. ಹಸಿ ಹಸಿಯಾಗಿ ಬಿತ್ತರಗೊಂಡವು. ಇದರಿಂದ ಜೀವನಚಿತ್ರಣ ತೆಳುವಾಗಿ ಸಾಕಷ್ಟು ಪರಿಣಾಮ ಬೀರಲಿಲ್ಲ.

ಮುಂದೆ ಸ್ವಾತಂತ್ರ್ಯಾನಂತರ ಸುಮಾರು ೧೯೫೦ರಲ್ಲಿ ನವ್ಯ ಸಾಹಿತ್ಯ ಕಾಣಿಸಿಕೊಂಡಿತು. ಮುಖ್ಯವಾಗಿ ಇದು ನವೋದಯ ಸಾಹಿತ್ಯಕ್ಕೆ ಪ್ರತಿಕ್ರಿಯೆಯಾಗಿ ಜನ್ಮ ತಾಳಿದ್ದು ಎನ್ನಬಹುದು. ನವೋದಯ ಸಾಹಿತ್ಯ ಒಂದು ಕಾಲಕ್ಕೆ ಉಪಯುಕ್ತವಾಗಿದ್ದರೂ ಈಗ ಅದು ತನ್ನ ಸತ್ವ ಕಳೆದುಕೊಂಡಿದೆ. ಇನ್ನು ಅದರ ಉಪಯುಕ್ತತೆ ಉಳಿದಿಲ್ಲ ಎಂದು ನವ್ಯ ಸಾಹಿತಿಗಳು ಅಭಿಪ್ರಾಯ ಪಟ್ಟರು. ಸಾಹಿತ್ಯದಲ್ಲಿ ಸ್ವಂತ ಅನುಭವವೇ ಪ್ರಮಾಣ ಎಂದು ಸಾರಿದರು.

ಸ್ವಾತಂತ್ರ್ಯಾನಂತರದ ಬದುಕು ತುಂಬಾ ಸಂಕೀರ್ಣವಾದ್ದರಿಂದ ಈ ಸಂಕೀರ್ಣತೆ ಕಾವ್ಯದಲ್ಲಿ ಸಂಭವಿಸಲು ಸುಲಭ ಸರಳ ಮಾರ್ಗಗಳಿಲ್ಲ. ಮನೋವೈಜ್ಞಾನಿಕ ವಿಶ್ಲೇಷಣೆಗೆ ಹೆಚ್ಚು ಒತ್ತು ಸಿಕ್ಕಿತು. ಇಂಥ ಧೋರಣೆಗಳಿಂದ ನವ್ಯರು ಸಾಧಾರಣತೆಯಲ್ಲಿ, ಸರಳ ಅಭಿವ್ಯಕ್ತಿಯಲ್ಲಿ ಸೊರಗುತ್ತಿದ್ದ ಸಾಹಿತ್ಯಕ್ಕೆ ಹೊಸ ಚೈತನ್ಯ ತುಂಬಿದರು. ಕನ್ನಡ ನುಡಿಗೆ ಹೊಸ ನಡಿಗೆ ಕಲಿಸಿ ದಂತಾಯಿತು. ಇದೊಂದು ದೊಡ್ಡ ಸಾಧನೆ. ಆದರೆ ಇವರ ಕಾವ್ಯದಲ್ಲಿ ವ್ಯಕ್ತಿನಿಷ್ಠೆಗೆ ಎಲ್ಲಿಲ್ಲದ ಪ್ರಾಶಸ್ತ್ಯ ನೀಡಿದ್ದೇ ಒಂದು ದೋಷವಾಯಿತು. ನವೋದಯ ಮತ್ತು ಪ್ರಗತಿಶೀಲ ಸಾಹಿತಿಗಳು ಜನ ಪರವಾಗಿದ್ದರೆ. ನವ್ಯರು ತಮ್ಮ ಮನಸ್ಸನ್ನು ಜನಪದದಿಂದ ದೂರ ಮಾಡಿಕೊಂಡರು. ಸಾಹಿತ್ಯ ಕೇವಲ ಬುದ್ಧಿಜೀವಿಗಳ ಸೊತ್ತಾಯಿತು, ಒಂದು ರೀತಿಯ ಬೌದ್ಧಿಕ ಕಸರತ್ತಾಯಿತು. ಆತ್ಮರತಿಯೂ ಆಯಿತು. ಹೀಗೆ ನವ್ಯವೂ ಒಂದು ಏಕತಾನದ ಹೃದಯವಂತಿಕೆಯಿಲ್ಲದ ಸಾಂಪ್ರದಾಯಿಕತೆಯನ್ನು ಮುಟ್ಟಿದಾಗ ಕೆಳವರ್ಗದ ಮಂದಿ, ತಮ್ಮನ್ನು ನಿಕೃಷ್ಟವಾಗಿ ಕಾಣುವ ನವ್ಯರ ವಿರುದ್ಧ ಸಿಡಿದೆದ್ದರು. ಬಂಡಾಯ ಮತ್ತು ದಲಿತ ಸಾಹಿತ್ಯದ ಉದಯವಾಯಿತು. ಇಲ್ಲಿಯ ತನಕ ಮಧ್ಯಮವರ್ಗದವರು, ದಲಿತರ ಪರವಾಗಿ ಸಹಾನುಭೂತಿಯಿಂದ ಬರೆಯುತ್ತಿದ್ದರು. ಈಗ ತಮ್ಮ ನೋವಿಗೆ ಸಂಕಟಕ್ಕೆ ಸಮಸ್ಯೆಗಳಿಗೆ ದಲಿತರೇ ದನಿ ಕೊಡುತ್ತಿದ್ದಾರೆ. ಒಂದು ಅರ್ಥದಲ್ಲಿ ಬಂಡಾಯ ಹಾಗೂ ದಲಿತ ಸಾಹಿತ್ಯದ ಧ್ಯೇಯ ಧೋರಣೆ ಪ್ರಗತಿಶೀಲ ಸಾಹಿತ್ಯಕ್ಕೆ

ಹತ್ತಿರವಾಗುತ್ತದೆ. ಪ್ರಗತಿಶೀಲರಂತೆ ಇವರೂ ಕೂಡ ಸಮಾಜದಲ್ಲಿ ನಂಬಿಕೆಯುಳ್ಳವರು. ಪ್ರಗತಿಶೀಲರು ಮಧ್ಯಮಮಾರ್ಗದಿಂದ ಬಂದವರಾದ್ದರಿಂದ ದಲಿತರ ಸಮಸ್ಯೆಗಳನ್ನು ಭಾವನಾತ್ಮಕವಾಗಿ ಚಿತ್ರಿಸಿದ್ದಾರೆ. ಈ ಸಾಹಿತಿಗಳು ತಮ್ಮ ಸಮಸ್ಯೆಗಳನ್ನು ನಿಖರವಾಗಿ ತಲಸ್ಪರ್ಶಿಯಾಗಿ ದಾಖಲಿಸುತ್ತಾರೆ. ಮೇಲುವರ್ಗದ ಸಂಸ್ಕೃತಿ ಇವರಿಗೆ ಖಂಡನಾರ್ಹ ವಾದ 'ಯಜಮಾನ ಸಂಸ್ಕೃತಿ.' ಜನಸಾಮಾನ್ಯರ ಸಂಸ್ಕೃತಿಯೇ ಇವರಿಗೆ ಮುಖ್ಯವಾಗುತ್ತದೆ. ನೈತಿಕ ಬದ್ಧತೆಗೆ ಇವರು ಪ್ರಾಮುಖ್ಯತೆ ಕೊಡುತ್ತಾರೆ. ಕೃತಿಯ ಆಕೃತಿಗಿಂತ ಕೃತಿಯ ಒಳ ತಿರುಳಿಗೆ ಇವರು ಒತ್ತುಕೊಡುತ್ತಾರೆ. ಶೋಷಣೆಯ ಅಡಿಪಾಯದ ಮೆಲೆ ನಿಂತ ತಾರತಮ್ಯದ ಭ್ರಷ್ಟ ಜಾತಿವ್ಯವಸ್ಥೆಯ ವಿರುದ್ಧದ ಪ್ರಬಲ ದನಿಯಾಗಬೇಕು ಸಾಹಿತ್ಯ ಎಂಬುದು ಇವರ ಆಶಯ.

ದಲಿತ ಸಾಹಿತ್ಯಕ್ಕೆ ವಿಶಿಷ್ಟವಾದ ಒಂದು ಪ್ರತ್ಯೇಕ ಲೋಕವುಂಟು. ಇದರ ಗದ್ಯಕ್ಕೆ ತನ್ನದೇ ಆದ ಧೀರ ನಡಿಗೆ ಇದೆ. ೧೯೭೩ರಲ್ಲಿ ಪ್ರಕಟಗೊಂಡ ದೇವನೂರ ಮಹಾದೇವರ 'ದ್ಯಾವನೂರು' ಕಥಾಸಂಕಲನ ತನ್ನ ತಣ್ಣನೆಯ ಆಕ್ರೋಶದಿಂದ ಇಲ್ಲಿಯವರೆಗೆ ಅಪರಿಚಿತವಾಗಿದ್ದ ಲೋಕವೊಂದನ್ನು ಪರಿಚಯಿಸಿ, ಸಾಹಿತ್ಯಾಸಕ್ತರೆಲ್ಲರನ್ನು ಬೆರಗುಗೊಳಿಸಿತು. ಹಾಗೆಯೇ ೧೯೭೫ರಲ್ಲಿ ಪ್ರಕಟವಾದ ಸಿದ್ಧಲಿಂಗಯ್ಯನವರ 'ಹೊಲೆಮಾದಿಗರ ಹಾಡು' ಕವನಸಂಕಲನ ತನ್ನ ತಾಜಾತನದಿಂದ ಕಾವ್ಯ ಲೋಕವನ್ನು ದಿಗ್ಭ್ರಮೆಗೊಳಿಸಿತು. ತರುವಾಯ ಬಂದ ಅವರ 'ಸಾವಿರಾರು ನದಿಗಳು' ಅವರ ಹೆಸರನ್ನು ಸಾಹಿತ್ಯದಲ್ಲಿ ಸ್ಥಿರಗೊಳಿಸಿತು. ಈಚೆಗಿನ ಮಹಾದೇವರ 'ಒಡಲಾಳ' ಮತ್ತು 'ಕುಸುಮಬಾಲೆ' ಕೃತಿಗಳು ದಲಿತ ಸಾಹಿತ್ಯಕ್ಕೆ ಇನ್ನಿಲ್ಲದ ಗೌರವ ತಂದುಕೊಟ್ಟವು. ಮುಂದೆ ಹಲವರು ಬಂಡಾಯ ಮತ್ತು ದಲಿತ ಲೇಖಕರು ದಲಿತ ಸಾಹಿತ್ಯವನ್ನು ಗಟ್ಟಿಗೊಳ್ಳುವುದರಲ್ಲಿ ತಮ್ಮ ಸಮರ್ಥ ಹಾಗೂ ಸಾರ್ಥಕ ಕಾಣಿಕೆ ಸಲ್ಲಿಸಿದ್ದಾರೆ.

ದ್ಯಾವನೂರರ 'ಮಾರಿಕೊಂಡವರು', 'ಗ್ರಸ್ತರು', 'ಮೂಡಲ ಸೀಮೇಲಿ ಕೊಲೆಗಿಲೆ ಮುಂತಾಗಿ' 'ಅಮಾಸ' ಕಥೆಗಳಲ್ಲಿ ಹಳ್ಳಿಗಾಡಿನ ಊಳಿಗಮಾನ್ಯ ಪದ್ಧತಿಯಲ್ಲಿ ಸಿಕ್ಕು ಒದ್ದಾಡುತ್ತಿರುವ ದಲಿತರ ಸಮಸ್ಯೆಗಳಿವೆ. 'ಮಾರಿಕೊಂಡವರು' ಕಥೆ ಹೊಟ್ಟೆಯ ಸಲುವಾಗಿ ತಮ್ಮ ದುಡಿಮೆಯ ಜೊತೆಗೆ ಶೀಲದ ಮೇಲಿನ ಹಕ್ಕನ್ನು ದಣಿಗಳಿಗೆ ಒಪ್ಪಿಸಿರುವ ಶೋಷಿತರ ಚಿತ್ರ. 'ಗ್ರಸ್ತರು' ಕಥೆಯಲ್ಲಿ ಶೋಷಕರ ಎದುರು ಆಯ್ಕೆ ಅಭಿಪ್ರಾಯ ಸ್ವಾತಂತ್ರ್ಯಗಳನ್ನೆಲ್ಲಾ ಕಳೆದುಕೊಂಡಿರುವ ಶೋಷಿತರ ಚಿತ್ರಣವಿದೆ. ಮೈಮುರಿಯುವಂತೆ ದುಡಿಸಿಕೊಂಡು ಆ ಪ್ರಾಮಾಣಿಕ ದುಡಿಮೆಯ ಮೇಲೆ ದೊಡ್ಡವರಾಗಿ, ಆ ದುಡಿತಕ್ಕೆ ಪ್ರತಿಯಾಗಿ ದಿನವೂ ಅರೆಹೊಟ್ಟೆಯ ನಿಧಾನ ಹತ್ಯೆಯನ್ನು ನೀಡುವ ಶೋಷಣೆಯನ್ನು 'ಮೂಡಲ ಸೀಮೇಲ್ಲಿ ಕೊಲೆಗಿಲೆ ಮುಂತಾಗಿ' ಕಥೆ ಉದಾಹರಿಸುತ್ತದೆ. 'ಅಮಾಸ' ಶೋಷಕ ಹಾಗೂ ಶೋಷಿತರಿಬ್ಬರಿಗೂ ಅರಿವಿಲ್ಲದೆ ಶೋಷಣೆಯ ಪ್ರಕ್ರಿಯೆ

ತಲೆಮಾರಿನಿಂದ ತಲೆಮಾರಿಗೆ ಹೇಗೆ ನಿರಂತರವಾಗಿ ಮುಂದುವರಿಯುತ್ತದೆಂದು ಸೂಚಿಸುವ ಇನ್ನೊಂದು ಪರಿಣಾಮಕಾರಿಯಾದ ಕಥೆ. ಹೀಗೆ ಶೋಷಣೆಯ ವಿವಿಧ ಮುಖಗಳನ್ನು ಮಹಾದೇವರು ಇಲ್ಲಿ ಚಿತ್ರಿಸಿದ್ದಾರೆ. ಇನ್ನೊಂದು ಉತ್ತಮ ಕಥೆಯಾದ 'ಡಾಂಬರು ಬಂದುದು' ಹಳ್ಳಿಯ ಬದುಕಿನಲ್ಲಿ ಆಧುನಿಕತೆಯ ಪ್ರವೇಶದಿಂದಾಗಿ 'ವ್ಯವಸ್ಥೆ'ಯಲ್ಲಿ ಉಂಟಾಗುವ ಸ್ಥಿತ್ಯಂತರಗಳನ್ನು .ಸೂಚಿಸುತ್ತದೆ.

ಮಹಾದೇವರ ಕಥೆಗಳಲ್ಲಿ ಶೋಷಣೆಯಂಥ ವಸ್ತುವನ್ನು ಒಳಗೊಂಡಿದ್ದರೂ ಮಹಾದೇವರ ದನಿ ಎಲ್ಲೂ ಚೀರಾಟವಾಗಿ ಉಕ್ಕುವುದಿಲ್ಲ. ತಾವು ಶೋಷಣೆಗೆ ಒಳಗಾಗಿದ್ದೇವೆ ಎಂಬ ಅರಿವೇ ಇಲ್ಲದ ಇದೆಲ್ಲ ದೈವನಿಯತವಾದ ಅನಿವಾರ್ಯ ಸ್ಥಿತಿ ಎಂದು ಒಪ್ಪಿಕೊಂಡ ಪಾತ್ರಗಳಿವೆ. ನೋವನ್ನು ವಿಧಿಯಿಲ್ಲದೆ ಮೌನವಾಗಿ ಅನುಭವಿಸುವ, ಚೀರಾಡಿದರೆ ಯಾರೂ ಕೇಳುವವರಿಲ್ಲ ವೆಂದು ತಿಳಿದಿರುವ ಶೋಷಿತರ ಮನಃಸ್ಥಿತಿಯನ್ನು ಅತ್ಯಂತ ನೈಜವಾಗಿ ಹಿಡಿದಿಟ್ಟಿರುವ ದೃಷ್ಟಿಕೋನವಿದೆ. ಮಹಾದೇವರು ನವ್ಯರಂತೆ ಕಲಾತ್ಮಕತೆಗೆ ಹೆಚ್ಚು ಬೆಲೆ ಕೊಟ್ಟಂತೆ ಕಾಣಿಸುತ್ತದೆ.

ದೇವನೂರ ಮಹಾದೇವರ ಕಥೆಗಳ ವಸ್ತುವಿನಲ್ಲಿ ಹೊಸತನವಿದೆಯೇ ಹೊರತು ಕೃತಕತೆ ಇಲ್ಲ. ಬೌದ್ಧಿಕ ಕಸರತ್ತಾಗಲೀ ಅತಿಯಾಗಿ ರಂಜಿಸಿದ ಕಥೆ ಹೇಳುವ ಖಯಾಲಿಯಾಗಲೀ ಅವರಿಗಿಲ್ಲ. ಕಥೆಗಳಲ್ಲಿ ಬರುವ ಪಾತ್ರಗಳು ಸಹಜವಾಗಿ ತಮ್ಮ ನೆನಪಿನ ಸುರುಳಿ ಬಿಚ್ಚುವ ಮೂಲಕ ಹಾಗೂ ಅವರ ಗ್ರಹಿಕೆಗಳ ಮೂಲಕವಾಗಿ ಮುಂದುವರಿಯುತ್ತವೆಯೇ ಹೊರತು ಕಥೆಗಾರ ಮಧ್ಯೆ ಪ್ರವೇಶಿಸಿ ವಿವರಣೆ ನೀಡುವುದರ ಮೂಲಕ ಸಮಸ್ಯೆಯನ್ನು ಸರಳ ಗೊಳಿಸುವುದಿಲ್ಲ. ಕಥೆಯ ಹೊರಗೆ ನಿಂತು ನಿರೂಪಕರು ನಿರ್ಲಿಪ್ತತೆಯಿಂದ ನಿರೂಪಿಸುತ್ತಾರೆ.

ಜಮೀನ್ದಾರಿ ಪದ್ಧತಿಯಲ್ಲಿ ಶ್ರಮಿಕ ವರ್ಗಕ್ಕೆ ಆಗುವ ಅನ್ಯಾಯವನ್ನು ರಂಗಪ್ಪ, ಅಮಾಸ, ಕುರಿಯಯ್ಯ, ಬೀರ ಮುಂತಾದವರ ದೀನಸ್ಥಿತಿಯ ವರ್ಣನೆಯಿಂದ ಓದುಗರು ಅರಿಯುವಂತೆ ಮಾಡಿರುವುದು ದೇವನೂರರ ಬರವಣಿಗೆಯ ವಿಶಿಷ್ಟತೆಯಾಗಿದೆ. ಕಥಾವಸ್ತುವಿನ ಜೊತೆಗೆ ಪಾತ್ರಗಳ ಪರಸ್ಪರ ಸ್ಪಷ್ಟ ಬೆಳವಣಿಗೆಯಲ್ಲಿ ಲೇಖಕರ ಆಶಯ ಮತ್ತು ಧೋರಣೆಗಳು ಒಳಸುಳಿಯಾಗಿ ಬೆಳೆದುಬಂದಿವೆ. ಲಕ್ಷ್ಮಿ, ಕುಸುಮ, ಕೆಂಪಿ ದೌರ್ಜನ್ಯಕ್ಕೆ ಬಲಿಯಾಗಿದ್ದರೂ ಅವರ ಚಿತ್ರಣಕ್ಕಷ್ಟೆ ಹೆಚ್ಚು ಒತ್ತು ನೀಡದೇ ಇಂಥ ದುರಂತಕ್ಕೆ ಕಾರಣವಾದ ನೆಲೆಗಳ ಕಡೆಗೂ ಓದುಗರ ಗಮನ ಸೆಳೆಯುವಂತೆ ವಿವರಗಳನ್ನು ಒದಗಿಸುತ್ತಾರೆ. ಆದ್ದರಿಂದ ಇವರ ನಿರ್ಭಾವುಕ ಶೈಲಿಯ ಬರವಣಿಗೆ ಎಂತಹ ಪರಿಸ್ಥಿತಿಯಲ್ಲಿಯೂ ಭಾವಾತಿರೇಕಕ್ಕೆ ಒಳಗಾಗದೆ ಸಮತೂಕದಿಂದ ಕೂಡಿದೆ. ಹೀಗಾಗಿ ಇವರು ಸೃಷ್ಟಿಸುವ ಪಾತ್ರಗಳಲ್ಲೂ ಸಹ ಸುಪ್ತ ಹಾಗೂ ಮೌನ ಪ್ರತಿಭಟನೆಯನ್ನು ಕಾಣುತ್ತೇವೆ. ದೇವನೂರರ ಶ್ರೇಷ್ಠತೆ ಇರುವುದು ದಲಿತ ಕುಟುಂಬವೊಂದರ ದಾರುಣತೆಯನ್ನು

ದಾಖಲಿಸುವುದರಲ್ಲಿ. ಹಾಗಾಗಿ ಅವರ ಬರವಣಿಗೆಯಲ್ಲಿ ಒಂದು ಸಂಸ್ಕೃತಿಯ ಚಲನಶೀಲತೆಯನ್ನು ಕಾಣುತ್ತೇವೆ. ಪಾತ್ರಗಳ ಮೂಲಕ ವ್ಯವಸ್ಥೆಯೊಳಗಿನ ವಿಕಾರಗಳನ್ನು ಹಾಗೂ ನೋವುಗಳನ್ನು ವಿಡಂಬನೆಯ ಮೂಲಕ ಪ್ರಕಟಿಸುತ್ತಾರೆ.

ದೇವನೂರರ ಕಥಾಸಾಹಿತ್ಯದ ಪಾತ್ರಗಳಲ್ಲಿ ಪ್ರಧಾನಸಂಸ್ಕೃತಿಯ ಶೋಷಣೆ ದಬ್ಬಾಳಿಕೆ ಮೊದಲಾದವುಗಳ ಚಿತ್ರಣಗಳಿದ್ದರೂ ಅದರಲ್ಲಿರುವ ಪ್ರತಿಭಟನೆಯು ಸ್ಥಾಯಿಯಾಗಿ ಸೂಕ್ಷ್ಮವಾಗಿ ಅಡಗಿಕೊಂಡಿರುವುದನ್ನು ಕಾಣಬಹುದಾಗಿದೆ. ಆದ್ದರಿಂದಲೇ ಇಲ್ಲಿನ ಪ್ರತಿಭಟನೆ ಅನೇಕ ಕ್ರಾಂತಿಗಳಿಂದ ಮುಕ್ತವಾಗಿ ನಿರ್ಲಿಪ್ತವಾಗಿದೆ. ಬಂಡಾಯದ ಅಂಶ ಗುಪ್ತವಾಗಿ ವಿವರಗಳ ಒಳಗಿನಿಂದಲೇ ಬೆಳೆದು ಬರುತ್ತದೆ.

ದೇವನೂರರ ಕಥೆಗಳನ್ನು ಕುರಿತು ಟಿ.ಪಿ. ಅಶೋಕ ಅವರು "ದೇವನೂರರ ಕಥೆಗಳಲ್ಲಿ ಭಾವನೆಗಳು ಹತ್ತಿಕೊಂಡು ಉರಿಯುವುದಿಲ್ಲ. ಉರಿದು ಬೂದಿಯಾಗುವುದಿಲ್ಲ. ಅವರ ಕೋಪ ಬೂದಿ ಮುಚ್ಚಿದ ಕೆಂಡದ ಹಾಗೆ, ಅವರದು ಶೀತಲಸಿಟ್ಟು"[೨](೧೯೮೫: ೩೪೮) ಎನ್ನುವ ಮಾತು ಸಮರ್ಥನೀಯವಾಗಿದೆ.

ಲೇಖಕನ ಅನುಭವದ ಕೆಂಡ ಸಾಹಿತ್ಯದಲ್ಲಿ ಕೇವಲ ಕೂಗಾಗಿ ಹೊರಬರುವುದಿಲ್ಲ. ಪಾತ್ರಗಳಲ್ಲಿ ಅಂತಸ್ಸತ್ವವಾಗಿ ಅಡಗಿದ್ದು ಓದುಗರೊಳಗೆ ಸುಡುವ ಸಂವೇದನೆಯಾಗಿ ಪರಿವರ್ತನೆಗೊಳ್ಳುತ್ತದೆ. ದೇವನೂರರ ಪಾತ್ರಗಳಲ್ಲಿ ಬಾಹ್ಯ ಸ್ವರೂಪದ ಆಕ್ರೋಶವಾಗಲಿ ಹಿಂಸೆಯಾಗಲೀ ವ್ಯಕ್ತವಾಗುವುದಿಲ್ಲ. ಅಂದರೆ ಅವರ ಸಾಹಿತ್ಯದಲ್ಲಿ ಸಿಟ್ಟೇ ಇಲ್ಲವೆಂದಲ್ಲ. ಇದ್ದರೂ ಈ ಆಕ್ರೋಶವನ್ನೇ ಅವರು ಪ್ರಮುಖ ಅಸ್ತ್ರವನ್ನಾಗಿ ಪ್ರಯೋಗ ಮಾಡುವುದಿಲ್ಲ. ಅಲ್ಲದೆ ತಾವು ಒದಗಿಸುವ ವಿವರಗಳ ಸಮಸ್ಯೆಯ ಒಳಹೊಕ್ಕು ನೋಡುವಂತೆ ಮಾಡುತ್ತಾರೆ.

ಹೀಗಾಗಿ ಇವರ ಕಥೆಗಳು ಹೆಚ್ಚು ಸಂಕೀರ್ಣ ಹಾಗೂ ಸೂಚ್ಯವೆನಿಸುತ್ತದೆ. ಬರಗೂರರ ಕಥಾ ಸಾಹಿತ್ಯದಲ್ಲೂ ಪ್ರಧಾನವಾಗಿ ಜಾತಿ ಮತ್ತು ವರ್ಗಗಳಿಗೆ ಸಂಬಂಧಿಸಿದ ಸಂಘರ್ಷವಿದೆ. ಜೊತೆಯಲ್ಲಿಯೇ ಪ್ರಧಾನಸಂಸ್ಕೃತಿಯ ಲೈಂಗಿಕ ಹಸಿವು, ಅಧೀನ ಸಂಸ್ಕೃತಿಯ ಹೊಟ್ಟೆಯ ಹಸಿವು ಇವೆರಡು ಹುಟ್ಟಿಸುವ ವೈರುಧ್ಯಗಳನ್ನು ಪಾತ್ರಗಳ ಮೂಲಕ ಸೃಜನಾತ್ಮಕವಾಗಿ ಚಿತ್ರಿಸಿದ್ದಾರೆ. ಇವರ ಬಹುತೇಕ ಪಾತ್ರಗಳು ಗ್ರಾಮೀಣ ನೆಲೆಯಲ್ಲಿದ್ದಾಗ ಪ್ರಗತಿಪರವಾಗಿರುವಂತೆಯೇ ಪಟ್ಟಣದ ಅನುಭವಗಳಿಂದುಂಟಾದ ಸಾಮಾಜಿಕ ಎಚ್ಚರವನ್ನು ಪ್ರತಿಪಾದಿಸುತ್ತವೆ. ಅನಕ್ಷರಸ್ಥ ಸಮಾಜ ಎಚ್ಚೆತ್ತುಕೊಳ್ಳುವ ಬಗೆ ಹೇಗೆಂಬುದನ್ನು ಅವರ ಕಥಾಸಾಹಿತ್ಯದ ಪಾತ್ರಗಳನ್ನು ಅವಲೋಕಿಸಿದಾಗ ನಮಗೆ ಅರಿವಾಗುತ್ತದೆ. ಒಬ್ಬ ನಿರುದ್ಯೋಗಿ, ಒಬ್ಬ ಜೀತದಾಳು, ಒಬ್ಬ ಆರ್ಥಿಕ ಅಸಹಾಯಕ, ಒಬ್ಬ ವಿಚಾರವಂತ ಹೀಗೆ ಬಗೆ ಬಗೆಯ ಪಾತ್ರಗಳ ಅವರ

ಯೋಚನಾಹಾದಿ ಅದುವರೆಗಿನ ಜಡ್ಡುಗಟ್ಟಿದ ಸಮಾಜದ ಎಲ್ಲೆಗಳನ್ನು ಪ್ರಶ್ನಿಸುತ್ತಲೇ ಮೀರುತ್ತದೆ. ಅದು ಅಂತಿಮವಾಗಿ ಪ್ರತಿಪಾದಿಸುವುದು ಶುದ್ಧಚಿತ್ತದ ನಿರ್ಭಿಡೆಯ ಮಾನವೀಯತೆಯನ್ನು. ಹಾಗೆಯೇ ಜಮೀನ್ದಾರೀ ಪಾಳೆಗಾರಿಕೆಗಳ ಅವಸಾನಗಳ ಸ್ಪಷ್ಟ ಚಿತ್ರಣವನ್ನು ನೀಡುತ್ತಾರೆ. ಅದು ದಲಿತ-ಬಂಡಾಯ ಸಾಹಿತ್ಯದ ಪ್ರಥಮ ಪ್ರಯೋಗವಾಗಿ ತೋರುತ್ತದೆ. ಅದುವರೆಗೂ ಇದ್ದ ರೆಡಿಮೇಡ್ ಕ್ರಾಂತಿಕಾರಿ ಪಾತ್ರಗಳಿಗಿಂತ ಭಿನ್ನವಾಗಿ ನಿಲ್ಲುವುದರಿಂದಲೇ ಒಬ್ಬ ವಿದ್ಯಾವಂತ ನಿಂದ ಆಗಬಲ್ಲ ಸಾಮಾಜಿಕ ಬದಲಾವಣೆಯನ್ನು ಹಿಡಿದಿಡುವ ಪ್ರಯತ್ನ ಮಾಡಲಾಗಿದೆ. ಭೂಸುಧಾರಣೆ, ಔದ್ಯೋಗಿಕ ಕ್ರಾಂತಿ ಮತ್ತು ಮಾಹಿತಿ ತಂತ್ರಜ್ಞಾನದ ಪ್ರಭಾವ ಮತ್ತು ಪರಿಣಾಮಗಳು ಪ್ರಸ್ತುತ ಬದುಕಿನ ಮೇಲೆ ಹಲ್ಲೆ ನಡೆಸಿ ಮಾನವೀಯತೆ, ಮಣ್ಣಿನಲ್ಲಿರುವ ಸಹಜ ಮಾನವೀಯ ಗುಣಗಳ ಮೇಲೆ ವಕ್ರದೃಷ್ಟಿಯನ್ನು ಬೀರಿವೆ. ಹಾಗೆಯೇ ಇವರ ಬರವಣಿಗೆಯಲ್ಲಿ ಗುಲಾಮಗಿರಿಯಿಂದ ಬಿಡುಗಡೆ ಹೊಂದಬೇಕಿರುವ ಸಾಧ್ಯತೆಗಳನ್ನು ಪಾತ್ರಗಳ ಮೂಲಕ ಗಟ್ಟಿ ನಿರೂಪಣೆಗಳೊಂದಿಗೆ ಚಿತ್ರಿಸುತ್ತಾರೆ. ಒಟ್ಟಾರೆ ಅವರ ಬರವಣಿಗೆಯಲ್ಲಿ ಪ್ರಧಾನಸಂಸ್ಕೃತಿಯೊಂದಿಗೆ ಅಧೀನಸಂಸ್ಕೃತಿಯು ಸದಾಕಾಲ ಒಂದಲ್ಲಾ ಒಂದು ಕ್ಷೇತ್ರದಲ್ಲಿ ತನ್ನ ಸಂಘರ್ಷ ಹಾಗೂ ಸಂಬಂಧವನ್ನು ಇಟ್ಟುಕೊಂಡಿರುತ್ತದೆ ಎಂಬುದನ್ನು ಅವರ ಪಾತ್ರಗಳು ಸೂಚಿಸುತ್ತವೆ.

ಬರಗೂರು ರಾಮಚಂದ್ರಪ್ಪನವರ 'ಸುಂಟರಗಾಳಿ'ಯ ಕಥೆಗಳಲ್ಲೂ ನವ್ಯಮಾರ್ಗದ ಚೌಕಟ್ಟಿನಲ್ಲೇ ಸಾಮಾಜಿಕ ಶೋಷಣೆಯ ವಿರುದ್ಧ ಪ್ರತಿಭಟನೆಯ ದನಿ ಸೇರಿಸುವ ಪ್ರಯತ್ನವಿದೆ. ಇವರಲ್ಲಿಯೂ ಕೇಂದ್ರಪಾತ್ರದ ಪ್ರತಿಜ್ಞೆಯನ್ನು ಅನುಸರಿಸುವ ತಂತ್ರವಿದೆ. 'ಪರಿಸರ'ದಲ್ಲಿರುವಂತೆ ಕೆಲವು ಸಲ ಲೇಖಕನ ಪ್ರಜ್ಞೆಯೇ ಕೇಂದ್ರವಾಗುತ್ತದೆ. ದುರ್ಬಲ ಕೇಂದ್ರಪಾತ್ರ ಮನಸ್ಸಿನ ಹೊಯ್ದಾಟಗಳ ದೃಷ್ಟಿಯಿಂದಲೂ ಅವರು ನವ್ಯಮಾರ್ಗದಲ್ಲೇ ಇದ್ದಾರೆ. ಸಂಕೇತಗಳನ್ನು ಕೂಡ ಅವರು ಬಳಸಿಕೊಂಡಿದ್ದಾರೆ. ಈ ಎಲ್ಲಾ ದೃಷ್ಟಿಯಿಂದ 'ಕ್ಷಾಮ', 'ಅವನು ನಪುಂಸಕ', 'ಸುಂಟರಗಾಳಿ' 'ನಂಬಿಕೆ' ಮೊದಲಾದವು ಅವರ ಪ್ರಾತಿನಿಧಿಕ ಕಥೆಗಳನ್ನಬಹುದು. ದುಡಿಯುವ ಶಕ್ತಿ ಯೌವನದ ಬಲಗಳಿದ್ದಾಗ ದಣಿಯ ಕಾಮದ ಆಸೆಯನ್ನು ನಿರಾಕರಿಸಿದ್ದ ಚನ್ನಿ ಬರಗಾಲದ ಕರಿಗಾಲ ಅವಸ್ಥೆಯಲ್ಲಿ ಅಸಹಾಯಕಳಾಗಿ ಕೊನೆಗೂ ತನ್ನ ಮೈಯನ್ನು ನೀಡಲು ನಿರ್ಧರಿಸಿದಾಗ ದಣಿ ಅವರ ಬರಗೆಟ್ಟ ಎಲುವಿನ ಹಂದರದ ಮೈಯನ್ನು ನಿರಾಕರಿಸುವ ಕಥೆ 'ಕ್ಷಾಮ.' ಇದಕ್ಕೆ ಪೂರಕವಾಗಿ ಕಟ್ಟೆಯೊಡೆದ ಕೆರೆಗೆ ಒಡ್ಡು ಹಾಕಿ ನಿಲ್ಲಿಸುವ ದುರ್ಬಲ ಶೋಷಿತರು ಕೊನೆಗೊಮ್ಮೆ ಎಚ್ಚೆತ್ತು ಸಾಂಕೇತಿಕವಾಗಿ ತಮ್ಮನ್ನು ತಾವು ಸ್ಥಾಪಿಸಿಕೊಳ್ಳುವ ಚಿತ್ರಗಳಿವೆ. 'ನಂಬಿಕೆ'ಯಲ್ಲಿ ಶೋಷಣೆಯನ್ನು ಇನ್ನಷ್ಟು ಭದ್ರಪಡಿಸುವಲ್ಲಿ ಮೂಢ ಧಾರ್ಮಿಕ ನಂಬಿಕೆಗಳು ವಹಿಸಿರುವ ಪಾತ್ರದ ಮೇಲೆ ಬೆಳಕು ಬಿದ್ದಿವೆ.

ಕಾಳೇಗೌಡ ನಾಗವಾರರ ಕತೆಗಳು ಮೇಲುನೋಟಕ್ಕೆ ಬಂಡಾಯದ ಕಥೆಗಳ ಹಾಗೆ ಕಾಣುವುದಿಲ್ಲ. ನವ್ಯರ ಅಂತರ್ಮುಖತೆ, ಕಾವ್ಯದ ಸೂಕ್ಷ್ಮಜ್ಞತೆಗಳನ್ನು ಅವರು ಚೆನ್ನಾಗಿ ಅರಗಿಸಿಕೊಂಡಿದ್ದಾರೆ. ಹೀಗೆ ನವ್ಯದ ಕಡೆಗೆ ಗುಪ್ತವಾದ ತುಡಿತಗಳನ್ನು ಹೊಂದಿಯೂ ಅವರ ಕಥೆಗಳು ಭಿನ್ನವಾಗಿವೆ. ಅವರ ಕಥೆಗಳ ಮುಖ್ಯವಸ್ತು ಪ್ರೀತಿ, ಗಂಡು ಹೆಣ್ಣುಗಳ ನಡುವಿನ ಸಂಬಂಧ. ಆದರೆ ಇಲ್ಲಿಯ ಪ್ರೀತಿ ರೊಮ್ಯಾಂಟಿಕ್ ರೀತಿಯ ವೈಭವೀಕರಣದಲ್ಲಿ ನಿಲ್ಲದೆ ಬದುಕಿನಲ್ಲಿ ವ್ಯಕ್ತಿ-ವ್ಯಕ್ತಿಗಳ ನಡುವಿನ ಆರೋಗ್ಯಕರವಾದ ಸಂಬಂಧವನ್ನು ಹುಡುಕುವ ಪ್ರಯತ್ನವಾಗುತ್ತದೆ. ಆ ಮೂಲಕ ಸಮಾಜ ಜಾತಿ ಅಂತಸ್ತುಗಳನ್ನು ಮೀರುವ ಬಂಡಾಯವೂ ಆಗುತ್ತದೆ. ಪ್ರೀತಿ ಬದುಕಿನ ಅತ್ಯಂತ ಉತ್ಕಟವಾದ ಆದರ್ಶ ಸಂಬಂಧ ಅಂಥ ಸಂಬಂಧಗಳನ್ನು ಕೆಡಿಸುವ ಎಲ್ಲಾ ಶಕ್ತಿಗಳನ್ನು ಅವರು ವಿರೋಧಿಸುತ್ತಾರೆ.

'ಅಲೆಗಳು' ಇಂಥ ಒಂದು ಕಥೆ. ಹೂವಣ್ಣ ರೇಖಾರ ನಡುವಿನ ಪ್ರೀತಿ ಜಾತಿ ಅಂತಸ್ತುಗಳನ್ನು ಮೀರಿದ ಒಂದು ಸಂಬಂಧ. ಅದಕ್ಕೆ ವ್ಯಕ್ತವಾದ ವಿರೋಧವೇನೂ ಬರುವುದಿಲ್ಲ. ಆದರೆ ಬೆಲ್ಲದಹಳ್ಳಿಯಲ್ಲಿ ದಾಸ ಪ್ರಕಾಶನ ಮತ್ತು ಅವನ ಪ್ರೇಮ ಸಂಬಂಧಗಳ ಹಿನ್ನೆಲೆಯಲ್ಲಿ ಅದು ಇನ್ನಷ್ಟು ಇಂಬು ಪಡೆಯುತ್ತದೆ. ಆದರೆ ಪ್ರಕಾಶನ ತಂಗಿ ಭಾಗ್ಯಳ ಮೇಲೆ ನಡೆಯುವ ಗೂಂಡಾಗಳ ಹಲ್ಲೆಯಿಂದ ಮತ್ತು ಪರಿಣಾಮದ ದುರಂತದಿಂದ ಇಡಿಯ ವಾತಾವರಣವೇ ಕಲಕಿಬಿಡುತ್ತದೆ. ಪ್ರೀತಿಯುತ ಅನುಭವ ನೋವಿಗೆ ಕಾರಣವಾಗುತ್ತದೆ. ಸಮಾಜದ ಮೇಲ್ವರ್ಗಕ್ಕೆ ಸೇರಿದ ರೇಖಾ, ಹರಿಜನ ಹೂವಣ್ಣನನ್ನು ನಿರ್ವ್ಯಾಜವಾಗಿ ಪ್ರೀತಿಸಿ, ಅವನ ಕುಟುಂಬದ ಎಲ್ಲವನ್ನು ಒಪ್ಪಿಕೊಳ್ಳುವ ಮೆಚ್ಚುವ ನಿರ್ಧಾರದಲ್ಲಿ ಹಳ್ಳಿಗೆ ಬಂದಳು. ನಮ್ಮ ಸಾಮಾಜಿಕ ಸಂದರ್ಭದಲ್ಲಿ ಕ್ರೌರ್ಯ, ಅಪಮಾನ, ಶೋಷಣೆಯ ಸಂಕೀರ್ಣತೆಯನ್ನು ನಾಗವಾರರು ಹೀಗೆ ಪ್ರೀತಿಯಂಥ ಸಂಬಂಧಗಳ ಮೇಲಾಗುವ ಪರಿಣಾಮಗಳ ಮೂಲಕ ಗುರುತಿಸುತ್ತಾರೆ. ಹಾಗೆಯೇ ಗ್ರಾಮೀಣ ಪರಿಸರದಲ್ಲಿ ನಡೆದಿರುವ ಬದಲಾವಣೆಯ ಸೂಕ್ಷ್ಮಗಳನ್ನು ಹಿಡಿಯುವ ತವಕವೂ ಅವರ ಬರವಣಿಗೆಯಲ್ಲಿದೆ. ಬಹುಶಃ ಬಂಡಾಯ ಸಾಹಿತ್ಯ ಹಿಡಿಯಬಹುದಾದ ಒಂದು ಸಾರ್ಥಕ ದಿಕ್ಕಿನತ್ತ ಇದು ಕೈತೋರಿಸುತ್ತದೆ.

ಗ್ರಾಮೀಣ ಜೀವನದ ದಟ್ಟಚಿತ್ರಗಳಿಂದ ಗಮನ ಸೆಳೆದಿದ್ದ ಮತ್ತೊಬ್ಬ ಲೇಖಕರೆಂದರೆ ಬೆಸಗರಹಳ್ಳಿ ರಾಮಣ್ಣ(೧೯೩೮-೧೯೯೮) ಅವರು ಬಂಡಾಯ ಸಾಹಿತ್ಯದ ಆದರ್ಶಗಳಿಗೆ ಸಹಜವಾಗಿ ಒಲಿದವರು. ಮೊದಲಿನಿಂದಲೂ ಅವರ ಬರವಣಿಗೆ ಸರಳ, ನೇರ. ಹೊಸ ಉದ್ದೇಶಗಳಿಗೆ ಅದು ಸುಲಭವಾಗಿ ಒಗ್ಗಿತು. ತಮಗೆ ಆತ್ಮೀಯವಾಗಿ ಗೊತ್ತಿದ್ದ ಅದೇ ಗ್ರಾಮೀಣ ಬದುಕಿನ ಬಡತನ, ಶೋಷಣೆಗಳನ್ನು ಕುರಿತು ಬರೆಯಲು ಇದನ್ನವರು ಬಳಸಿ

ಕೊಂಡರು. 'ಗಾಂಧಿ' ಇಂಥ ಒಂದು ಕಥೆ. ಮಹಾತ್ಮಗಾಂಧಿಯ ಹೆಸರು ಹೊಂದಿದ ಹಳ್ಳಿಯ ರೋಗಗ್ರಸ್ತ ಬಡ ಹುಡುಗನೊಬ್ಬ ಆ ಹೆಸರಿನಿಂದಾಗಿಯೇ ವ್ಯಂಗ್ಯದ ವಸ್ತುವಾಗುವುದು ಕತೆಯ ಮುಖ್ಯ ಧಾಟಿಯಾಗಿದೆ. ಈ ಹಿನ್ನೆಲೆಯಲ್ಲಿ ಆ ಹುಡುಗನ ದುರಂತಕ್ಕೆ ಬಡತನ ಅಜ್ಞಾನಗಳ ಕಾರಣವೆಂದು ಕತೆ ಒತ್ತಿ ಒತ್ತಿ ಹೇಳುತ್ತದೆ. ಆ ಮೂಲಕ ಮರುಕವನ್ನು ಮೂಡಿಸಲು ಪ್ರಯತ್ನಿಸುತ್ತದೆ. ಸಾಮಾನ್ಯವಾಗಿ ರಾಮಣ್ಣನವರ ಬರವಣಿಗೆಯಲ್ಲಿ ಬಾವೋದ್ವೇಗದ ಅಂಶ ಹೆಚ್ಚು. ಈ ಕತೆಯಲ್ಲಿ ಸಾಕಷ್ಟು ಸಂಯಮದಿಂದ ಅದನ್ನು ನಿಯಂತ್ರಿಸಲು ಯತ್ನಿಸಿದ್ದಾರೆ. ಆದರೂ ಹುಡುಗನ ಸಾವಿನ ಬಗ್ಗೆ ತಳೆದಿರುವ ಧೀರ ಧೋರಣೆ, ಅವನ ಕೊನೆಯ ಆಶೆ ಬಡತನದಿಂದಾಗಿ ಫಲಿಸದೇ ಹೋಗುವುದು ಮುಂತಾದ ವಿವರಗಳಲ್ಲಿ ಅದು ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತದೆ. ಈ ಕಥೆಯ ಇನ್ನೊಂದು ಮುಖ್ಯ ಅಂಶವೆಂದರೆ ನಿಜವಾದ ಗಾಂಧಿಯ ಆದರ್ಶಗಳು ವಿಡಂಬನೆಗೆ ಗುರಿಯಾಗಿ ಹತ್ತಿರದವರ ಅಸಹಾಯಕತೆಯೂ ಸೇರಿ ರೋಗ ಉಲ್ಬಣಿಸಿ ಸಾಯುವ ಮತ್ತು ಅವನ ಕೊನೆಯ ಆಶೆ ಈಡೇರದೇ ಹೋಗುವ ಸಾಂಕೇತಿಕ ಅರ್ಥವನ್ನು ಕತೆಯಲ್ಲಿ ಕಾಣಬಹುದಾಗಿದೆ.

ಬೆಸಗರಹಳ್ಳಿ ರಾಮಣ್ಣನವರ ಬಹುತೇಕ ಕಥೆಗಳಲ್ಲಿ ಸರಕಾರದ ಆಧುನಿಕ ಸಂಸ್ಥೆಗಳು ಮತ್ತು ಪಾತ್ರಗಳು ಗ್ರಾಮೀಣರಿಗೆ ಎದುರಾಗುತ್ತವೆ. ಇವೆಲ್ಲಕ್ಕೂ ಹಳ್ಳಿಯವರು ಹೇಗೆ ಪ್ರತಿಕ್ರಿಯಿಸುತ್ತಾರೆ ಮತ್ತು ಅವುಗಳಿಂದುಂಟಾದ ಸಮಸ್ಯೆಗಳಿಗೆ ಹೇಗೆ ಸ್ಪಂದಿಸುತ್ತಾರೆ ಎನ್ನುವ ವಿಚಾರ ಪ್ರಾಥಮಿಕವಾಗಿ ಇವರ ಸಾಹಿತ್ಯದಲ್ಲಿ ಚರ್ಚೆಯಾಗುತ್ತದೆ. ಪ್ರಸ್ತುತ ಸಮಾಜದಲ್ಲಿ ಆಧುನಿಕ ಭರಾಟೆಗೆ ಸಿಕ್ಕ ಪ್ರಜಾಪ್ರಭುತ್ವದ ಭ್ರಷ್ಟತೆಯನ್ನು ಪಾತ್ರಗಳು ಪ್ರತಿಭಟಿಸುತ್ತಿರುವುದನ್ನು ಕಾಣಬಹುದಾಗಿದೆ. ನಾಗರಿಕತೆಯು ಗ್ರಾಮೀಣ ಬದುಕಿನ ಮೇಲೆ ಮಾಡುವ ಹಲ್ಲೆಯನ್ನು ರಾಮಣ್ಣನವರು ಸೂಕ್ಷ್ಮವಾಗಿ ಗ್ರಹಿಸುತ್ತಾರೆ. ಅವರ ಕಥಾಸಾಹಿತ್ಯದ ಪಾತ್ರಗಳು ಹೊಸತನವನ್ನು ಸಂಪೂರ್ಣವಾಗಿ ತಿರಸ್ಕರಿಸದೆ ಅಂತಹ ಬಯಕೆಗಳ ಹಿಂದಿರುವ ಸಮಸ್ಯೆಗಳನ್ನು ಕೂಡ ಅವಲೋಕಿಸುತ್ತವೆ. ಮುಖ್ಯವಾಗಿ ಮನುಷ್ಯ ಸಂಬಂಧಗಳ ನೆಲೆಗಳನ್ನಷ್ಟೇ ಹಿಡಿದು ಹೋರಾಡುವುದರ ಜೊತೆಗೆ ಪ್ರಧಾನಸಂಸ್ಕೃತಿಯ ನಾಶವನ್ನು ಸಾರುತ್ತವೆ.

ಚೆನ್ನಣ್ಣ ವಾಲೀಕಾರರ 'ಕುತ್ತದಲ್ಲಿ ಕುದ್ದವರ ಕಥೆಗಳಲ್ಲಿ' ಹೆಸರೆ ಸೂಚಿಸುವಂತೆ ಅಬ್ಬರದ ಬರವಣಿಗೆಯಿದೆ. ವಾಲೀಕಾರರು ಉದ್ದೇಶಪೂರ್ವಕವಾಗಿ ಬಂಡಾಯ ಲೇಖಕರು. ಅವರಿಗೆ ತುಳಿತಕ್ಕೆ ಒಳಗಾದ ಕೆಳವರ್ಗದ ಜನರ ನೋವನ್ನು, ಸಾಮಾಜಿಕ ವಿಷಮತೆಯ ಕ್ರೌರ್ಯವನ್ನು ಎತ್ತಿತೋರಿಸುವುದೇ ಮುಖ್ಯವಾಗಿದೆ. ಆದ್ದರಿಂದ ಅವರು ಸೂಕ್ಷ್ಮಗಳಿಗೆ ಪ್ರಯತ್ನಿಸುವುದಿಲ್ಲ. ತಮ್ಮ ಬರವಣಿಗೆ ಕಲಾತ್ಮಕವಾಗಬೇಕೆಂಬ ಹಠವೂ ಅವರಿಗಿಲ್ಲ. ಅನೇಕ ಸಲ ಕತೆಗಳು ಕೇವಲ

ಅತಿರಂಜಿತ ವರದಿಗಳಾದರೂ ಅವರು ಲಕ್ಷಿಸುವುದಿಲ್ಲ. ಇಂಥ ಬರವಣಿಗೆ ಸಾಮಾಜಿಕ ಬದಲಾವಣೆಗೆ ದುಡಿಯುವಂಥದ್ದೇ ಹೊರತು ಸಾಹಿತ್ಯವಾಗಿ ಶ್ರೇಷ್ಠವಾಗಬೇಕೆನ್ನುವ ಮಹಾತ್ವಕಾಂಕ್ಷೆಯದ್ದಲ್ಲ. ಆದರೆ ಸಾಹಿತ್ಯಕವಾಗಿ ಶ್ರೇಷ್ಠವಾಗಬೇಕೆನ್ನುವ ಅಪೇಕ್ಷೆಯಲ್ಲಿ ವಾಸ್ತವದ ಸೂಕ್ಷ್ಮಗಳನ್ನು ಗ್ರಹಿಸಬೇಕೆನ್ನುವ ಆಶಯವು ಅಂತರ್ಗತವಾಗಿರುತ್ತದೆಂಬುದನ್ನು ಮರೆಯುವಂತಿಲ್ಲ. ವಾಲೀಕಾರರು ಭಾವನೆಗಳನ್ನು, ಸಂಗತಿಗಳನ್ನು ಉತ್ಪ್ರೇಕ್ಷಿಸುತ್ತಾರೆ. ಅನ್ಯಾಯವನ್ನು ತೋರಿಸಿ ಸಿಟ್ಟಿನಿಂದ ವ್ಯಾಖ್ಯಾನಿಸುತ್ತಾರೆ. ಅವರ ಪಕ್ಷಪಾತ ಅತ್ಯಂತ ಸ್ಪಷ್ಟ. ಅದರಿಂದ ಪಾತ್ರಗಳಿಗೆ ನ್ಯಾಯ ಸಿಗುವುದಿಲ್ಲ. ಪಾತ್ರಗಳು ಒಳ್ಳೆಯವರು, ಕೆಟ್ಟವರು ಎಂದು ಕಪ್ಪು-ಬಿಳುಪುಗಳಲ್ಲಿ ಒಡೆದುಕೊಳ್ಳುತ್ತವೆ. ಕೆಟ್ಟ ಪಾತ್ರಗಳಿಗೆ ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳುವ ಅವಕಾಶವೇ ಸಿಗುವುದಿಲ್ಲ. ಇದರಿಂದಾಗಿ ಸಂಘರ್ಷ ದುರ್ಬಲವಾಗುತ್ತದೆ. 'ಕೆಸರಲ್ಲಿ ಕೆಸರಾಗಿ ಹೋದ ಕಮಲ', 'ಸುಂಭ-ನಿಶುಂಭರು' ಮತ್ತು 'ಜಕ್ಕವ್ವ' ಇಂಥ ಕಥೆಗಳ ಹೆಸರಿನಲ್ಲೇ ಅವರ ಒಲವು, ಪಕ್ಷಪಾತ ಸ್ಪಷ್ಟವಾಗಿಬಿಡುತ್ತದೆ.

ಬಂಡಾಯಪೂರ್ವದಲ್ಲಿ ಸಾಮಾಜಿಕ ಬದ್ಧತೆಯನ್ನು ಒಪ್ಪಿಕೊಂಡು ಬರೆಯುತ್ತಿದ್ದ ಲೇಖಕರಲ್ಲಿಯೂ ಪ್ರತಿಭಟನೆಯ ಅಂಶ ಇದ್ದೇ ಇತ್ತು. ಆದರೆ ಅದು ತೇಜಸ್ವಿಯವರಲ್ಲಿಯಂತೆ ಬರವಣಿಗೆಯ ದಾಟಿಯಲ್ಲಿ, ಹೆಚ್ಚೆಂದರೆ ಮಹಾದೇವರಲ್ಲಿಯಂತೆ ಅಪ್ರಜ್ಞಾಪೂರ್ವಕವಾದ ಸ್ಥಿತಿಯಲ್ಲಿ ಮಾತ್ರ ವ್ಯಕ್ತವಾಗುತ್ತಿತ್ತು. 'ತಬರನ ಕತೆಯಲ್ಲಿ'ಯ ವ್ಯಂಗ್ಯ ನಿರೂಪಣೆಯ ಧಾಟಿಯೇ ವ್ಯವಸ್ಥೆಯ ಬಗೆಗಿನ ಲೇಖಕರ ಅಸಮಾನವನ್ನು ತೋರಿಸುತ್ತದೆ. ಆದರೆ ಬಂಡಾಯ ಲೇಖಕರು ತಮ್ಮ ಪ್ರತಿಭಟನೆಯನ್ನು ಕಥೆಯ ವಿವರದಲ್ಲಿ ವ್ಯಕ್ತವಾಗಿ ಎಷ್ಟೋ ಸಲ ವಾಚ್ಯವಾಗಿ ತೋರಿಸಲು ಇಷ್ಟಪಡುತ್ತಾರೆ.

ಕುಂ. ವೀರಭದ್ರಪ್ಪನವರ ಬಹುಪಾಲು ಬರಹಗಳಲ್ಲಿ ಎರಡು ರೀತಿಯ ಗುಣವಿರುತ್ತದೆ. ೧. ಕೆಳವರ್ಗದ ಜಾತಿಯ ದಟ್ಟದಾರುಣ ಸ್ಥಿತಿಯನ್ನು ನಿರ್ಮಮ ಭಾವದಲ್ಲಿ ದಾಖಲಿಸುವುದು. ೨. ಅದೇ ವರ್ಗದೊಳಗೆ ಹುದುಗಿರುವ ಅಪಾರವಾದ ಚೈತನ್ಯ ಮತ್ತು ಶಕ್ತಿಯನ್ನು, ಆ ಜನಾಂಗದ ಕನಸುಗಳನ್ನು ಎತ್ತಿ ತೋರಿಸುವುದು. ಕುಂ. ವೀರಭದ್ರಪ್ಪನವರು ಈ ಕೆಲಸವನ್ನು ಚೆನ್ನಾಗಿಯೇ ಮಾಡಿದ್ದಾರೆ." ೩. ವರ್ತಮಾನದ ಸಮಾಜ ನಿರಾಕರಿಸಿದ ಸಂಸ್ಕೃತಿಯ ದಾಖಲಾತಿ ಮತ್ತು ಅಲ್ಲಿಂದಲೇ ಹುಟ್ಟುವ ಬಂಡಾಯ ಇವುಗಳ ಬಗೆಗೆ ಈ ಲೇಖಕರಿಗೆ ಮೋಹ ಜಾಸ್ತಿ. ಬಂಡಾಯ ಸಾಹಿತ್ಯದ ಉಗ್ರಗಾಮಿ ಧೋರಣೆಯನ್ನು ಪರಿಣಾಮಕಾರಿಯಾಗಿ ಪ್ರತಿನಿಧಿಸುವ ಲೇಖಕರೆಂದು ಇವರನ್ನು ಪರಿಗಣಿಸಬಹುದು. ಅನುಭವದ ಹಸಿತನ ಕಲೆಗಾರಿಕೆ ಯಿಂದ ಅದನ್ನು ಶಿಷ್ಟಗೊಳಿಸಿದ ಹಠ. ಸಿಟ್ಟಿನ ದನಿ, ವಿವರಗಳ ವಾಸ್ತವಿಕತೆ ವ್ಯವಸ್ಥೆಯ

ವಿರುದ್ಧ ಸ್ಪಷ್ಟ ಬಂಡಾಯ ಮೊದಲಾದ ಬಂಡಾಯ ಸಾಹಿತ್ಯದ ಲಕ್ಷಣಗಳೆಲ್ಲ ಅವರ ಕತೆಗಳಲ್ಲಿವೆ. ಜೊತೆಗೆ ಈವರೆಗೆ ಸಾಹಿತ್ಯಕ್ಕೆ ಬರದಿದ್ದ ಕೆಲವು ವಿಶಿಷ್ಟ ಕೆಳವರ್ಗಗಳನ್ನು ಅವರು ಹೊಸದಾಗಿ ಪರಿಚಯಿಸಿದ್ದಾರೆ.

'ಎಲುಗನೆಂಬ ಕೊರಚನೂ ಚವುಡನೆಂಬ ಹಂದಿಯೂ' ವೀರಭದ್ರಪ್ಪನವರ ಪ್ರಾತಿನಿಧಿಕ ಕಥೆ. ಕೊರಚರ ಬದುಕು ಇಲ್ಲಿ ಎಲುಗನ ಮೂಲಕ ಮೊದಲ ಬಾರಿಗೆ ಸಾಹಿತ್ಯಕ್ಕೆ ಬಂದಿದೆ. ಆದರೆ ಅದಿಷ್ಟೇ ಕತೆಯ ಹೆಚ್ಚುಗಾರಿಕೆ ಅಲ್ಲ. ಎಲುಗನಿಗೂ ಚವುಡನೆಂಬ ಹಂದಿಗೂ ಬೆಳೆದ ನಂಟಿನ ಬಗೆಗೆ ವೀರಭದ್ರಪ್ಪನವರು ಬರೆದಿರುವ ರೀತಿ ಅನನ್ಯವಾದದ್ದು. ಹಂದಿಯಂಥ ಸುಲಭವಾಗಿ ಪ್ರೀತಿಸಲು ಸಾಧ್ಯವಿಲ್ಲದ ಒಂದು ಪ್ರಾಣಿಯ ಬಗ್ಗೆ ಎಲುಗನಲ್ಲಿ ಹುಟ್ಟುವ ಪ್ರೀತಿಯಲ್ಲಿ ಯಾವ ವೈಭವೀಕರಣವೂ ಇಲ್ಲ. ಹಂದಿಯ ಸ್ವಭಾವಜನ್ಯವಾದ ಕ್ರಿಯೆಗಳನ್ನು ಒಂದು ಬಗೆಯ ವಿಶಿಷ್ಟ ಹಾಸ್ಯ ಶೈಲಿಯಲ್ಲಿ ವಿನೋದ ಮಾಡುತ್ತಲೇ ಆ ಕ್ರಿಯೆಗಳ ಜೊತೆಗೆ ಎಲುಗ ಆ ಹಂದಿಯನ್ನು ಪ್ರೀತಿಸುವ ರೀತಿಯನ್ನು ಆತ್ಮೀಯತೆಯಿಂದ ಚಿತ್ರಿಸಲಾಗಿದೆ. ಇದರ ಜೊತೆಗೆ ಮನೆ ಹೊಕ್ಕ ಹಂದಿಯ ಬಗೆಗಿನ ಮೂಢನಂಬಿಕೆ, ಹಂದಿಯನ್ನು ಕೊಲ್ಲುವಾಗಿನ ಮೇಲುಜಾತಿಯ ಕ್ರೌರ್ಯ, ಅದನ್ನು ಕೊಂದು ಹೂಳಿದ್ದು ಸಹಜವೆಂಬಂತೆ ನಡೆದುಕೊಳ್ಳುವ ಗೌಡನ ದರ್ಪ, ಅದನ್ನು ಪ್ರತಿಭಟಿಸಿದ್ದಕ್ಕೆ ಎಲುಗನಿಗೆ ಸಿಗುವ ಪೊಲೀಸರ ಒಡೆತಗಳು, ಲಚ್ಚುಮಿಯ ಸೂಳೆಗಾರಿಕೆ ಇತ್ಯಾದಿಗಳಲ್ಲಿ ಒಂದು ಊರಿನ ಸಮಾಜದ ಎಲ್ಲಾ ಬಣ್ಣ ವಿವರಗಳೊಂದಿಗೆ ಇಲ್ಲಿ ಪ್ರಕಟವಾಗಿವೆ. ಅದೇ ಸೇಡಿನಿಂದ ಎಲುಗ ಗೌಡನ ಮಗನನ್ನು ತನ್ನ ಮನೆಯಲ್ಲೇ ಕೊಂದು ಹುಗಿಯುವುದು ಪ್ರತಿಭಟನೆಯ ಉಗ್ರ ಅಭಿವ್ಯಕ್ತಿಯಾಗಿ ಬರುತ್ತದೆ. ಈ ಕ್ರಿಯೆಯಲ್ಲಿ ಎಲುಗನಿಗೆ ಹಂದಿಯ ಬಗ್ಗೆ ಇದ್ದ ಪ್ರೀತಿಯ ಉತ್ಕಟತೆಯನ್ನು ತೋರಿಸುತ್ತಲೇ ಗೌಡನ ಮಗನನ್ನು ಹಂದಿಯೊಂದಿಗೆ ಸಮೀಕರಿಸಿರುವ ಔಚಿತ್ಯವನ್ನು ನೋಡಬಹುದು. ವೀರಭದ್ರಪ್ಪನವರಿಗೆ ಬದುಕನ್ನು ಕುತೂಹಲದಿಂದ ನೋಡುವ ಕಣ್ಣಿದೆ. ಮಹಾದೇವರಂತೆ ನಿರೂಪಣೆಯ ಭಾಷಾಶೈಲಿಯಲ್ಲೇ ಬಳ್ಳಾರಿ ಜಿಲ್ಲೆಯ ಕೊಟ್ಟೂರಿನ ಕಡೆಯ ಆಡುಮಾತಿನ ಲಯವನ್ನು ಕತೆಗಳಲ್ಲಿ ಕಾಣಿಸಿರುವುದು ಅವರ ಜಾಣ್ಮೆಯನ್ನು ತೋರಿಸುತ್ತದೆ. ವಿವರಗಳನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸುತ್ತಾರೆ. ಕೊರಚರಂಥ ತೀರ ಹಿಂದುಳಿದವರನ್ನು ಅವರು ಪ್ರೀತಿಯಿಂದ ಕಾಣಬಲ್ಲ ಹೃದಯವಂತಿಕೆ ಇದೆ. ಇವೆಲ್ಲ ಶೂದ್ರರ ಹೊಸ ಸಂಸ್ಕೃತಿಯೊಂದು ನಿರ್ಮಾಣ ವಾಗುತ್ತಿರುವುದರ ಸಂಕೇತ. ಆದ್ದರಿಂದ ಈ ಬಗೆಯ ಬರವಣಿಗೆಗೆ ಸಾಂಸ್ಕೃತಿಕ ಮಹತ್ವವೂ ಇದೆ.

ಕುಂ.ವೀ. ಅವರು ತಮ್ಮ ಪ್ರಾರಂಭದ ಕತೆಗಳಲ್ಲಿ ಬಂಡಾಯದ ಮೂಲಕ ಎಲ್ಲಾ ಸಮಸ್ಯೆಗಳಿಗೂ ಸರಳ ಪರಿಹಾರ ಸಾಧ್ಯವೆನ್ನುವಂತೆ ಒಂದು ಸಿದ್ಧಸೂತ್ರಕ್ಕೆ ಕಟ್ಟುಬಿದ್ದಿದ್ದರು.

ತಮ್ಮ ಮುಂದಿನ 'ಭಗವತಿಕಾಡು' ಕಥಾಸಂಕಲನದಲ್ಲಿ ಸಿದ್ಧಸೂತ್ರದಿಂದ ಹೊರ ಬಂದಿದ್ದಾರೆ. ಗ್ರಾಮೀಣ ಬದುಕಿನ ದಟ್ಟ ಅನುಭವ ಇಲ್ಲಿಯೂ ಇದೆ. ಅದರ ಜೊತೆಗೆ ಬದುಕಿನ ನಿಗೂಢತೆಯ ಅನ್ವೇಷಣೆ ಹೊಸದಾಗಿ ಸೇರಿದೆ. 'ನಿಜಲಿಂಗ' ಕತೆಯ ನಾಯಕನಂಥ ವಿಕ್ಷಿಪ್ತ ಹಾಗೂ ಅಪರೂಪದ ಪಾತ್ರಗಳ ಸೃಷ್ಟಿಯ ಮೂಲಕ ಅವರು ಈ ಅನ್ವೇಷಣೆ ನಡೆಸಿದ್ದಾರೆ. 'ಚರಾಸ್ತಿ'ಯ ಶೆಟ್ರ ಗುರುಶಾಂತಪ್ಪ, 'ಭಗವತಿ ಕಾಡಿನ'ನ ನಾಗವ್ವ ಕೂಡ ಇಂತ ವಿಕ್ಷಿಪ್ತ ಪಾತ್ರಗಳೇ. 'ಈಡಾಪಿಂಗಳ ಸುಷಮ್ನನಾಳ ಮಧ್ಯದದ ಕೂಗು' ಮಾತ್ರ ಈವರೆಗಿನ ಕುಂ.ವೀ.ಅವರ ಎಲ್ಲಾ ಕತೆಗಳಿಗಿಂತ ಭಿನ್ನವಾದದ್ದು. ಇಲ್ಲಿ ಕೆಡುಕಿನ ಸಂಕೇತವಾದ ನಾರಾಣಿ ಕ್ರಮೇಣವಾಗಿ ಕಥಾನಾಯಕನನ್ನು ಅಪರಾಧಿಯನ್ನಾಗಿಸುವ ರೀತಿಯಲ್ಲಿ ಕುಂ.ವೀ. ಅವರು ಬರವಣಿಗೆಯ ಹೊಸ ಮಾರ್ಗವೊಂದನ್ನು ಅರಸುತ್ತಿರುವಂತಿದೆ. ಸಾಮಾನ್ಯವಾಗಿ ಒಂದು ಸಂಗತಿಯನ್ನು ಹಲವು ದೃಷ್ಟಿಕೋನಗಳಿಂದ ಕಾಣುವ ವಿವರಗಳನ್ನು ಒಟ್ಟಿಗೆ ಸೆರೆ ಹಿಡಿಯಲು ಗಿಡಿದು ತುಂಬಿದಂತೆ ರಭಸವನ್ನು ನಿರ್ಮಿಸುವ ಅವರು ಇಲ್ಲಿ ಹೆಚ್ಚು ಶಾಂತವಾದ ಬರವಣಿಗೆಯಲ್ಲಿ ಒಂದು ವಿಚಿತ್ರ ಮುಖಾಮುಖಿಯನ್ನು ತೋರಿಸಿದ್ದಾರೆ. ಕಾದಂಬರಿಗಳಿಗಿಂತ ತಮ್ಮ ಸಣ್ಣಕಥೆಗಳಲ್ಲೇ ಹೆಚ್ಚಿನ ಯಶಸ್ಸು ಸಾಧಿಸಿರುವ ಕುಂ.ವೀ. ಕನ್ನಡದ ಒಬ್ಬ ಮಹತ್ವದ ಕತೆಗಾರರಾಗಿ ಬೆಳೆದಿದ್ದಾರೆ.

ಸಾಮಾನ್ಯವಾಗಿ ವಾಸ್ತವತಾವಾದವೆಂದರೆ ಬದುಕಿನ ವಾಸ್ತವ ಸ್ಥಿತಿಯನ್ನು ಸಮಗ್ರವಾಗಿ, ಸವಿವರವಾಗಿ, ವಸ್ತುನಿಷ್ಠವಾಗಿ ಚಿತ್ರಿಸುವುದು ಎಂದು ಅರ್ಥ. ಸಾಹಿತ್ಯವು ಕೇವಲ ಮನರಂಜನೆಯ ಸಾಧನವಲ್ಲ. ಸಾಹಿತಿಗೆ ಸಾಮಾಜಿಕ ಜವಾಬ್ದಾರಿಯಿದೆ. ಸಮಕಾಲೀನ ಸಾಮಾಜಿಕ ವ್ಯವಸ್ಥೆಯಲ್ಲಡಗಿರುವ ಅನ್ಯಾಯ, ಶೋಷಣೆಗಳ ವಿವಿಧ ಮುಖಗಳನ್ನು ಬಯಲಿಗೆಳೆದು ಆ ಮೂಲಕ ಪ್ರಚಲಿತ ವ್ಯವಸ್ಥೆಯ ಬದಲಾವಣೆಗೆ ಪರೋಕ್ಷವಾಗಿ ಪ್ರಚೋದನೆ ನೀಡುವುದು ಸಾಹಿತಿಯ ಪ್ರಮುಖ ಕರ್ತವ್ಯ. ಈ ಬಗೆಯ ತಾತ್ವಿಕ ನಿಲುವಿನಿಂದ ೧೮ನೆಯ ಶತಮಾನದ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಮತ್ತು ೧೯ನೆಯ ಶತಮಾನದ ಭಾರತದಲ್ಲಿ "ವಾಸ್ತವತಾವಾದ"(Realism) ಮೂಡಿ ಬಂದಿತು. ವಾಸ್ತವತಾವಾದದ ವೈಚಾರಿಕ ತಳಹದಿಯೆಂದರೆ ಕಾರ್ಯಕಾರಣ ಸಂಬಂಧವನ್ನಾಧರಿಸಿದ ತರ್ಕ. ಇಂದ್ರಿಯಗ್ರಾಹ್ಯ ಸತ್ಯವನ್ನು ಮಾತ್ರ ಒಪ್ಪುವ ವೈಜ್ಞಾನಿಕ ದೃಷ್ಟಿಕೋನ ಮತ್ತು ವರ್ಣವರ್ಗ ಭೇದಗಳಿಂದ ಮುಕ್ತವಾದ ಸಮಾಜವನ್ನು ಕಟ್ಟಬಹುದೆಂಬ ಆದರ್ಶವಾದ. ಈ ತಾತ್ವಿಕ ನೆಲೆಯಿಂದ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಮತ್ತು ಭಾರತದಲ್ಲಿ ಕಳೆದ ನೂರಿನ್ನೂರು ವರ್ಷಗಳ ಅವಧಿಯಲ್ಲಿ ಅನೇಕ ಮಹತ್ವಪೂರ್ಣ ಸಾಹಿತ್ಯ ಜನ್ಮ ತಾಳಿದೆ.

ಕಳೆದ ಶತಮಾನದ ಆದಿಭಾಗದಲ್ಲಿಯೇ ಅನೇಕ ಸಾಹಿತಿಗಳಿಗೆ ವಾಸ್ತವತಾವಾದ ತೀವ್ರ ಅತೃಪ್ತಿಯನ್ನು ಉಂಟುಮಾಡಲು ಪ್ರಾರಂಭಿಸಿತು. ಈ ಅತೃಪ್ತಿಗೆ ಕಾರಣ ವಾಸ್ತವತಾವಾದ

ಕಟ್ಟಿಕೊಡುವ ವಾಸ್ತವದ ಸೀಮಿತ ಚೌಕಟ್ಟಿನಿಂದ ಹೊರಗುಳಿಯುವ ಬದುಕಿನ ಅನೇಕ ಹಾಗೂ ಬಹುಮುಖ ಸಂಗತಿಗಳು. ಸೂಕ್ಷ್ಮ ಮಾನವ ಸಂಬಂಧಗಳು ಮತ್ತು ಸಂಕೀರ್ಣ ಭಾವನೆಗಳು ಮಾನವನಿಗೆ ಪ್ರಾಣಿ–ಪಕ್ಷಿ, ಕ್ರಿಮಿ–ಕೀಟಗಳೊಡನೆ ಇರುವ ನಿಕಟ ಸಂಪರ್ಕ ಮತ್ತು ಸಹವಾಸ. ಮುಖ್ಯವಾಗಿ ಜನನ–ಮರಣಗಳ ರಹಸ್ಯ ಮತ್ತು ಬದುಕಿನಲ್ಲಿ ದೇವರು, ಧರ್ಮ– ಧಾರ್ಮಿಕಾ ಚರಣೆಗಳು ಇವುಗಳಿಗಿರುವ ಸ್ಥಾನ ಇವೆಲ್ಲವೂ ಕಾರ್ಯಕಾರಣ ತರ್ಕ ಹಾಗೂ ವೈಜ್ಞಾನಿಕ ವಿಶ್ಲೇಷಣೆಯನ್ನು ಮೀರಿದವುಗಳು. ಆದ್ದರಿಂದ ವಾಸ್ತವತಾವಾದ ಮಿತಿಗಳನ್ನು ಮೀರಲು ವಾಸ್ತವದ ಗ್ರಹಿಕೆಯನ್ನು ಹೆಚ್ಚು ವಿಶಾಲಗೊಳಿಸಲು ಸಾಹಿತಿಗಳು ಅನೇಕ ಸಾಧ್ಯತೆಗಳನ್ನು ಶೋಧಿಸಲು ಉದ್ಯುಕ್ತರಾದರು, ಪರಿಣಾಮವಾಗಿ ಸಾಂಕೇತಿಕತೆ, ಅನ್ಯಕೃತಿ ಸೂಚನೆಗಳು, ಅತೀಂದ್ರಿಯವಾದ, ಅತಿವಾಸ್ತವವಾದ, ಇತ್ಯಾದಿ ಗ್ರಹಿಕೆಯ ಕ್ರಮಗಳು ಮತ್ತು ಕಥನತಂತ್ರಗಳು ಪಾಶ್ಚಿಮಾತ್ಯ ಸಾಹಿತ್ಯಕ್ಷೇತ್ರವನ್ನು ಪ್ರವೇಶಿಸಿದವು. ಕನ್ನಡದಲ್ಲಿಯೂ ಇಂತಹುದೇ ಪರಿಸ್ಥಿತಿ ಕಳೆದ ಶತಮಾನದ ಕೊನೆಯಲ್ಲಿ ಕಂಡುಬಂದಿತು. ಹೆಚ್ಚಿನ ಕನ್ನಡ ಲೇಖಕರು ಪಶ್ಚಿಮದ ವಾಸ್ತವತಾವಾದವನ್ನು 'ಸುಧಾರಣಾವಾದ'ವನ್ನಾಗಿ ರೂಪಾಂತರಿಸಿದರು. ಈ ದಿಕ್ಕಿನಲ್ಲಿ ೧೯೮೪ರಲ್ಲಿ ಹೊರಬಂದ ದೇವನೂರ ಮಹಾದೇವರ 'ಕುಸುಮಬಾಲೆ' ಒಂದು ಮಹತ್ವದ ಮೈಲಿಗಲ್ಲು. ಸಮಕಾಲೀನತೆಗೆ ಬದ್ಧವಾಗಿದ್ದು ಪುರಾಣ–ಐತಿಹ್ಯಗಳು, ಜಾನಪದ ಕಥನತಂತ್ರಗಳು, ಇವೆಲ್ಲವನ್ನು ಆವೃತವಾಗಿ ದುಡಿಸಿಕೊಳ್ಳುವ ಕೃತಿ ಕುಂ.ವೀ. ಅವರ 'ಅರಮನೆ'

ಕುಂ.ವೀ. ಅವರಿಗೂ ವಾಸ್ತವತಾವಾದದ ಇತಿಮಿತಿಗಳು ಕ್ರಮೇಣವಾಗಿ ಗೋಚರಿಸ ಲಾರಂಭಿಸಿದವು. ಇದಕ್ಕೆ ಸಾಕ್ಷಿ ೧೯೯೮ರಲ್ಲಿ ಹೊರಬಂದ 'ಶಾಮಣ್ಣ' ಕಾದಂಬರಿ. ಈ ಬೃಹತ್ ಕಾದಂಬರಿಯಲ್ಲಿ ಕುಂ.ವೀ. ಉತ್ಪ್ರೇಕ್ಷ, ವ್ಯಂಗ್ಯ, ವಿಡಂಬನೆ, ಅನ್ಯೋಕ್ತಿ ಇತ್ಯಾದಿ ಅನೇಕ ಕಥನ ತಂತ್ರಗಳನ್ನು ಉಪಯೋಗಿಸುತ್ತಾ, ಸಮಕಾಲೀನ ಇತಿಹಾಸ ಮತ್ತು ವಾಸ್ತವತೆ ಇವುಗಳನ್ನು ಬೆಸೆಯಲು ಪ್ರಯತ್ನಿಸುತ್ತಾರೆ. ಇವರ ಕೃತಿಯ ನಾಯಕ ಶಾಮಣ್ಣ ಪರಂಪರಾಗತ ಜಾತಿವ್ಯವಸ್ಥೆಯ ವಿರುದ್ಧ ತನ್ನದೇ ಆದ ರೀತಿಯಲ್ಲಿ ಬಂಡಾಯ ಹೂಡುತ್ತಾನೆ. ಆದರೆ ಅದರಲ್ಲಿ ಪೂರ್ಣವಾಗಿ ಈತ ಯಶಸ್ಸನ್ನು ಕಾಣುವುದಿಲ್ಲ.

'ಶಾಮಣ್ಣ' ಬರೆಯುವ ಕಾಲದಲ್ಲಿ ಮತ್ತು ಅನಂತರ ಕುಂ.ವೀ. ಅವರ ಲಕ್ಷ್ಯವಿದ್ದುದು ವಾಸ್ತವತಾವಾದದ ಮಿತಿಗಳನ್ನು ಮೀರುವುದಕ್ಕಿಂತ ಹೆಚ್ಚಾಗಿ 'ವಾಸ್ತವ' ಎಂಬ ಪರಿಕಲ್ಪನೆಯನ್ನೇ ಹೆಚ್ಚು ವಿಶಾಲವಾಗಿ ಅರ್ಥೈಸುವುದರಲ್ಲಿ. ಅವರು ಶೋಧಿಸುತ್ತಿದ್ದುದು ಚರಿತ್ರೆ, ಐತಿಹ್ಯ, ಸ್ಥಳಪುರಾಣ, ನಂಬಿಕೆಗಳು, ಆಕ್ರಮಣ–ಶೋಷಣೆ, ಪಾಲನೆ ಇತ್ಯಾದಿ ಅಧಿಕಾರಾಧಾರಿತ ಸಂಬಂಧಗಳು, ವಿವಿಧ ಸಾಮಾಜಿಕ ವರ್ಗಗಳ ಬದುಕಿನ ವಿಶಿಷ್ಟ ಗಂಭೀರ ಕ್ಷುದ್ರ ವಿವರಗಳು,

ಇವೆಲ್ಲವನ್ನು ಒಳಗೊಳ್ಳುವ ಒಂದು ಕಥನ ಪ್ರಕಾರವನ್ನು, ಈ ಸಂದರ್ಭದಲ್ಲಿ ಅವರ ಕಣ್ಣಿಗೆ ಬಿದ್ದವುಗಳೆಂದರೆ ಕನ್ನಡದ ಮೌಖಿಕ ಮಹಾಕಾವ್ಯಗಳು.

ಮಲೆಮಾದೇಶ್ವರ, ಮಂಟೇಸ್ವಾಮಿ, ಮೈಲಾರಲಿಂಗ, ಪಲ್ನಾಟಿ ವೀರುಲ ಕಥ ಇತ್ಯಾದಿ ಮಹಾಕಥನಗಳ ವ್ಯಾಪ್ತಿ ಮತ್ತು ಅವುಗಳನ್ನು ನಿರ್ವಹಿಸುವ ಕಾರ್ಯಗಳು ಅದ್ಭುತ. ಈ ಮಹಾಕಥನಗಳು ನಿರಾಯಾಸವಾಗಿ ಆಯಾಯ ಸಮುದಾಯಗಳ, ಜನಾಂಗಗಳ ಇತಿಹಾಸ, ಧಾರ್ಮಿಕ, ನೈತಿಕ ಸಂಹಿತೆ, ಸಾಂಸ್ಕೃತಿಕ ದಾಖಲೆ ಮತ್ತು ಶೃಂಗಾರ, ವೀರ-ಕರುಣಾದಿ ರಸಗಳನ್ನೊಳಗೊಳ್ಳುವ ಸಾಹಿತ್ಯಕ ಕಥನಗಳು ಇವೆಲ್ಲವೂ ಆಗುತ್ತದೆ. ಇಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದ ಸಂಗತಿಯೆಂದರೆ ಇವುಗಳ ನಿರೂಪಣಾ ಧಾಟಿ ದೇವದೇವತೆಗಳ ಮಹತ್ಕಾರ್ಯ ಗಳಾಗಲಿ ಅವರ ನಡುವಿನ ಕ್ಷುಲ್ಲಕ ಕಲಹಗಳಾಗಲಿ, ಅತಿಮಾನವರ ಸಾಹಸ ಕೃತ್ಯಗಳಾಗಲಿ, ಹುಲುಮಾನವರ ಹಾಸ್ಯಾಸ್ಪದ ದೌರ್ಬಲ್ಯಗಳಾಗಲಿ, ಮಾನವ ಜಗತ್ತಿನ ನೋವು-ನಲಿವುಗಳಾಗಲಿ, ಪ್ರಾಣಿ-ಕ್ರಿಮಿ-ಕೀಟಗಳ ಕಷ್ಟ-ಕಾರ್ಪಣ್ಯಗಳಾಗಲಿ, ಒಂದೇ ಸಮಾನ ಧಾಟಿಯಲ್ಲಿ ಈ ಕಾವ್ಯಗಳ ನಿರೂಪಣೆ ಪ್ರಾರಂಭದಿಂದ ಮುಕ್ತಾಯದವರೆಗೂ ಸಾಗುತ್ತದೆ. ವಿಶಿಷ್ಟ ಸೃಷ್ಟಿಯಿಂದ ಪ್ರಾರಂಭವಾಗುವ ಈ ಕಾವ್ಯಗಳ ಆಕೃತಿ ಮುಕ್ತವಾಗಿರುತ್ತದೆ. ಕುಂ.ವೀ. ಅವರ 'ಅರಮನೆ' ಕಾದಂಬರಿಯಲ್ಲಿ ಇಂತಹದ್ದೊಂದು ಪ್ರಯೋಗ ನಡೆದಿದೆ. ಕುಂ.ವೀ. ಅವರೇ ಹೇಳುವಂತೆ "ಯಿದ್ದದ್ದು ಯಿದ್ದಂಗೆ ಹೇಳಿದರೆ ಕೇಳುಗರನೆಲ್ಲಿಂದ ತರೋದು? ಮಾತಂದ್ರ ಮಾಮೂಲಿ ಮಾತೇನ ದಯವಕ್ಕ ಅಲೌಕಿಕಕ್ಕ ಆಸ್ತೀಕಕ್ಕ ಸಂಬಂಧಿಸಿದ್ದೈಯ್ತೆ ಮಾತಿಗೆ ಬೆಲೆ ಬರೋದು ವಾಸ್ತವವನ್ನು ಮೆಟ್ಟಿದಾಗ ಆಗ ಆತ್ರ ಕಣ್ಣು ಮುಚ್ಚಿ ನೋಡಿಲಿಕ್ಕಾಯ್ತದ ಕಿವಿ ಮುಚ್ಚಿಕೇಳಲಿಕ್ಕಾಯ್ತದ ಮೂಗಿನ ಹಂಗುತೊರೆದು ವಾಸನೆ ಹಿಡೀಲಿಕ್ಕಾಯ್ತದ. ವರ್ತಮಾನದ ರೇಜಿಗೆಯಿಂದ ದೂರವುಳಿದು ಲೋಕ ಸಂಚಾರ ಮಾಡಿಲಕ್ಕಾಯ್ತದ"[೪](ಅರಮನೆ, ಪು.೪೩೬).

ಹೀಗೆ ಕುಂ.ವೀ. ಅವರು ಬರಹವನ್ನು ಬಂಡಾಯದ ಲೇಖಕರಾಗಿ ಪ್ರಾರಂಭಿಸಿ ವಾಸ್ತವತಾವಾದಿ ಲೇಖಕರಾಗಿ ಕನ್ನಡ ಸಾಹಿತ್ಯದಲ್ಲಿ ತನ್ನದೇ ಆದ ಸ್ಥಾನವನ್ನು ಪಡೆದಿದ್ದಾರೆ. ಅದರಲ್ಲೂ ಹೈದರಾಬಾದ್ ಪ್ರಾಂತದ ಬಳ್ಳಾರಿಯ ಗದ್ಯಲೇಖಕರಾಗಿ ನಿರಂತರವಾಗಿ ಮೂವತ್ತು ವರ್ಷಗಳಿಗಿಂತ ಅಧಿಕವಾಗಿ ಸಾಹಿತ್ಯ ಕೃಷಿ ಮಾಡುತ್ತಾ ಬಂದಿದ್ದಾರೆ. ಅವರು ಇವತ್ತಿಗೂ ಪ್ರಚಲಿತ ವಿದ್ಯಮಾನಕ್ಕೆ ಸ್ಪಂದಿಸುತ್ತಾ ಉತ್ತಮ ಸಂವೇದನಾಶೀಲ ಲೇಖಕರಾಗಿ ಕನ್ನಡ ಸಾಹಿತ್ಯದಲ್ಲಿ ಸ್ಥಾನ ಗಳಿಸಿದ್ದಾರೆ.

**೭.೨. ಕುಂ.ವೀ. ಅವರ ಸಾಹಿತ್ಯದ ಅನನ್ಯತೆ**

ಕುಂ.ವೀ. ಅವರ ಕಥೆಗಳ ಆತ್ಮವೇ ಅವರು ಬಳಸುವ ಗ್ರಾಮೀಣ ಭಾಷೆ. ಅದರಲ್ಲೂ ಕೊಟ್ಟೂರಿನ ಸುತ್ತ ಮುತ್ತಲ ಹಳ್ಳಿಗಾಡಿನ ಭಾಷೆ. ಹಳ್ಳಿಯೆಂದರೆ ನಾಗರಿಕತೆಯಿಂದ ಬಹಳ

ದೂರ ಉಳಿದ ದ್ವೀಪದಂತಹ ಹಳ್ಳಿಗಳು, ಯಾವ ಮೂಲಭೂತ ಸೌಕರ್ಯಗಳಿಲ್ಲದ ಕುಗ್ರಾಮಗಳು. ಇಂತಹ ಹಳ್ಳಿಗಳ ಬಡವರ, ದಲಿತರ, ಕೆಳವರ್ಗಗಳ ದಾರುಣ ಬದುಕಿನ ಚಿತ್ರಣವನ್ನು ಅವರ ಕಥೆಗಳಲ್ಲಿ ಕಾಣಬಹುದು. ಇಂದಿನ ಓದುಗರಿಗೆ ಈ ರೀತಿಯ ಹಳ್ಳಿಗಳಿವೆಯೇ, ಜನರು ಹೇಗೆಲ್ಲಾ ಬದುಕುತ್ತಾರೆ ಎಂದು ಅಚ್ಚರಿಪಡುವಂತೆ ವಾಸ್ತವದ ಚಿತ್ರಣಗಳನ್ನು ಹೃದಯಕ್ಕೆ ತಟ್ಟುವಂತೆ ಚಿತ್ರಿಸಿದ್ದಾರೆ. ಸಮಾಜವಿಜ್ಞಾನ ಸಂಶೋಧಕರಿಗೆ ಇವರ ಕಥೆಗಳು ಸಾಕಷ್ಟು ಆಕರಗಳನ್ನು ಒದಗಿಸುತ್ತವೆ. ಕುಂ.ವೀ. ಅವರ ಕಥೆಗಳ ವೈಶಿಷ್ಟ್ಯತೆ ಎಂದರೆ ಅವುಗಳನ್ನು ವಾಚಿಕ ಅಭಿನಯ ಮಾಡಬಹುದು. ಈ ಕಥೆಗಳಲ್ಲಿ ಪ್ರದರ್ಶಕ ಕಥೆಗಾರ ಎಲ್ಲಿಯೂ ಮರೆಯಾಗುವುದಿಲ್ಲ. ಇವರ ಕಥೆಗಳಲ್ಲಿ ವಾಸ್ತವ ಮತ್ತು ಅವಾಸ್ತವಗಳು ಹಾಲು ನೀರಿನಂತೆ ಬೆರೆತು ಹೋಗಿವೆ. ಕಥೆಗಾರರಿಗೆ ವಾಸ್ತವವನ್ನು ಸೂಕ್ಷ್ಮವಾಗಿ ಗ್ರಹಿಸುವ ಕಣ್ಣಿದೆ. ಗ್ರಹಿಸಿದ್ದನ್ನು ಕಥೆಮಾಡುವ ಕಲೆಗಾರಿಕೆ ಇದೆ. ಕುಂ.ವೀ. ಅವರ ಪ್ರಾರಂಭದ ಕತೆಗಳಲ್ಲಿ ಒಳ್ಳೆಯವರು, ಕೆಟ್ಟವರು ರೀತಿಯ ಕಪ್ಪು, ಬಿಳಿ ಪಾತ್ರಗಳಿದ್ದವು. ಆದರೆ ನಂತರದ ಅವರ ಕತೆಗಳಲ್ಲಿ ಕೆಟ್ಟವರು, ಕ್ರೂರಿಗಳು, ದುಷ್ಟರ ಬದಲಾಗಿ ಕೆಟ್ಟತನ, ಕ್ರೌರ್ಯ, ದುಷ್ಟತನಗಳನ್ನು ಕಾಣಬಹುದಾಗಿದೆ.

**ಕುಂ.ವೀ. ಅವರ ಕಥೆಗಳನ್ನು ಕುರಿತು ಓ.ಎಲ್.ನಾಗಭೂಷಣಸ್ವಾಮಿಯವರು ಈ ರೀತಿ ಹೇಳುತ್ತಾರೆ:**

ಕುಂ.ವೀ. ಅವರ ಭಾಷೆಗೆ ಜೀವಂತಿಕೆ ಇದೆ. ಶಕ್ತಿ ಇದೆ. ಇವರ ಕತೆಗಳನ್ನು ಓದುತ್ತಾ ಸಾಗಿದರೆ ಕುಂ.ವೀ. ಅವರ ಗ್ರಾಮೀಣ ಅನುಭವದ ಕಣಜ ಅಕ್ಷಯವಾದಂತೆ ಕಾಣಿಸುತ್ತದೆ. ಕುಂ.ವೀ. ಅವರು ಕನ್ನಡದ ಓದುಗರಿಗೆ ಅನನ್ಯವಾದ ಅನುಭವಲೋಕ, ಅಭಿವ್ಯಕ್ತಿ ವಿಧಾನ ಹಾಗೂ ತಾತ್ವಿಕತೆಗಳನ್ನು ಪರಿಚಯ ಮಾಡಿಕೊಟ್ಟಿರುವ ಮಹತ್ವದ ಲೇಖಕರು.

**ಓ.ಎಲ್. ನಾಗಭೂಷಣಸ್ವಾಮಿ.**

ಕನ್ನಡದ ಬರಹಗಾರರಲ್ಲಿ ಹಾಸ್ಯಪ್ರಜ್ಞೆ ಕಡಿಮೆಯೆಂದೇ ಹೇಳಬಹುದು(ಕೆಲವೊಂದು ಲಲಿತ ಪ್ರಬಂಧ ಹೊರತುಪಡಿಸಿ). ಕುಂ.ವೀ. ಅವರ ಹಾಸ್ಯಪ್ರಜ್ಞೆ ಅಪರೂಪದ್ದು. ಇದನ್ನು ಅವರ ಎಲ್ಲಾ ಬರವಣಿಗೆಯಲ್ಲೂ ಕಾಣಬಹುದು. ಇವರ ಕೃತಿಗಳು ಮತ್ತೆ ಮತ್ತೆ ಓದುವಂತೆ ಪ್ರೇರೇಪಿಸುತ್ತವೆ. 'ಎಲುಗನೆಂಬ ಕೊರಚನು ಚೌಡನೆಂಬ ಹಂದಿಯು ಈ ಕಥೆಯಲ್ಲಿ ಬರುವ ಹಾಸ್ಯ ಪ್ರಸಂಗಗಳು.

'ಹಂದಿಯು ಬಿದಿಗೆ ಚಂದಿರನಂತೆ ದುಂಡ ದುಂಡಗೆ, ಬೆಳ್ಳಬೆಳ್ಳಗೆ ಬೆಳೆಯತೊಡಗಿತು.'

'ಚೌಡ ಹಾದಿ ಬೇರೆಯಲ್ಲ, ಚೌಡಾಪುರದ ಎಲ್ಲಮ್ಮ ದೇವರು ಬೇರೆಯಲ್ಲ.'

'ಈ ಮಧ್ಯೆ ಯಜಮಾನನಾದ ಎಲುಗನು ತನಗೊಂದು ಹೆಣ್ಣು ತರಲು ವಾರಗಟ್ಟಲೆ ಹೋಗಿರುವನು ಎಂಬ ಅರಿವು ತಂದುಕೊಳ್ಳದೆ ಚೌಡನು ರಾತ್ರಿಯಾಯಿತೆಂದರೆ ಹಟ್ಟ ದಾಟುವುದನ್ನು ಇತ್ತೀಚೆಗೆ ಕಲಿತುಕೊಂಡಿದ್ದನು.

'ಕುಂಬಾರ ನಿಂಗಮ್ಮನಿಗೂ ಚೌಡನಿಗೂ ಒಮ್ಮೊಮ್ಮೆ ಕಬಡ್ಡಿ ಆಟವೇ ನಡೆದು ಬಿಡುವುದು. ಒಂದೆರಡುಸಾರಿ ನಿಂಗಮ್ಮ ಗೆದ್ದಿರಬಹುದಾದರೂ. ಚವುಡಗೆ ಗೆಲುವೆಂಬುದು ತೃಣ ಸಮಾನ. ಅದು ನಡೆದದ್ದೇ ರಾಜಬೀದಿ'.

'ಚವುಡಗೊಂದು ಹೆಣ್ಣು ಗಂಟುಹಾಕಿ ಅದರ ಸಂಸಾರ ಚಂದ್ರೋದಯವನ್ನು ಕಣ್ತುಂಬ ನೋಡಬೇಕೆಂದು ಉಮೇದಿಯಲ್ಲಿದ್ದ ಎಲುಗ.'[೫]

ಸಣ್ಣಕತೆಯಲ್ಲಿ ಹಂದಿ ಮತ್ತು ಎಲುಗನ ಸಂಬಂಧವನ್ನು ಹಾಸ್ಯಮಯವಾಗಿ ಕಟ್ಟಿಕೊಟ್ಟ ಕಥೆಗಾರರು. 'ಅರಮನೆ' ಕಾದಂಬರಿಯಲ್ಲಿ ಬರುವ ಜಗಲೂರೆವ್ವ ಮತ್ತು ಆರೆ ಸಾಕಿದ ಕೋಣ 'ಸೂರ' ಇವರಿಬ್ಬರದು ತಾಯಿ ಮಗನ ಸಂಬಂಧ. ಮಕ್ಕಳಿಲ್ಲದ ಈಕೆ ಈ ಕೋಣವನ್ನೇ ತನ್ನ ಮಗನೆಂದು ಅದರ ಜೊತೆ ಸಂಭಾಷಣೆಗೆ ನಿಲ್ಲುವುದು, ಕೋಣವು ಸಹ ಪ್ರಾಣಿಭಾಷೆಯಲ್ಲಿ ಆಕೆಗೆ ಉತ್ತರ ಕೊಡುವುದು ಕನ್ನಡ ಸಾಹಿತ್ಯದಲ್ಲೇ ಇಂಥ ಹಾಸ್ಯ ಪ್ರಸಂಗ ಅಪರೂಪವೆಂದೇ ಹೇಳಬಹುದು ಕುಂ.ವೀ. ಅವರು ಪ್ರಾಣಿಪ್ರೀತಿಯ ಜೀವಕೇಂದ್ರಿತ ನಿಲುವು ಈ ತರದ ವಿವರಣೆಗಳಲ್ಲಿ ಅನನ್ಯವಾಗಿ ಮೂಡಿಬಂದಿದೆ.

'ಅರಮನೆ'ಯ ಕಾದಂಬರಿಯ 'ಸೂರ'ನ ಪ್ರಸಂಗ...

'ಹೋಯ್ ಸೂರಾ ಯಲ್ಲದೀ ಮಗ್ನೇ' ಎಂದು ಕೂಗಿದಳು. ಆಕೆಯ ಆ ಕೂಗು ಯೋಟೊಂದು ಸಕ್ತಿವುತವಾಗಿಯಿತ್ತೆಂದರೆ ಸೂರ್ಯಪರಮಾತುಮನು ವಂಚಣ ಮಂಕಾದನು. ಯೀಕೆ ಹಿಂಗಾ ಕೂಗಿದರೆ ಯವ್ವನವೆಂಬ ಪದಮಾನವಾಗ್ತದೋಯಂದು ಸಬುಧ ಭಾವಿಸಿತು. ಗಾಳಿಯ ತುಂಡೊಂದು ಆಕೆಯ ಕೂಗನ್ನು ಮುದ್ರೆಯುಂಗುರೋಪಾದಿಯಲ್ಲಿ ತನ್ನಂಗಯ್ಯೊಳಗಿಟ್ಟು ಕೊಂಡು ಸುಯ್ಯಂತ ಹೋಗಿ ಅನತಿ ದೂರದಲ್ಲಿ ಗೋಪಿಕಾ ಸ್ತ್ರೀಯಂಥ ಮಣಕವೊಂದನ್ನು ತನ್ನ ಮುಂದು ತರುಬಿಟ್ಟುಕೊಂಡು ಸಿರಿಕೃಷ್ಣ ಪರಮಾತುಮನಂತೆ ರಾಸಲೀಲಾಯಿನೋದದಲ್ಲಿ ನಿರತನಾಗಿದ್ದ ಸೂರ ಮಾಶಯ ಕರ್ಣ ಕುಂಡಲದೊಳಗುದುರಿಸಿತು. ಅದು ಮಸ್ತಕಕ್ಕೇರಿದೊಡನೆ. ಜಂಘಾಬಲವುಡಗಿದಂಗಾಗಿ ಆತಂಕಕ್ಕೀಡಾದ ಪ್ರಿಯತಮೆಗೆ' ಮಾತ್ರು ಕರೆಯನ್ನು ಆಲಕ್ಷಿಸುವಂತಿಲ್ಲ... ಪ್ರಿಯೆ ಹೋಗಿಯೆನೆಂದು ಕೇಳಿ ಅನುಮತಿ ಪಡೆದು ಬರುವೆನು... ಅಲ್ಪಕಾಲದಯಿರಹವನ್ನು ಸಹಿಸಿಕೋಯಂದು ಹೇಳಿ ಸಮಾದಾನಪಡಿಸಿ ಶರವೇಗದಲ್ಲಿ ಕ್ರಮಿಸಿ ತನ್ನ ತೀರ್ಥರೂಪಳನ್ನು ಸೇರಿತು. ಅದನ್ನು ನೋಡಿದೊಡನೆ ಆಕೆಗಾದ ಸಂತೋಷ ಅಷ್ಟಿಷ್ಟಲ್ಲ. ಅದರ ಮಾತಿಗೆ

ಹುಸಿಪೆಟ್ಟನ್ನು ಹಾಕುತ್ತ 'ನನ್ನ ಬಿಟ್ಟುಯಲ್ಲೋಗಿದ್ದೋ ನೀನು ಯೇಟುಬಾರಿ ಕೂಗಬೇಕಲೋ ನಿನ್ನ... ಯೀಚೊತ್ ಯಾವಾಕೀನ ಅಡ್ಡಾಕೊಂಡಿದ್ದೆಲೊ... ನಿಂಗೇನು ಹೇಳೋರು ಕೇಳೋರು ಯಾರು ಯಿಲ್ಲಂದ್ಕಂಡಿಯಾ ಹೆಂಗೆ? ಯಂದು ವಂದೇ ವುಸುರಿಗೆ ತರಾಟೆ ತೆಗೆದುಕೊಂಡಳು. ಆವಾಗಿದ್ದು ಅದು ಆಕೆಯ ಮುಖಮೂಲೆ ಮುಂಗಯ್ಯ ನೆಕ್ಕಾಡುತ ತನ್ನ ವಯ್ಕ ವಯ್ಕನೆ ಭಾಷೆಯಲ್ಲಿ ಯೇನೇನೋ ಸಬೂಬು ಹೇಳಿತು. ಅದು ಆಕೆಗೆ ಅರ್ಥವಾಗದೇಯಿರಲಿಲ್ಲ. 'ಸಕ್ರಿ ಕಣಪ್ಪಾ... ನಾನಿನ್ನು ಕೂಳು ಕುಚ್ಚಿಡೋದಯ್ತಪ್ಪಾ.... ಮಸ್ತು ವದಕನ ಬದುಕನ ಅದಾವ ಮನ್ಯಾಗ... ನಾನೋಯ್ತೀನಿ... ನೀನ್ಯಾವಾಗಾರ ಬಂದುಕ್ತಾ' ಯಂದು ಹೇಳಲು ಅದು ವಯ್ಕ ವಯ್ಯನೆ ಹಾಡುತ ಕಣ ಕಣ್ಣ ಜಿಕ್ಕೋತ ಜಿಕ್ಕೋತ ಸಂತೋಷದಿಂದ ಮೋಡಿ ಹೋಯಿತು. ಯಿನ್ನೇನು ಮರೆಯಾಗಲಿದೆ ಅಂಬುವಾಗ' ವುಷಾರಿ ಕಣ ಮಗಾ... ಕಾಲ ಸುಮಾರ್ಯಾಗಯ್ತೆಯೆಂದು ಮಾತನ್ನು ಕೂಗಿ ಹೇಳದೇಯಿರಲಿಲ್ಲ ಜಗಲೂರೆವ್ವ....

ವಸ್ತು ಎಷ್ಟೇ ಪ್ರಖರವಾಗಿದ್ದರೂ ಅದನ್ನು ಮೂರ್ತಗೊಳಿಸುವ ಭಾಷೆ ಕೃತಕವಾಗಿದ್ದರೆ, ಕೃತಿಕಾರ ಭಾಷಾಶೈಲಿಯ ಮೂಲಕ ಪರಿಣಾಮಕಾರಿ ಚಿತ್ರಣವನ್ನು ಕೊಡುವುದರಲ್ಲಿ ಸೋಲುತ್ತಾನೆ. ಆದರೆ ಕುಂ.ವೀ. ಅವರ ಭಾಷೆಯು ವಸ್ತುವಿನೊಂದಿಗೆ ವಿಶಿಷ್ಟ ಅನನ್ಯತೆ ಹೊಂದಿದೆ. ಕುಂ.ವೀ. ಅವರು ಬರವಣಿಗೆಯಲ್ಲಿ ಕನ್ನಡ ಭಾಷೆಯನ್ನು ಕಟ್ಟಿಕೊಡುವಾಗ ನಡು ನಡುವೆ ಬಳಸುವ ಇಂಗ್ಲಿಷ್ ಪದಗಳು ಕನ್ನಡ ಭಾಷೆಯೊಂದಿಗೆ ಸಹಜವಾಗಿಯೇ ಬಳಕೆಯಾಗಿವೆ. ಸಾಮಾನ್ಯ ವ್ಯಕ್ತಿಯಿಂದ ಹಿಡಿದು ಅಸಾಮಾನ್ಯ ವ್ಯಕ್ತಿಯವರೆಗೆ ಅವ್ಯಾಹತವಾಗಿ ಇಂಗ್ಲಿಷ್ ಪದಗಳು ಮೂಲಭಾಷೆಗೆ ಧಕ್ಕೆಯಾಗದ ರೀತಿಯಲ್ಲಿ ತಿರುಚಿ ಬಳಸಿರುವುದು ಲೇಖಕರ ಬರವಣಿಗೆಯ ಜಾಣ್ಮೆಯಾಗಿದೆ.

ಕುವೆಂಪು ಅವರು ಸೂರ್ಯೋದಯ ವರ್ಣನೆಯ ರೀತಿಯಲ್ಲಿಯೇ 'ಪೂರ್ವದಿಗಂತಿದಿ ದ್ದೂರದ್ದೂರ ಪ್ರಾತಃ ಸ್ವರ್ಗದ ಸ್ವರ್ಣಾದ್ವಾರಂ ನೋಡದೊ ತೆರೆಯುತ್ತಿದೆ' ಎನ್ನುವಂತೆ ಇವರು ಕೂಡ ಸೂರ್ಯನ ವರ್ಣನೆಯನ್ನು ಮಾಡಿದ್ದಾರೆ. 'ಪೂರ್ವದ ದಿಗಂತದಲ್ಲಿ ಗರ್ಭಪಾತವಾಗಿತ್ತು. ಆಕಳು ಅಕಾಲದಲ್ಲಿ ಹಾಕಿದ್ದ ಕಂದು ಕರುವಿನಂಥಾ ಕೆಂಪು ಮುಗಿಲು ಅಲ್ಲಲ್ಲಿ ಚದುರಿದ್ದವು. ಅರುಣರೇಖೆಗಳು ಗೂಡಿನಲ್ಲಿ ಇನ್ನೂ ತೂಕಡಿಸುತ್ತಿರಬಹುದಾದ ಜಡದೇಹದ ಪಕ್ಷಿಗಳನ್ನು ಕುಕ್ಕಿ ಎಬ್ಬಿಸುತ್ತಿದ್ದವು. ಕೋಳಿಗಳು ಅಂಗಳದ ಕಸದ ಕುಪ್ಪೆಯಲ್ಲಿ ಮುತ್ತು ರತ್ನಗಳನ್ನು ಹುಡುಕತೊಡಗಿದ್ದವು. ಹರಿಯಲಾರದ ಕಣ್ಣಿನಿಂದ ಬಿಡುಗಡೆ ಪಡೆದು ತಾಯ ಕೆಚ್ಚಲಿಗೆ ಬಾಯಿ ಹಚ್ಚಲು ತವಕಿಸಿದ್ದ ಕರುಗಳು ಅಂಬಾ ಅಂಬಾ ಅಂತಿದ್ದವು. ಹೀಗೆ ಬೆಳಗು ಆ ಊರಲ್ಲಿ ಯಥಾ ಪ್ರಕಾರ ಪ್ರಾರಂಭವಾಗಿತ್ತು('ಬೇಲಿಯ ಹೂಗಳು' ಪು.೧೫೧).

ಇಲ್ಲಿ ಸೂರ್ಯೋದಯದ ವರ್ಣನೆಯೊಂದಿಗೆ ಸೃಷ್ಟಿಯಲ್ಲಿ ನಡೆಯುವ ವ್ಯವಹಾರಗಳನ್ನು ಮೋಹಕವಾಗಿ ಕುಂ.ವೀ. ಅವರು ನಿರೂಪಿಸಿದ್ದಾರೆ. ಇವುಗಳ ಮೂಲಕ ಕಲ್ಪನೆಗೂ ಸಿಗದ ತಮ್ಮ ಪ್ರತಿಭೆಯನ್ನು ತೋರಿಸಿದ್ದಾರೆ.

• ಕುಂ.ವೀ. ಅವರ ಸಾಹಿತ್ಯದ ಮೇಲೆ ಕುಮಾರವ್ಯಾಸನ ಪ್ರಭಾವ ಸಾಕಷ್ಟು ಆದಂತೆ ಕಾಣುತ್ತದೆ. ಏಕೆಂದರೆ ಇವರು ಹೆಚ್ಚು ರೂಪಕಗಳನ್ನು ಬಳಸುತ್ತಾರೆ.

ಉದಾ: ಚೌಡ ಹುಲಿಯ ಕೈಗೆ ಸಿಕ್ಕ ಮೊಲವಾಗಿದ್ದ('ಮನಮೆಚ್ಚಿದ ಹುಡುಗಿ ಪು.೯೦).

'ಆಕೆಯ ಮುಖ ಭರಿತ ಹುಣ್ಣಿಮೆಯ ಬೆಳದಿಂಗಳೇ ಸರಿ(ಆಸ್ತಿ ಪು.೩೯).

'ಒಳ ನಡೆದೇಟಿಗೆ ಭೂಮಿ ಎಂಬ ಕರಭೂಜದ ಹಣ್ಣು ಬಾಯಿ ಬಿಟ್ಟಿತೆಂದುಕೊಂಡೆ' (ಯಾಪಿಲ್ಲು ಪು.೫).

• ಕುಂ.ವೀ. ಅವರ **ಪ್ರಾದೇಶಿಕತೆಯ ಸೊಗಡು**

'ಅಯ್ಯೋ... ನಮ್ಮೆಮ್ಮಿಕರನ ಚಿರ್ತ ತಿಂದ್ಯೆತಂತಲೋ... ಅದ್ರ ಬಾಯೀಗ್ ಹುಳಾಬೀಳಾ ಬೊಲಾಸ ಓಡಾಡ್ತಿಲ್ಲ ಮನ್ಯಾಗ ಸಂಗವ್ವ ಬ್ಯಾಡ ಅಂತ ಹೇಳ್ದಂಗಲ್ಲಾ ದನಕ ಹೊಡ್ದು ಕಳಿಸಿದ್ನೆಲ್ಲಾ... ಅಯ್ಯೋಯ್ಯೋ... ಎನ್ ತಂದೆಪ್ಪಾ ಸಿವ್ನೇ ನಮ್ಗೆ ಒಂದರ ಮ್ಯಾಲೊಂದು ಕಷ್ಟ ನಮ್ಮೆಮ್ಮಿಗೆ ಯ್ಯೋನಂತೆ ಹೇಳ್ಬೇಕು... ಹೆಣ್ಗರ್‍ಯನ ತಿಂದು ಬುಡ್ತೆಲ್ಲಾ... ಚಿರ್ತ ಕಾಡಿನಾಗಿದ್ರೆ... ನಮ್ಮಂತೋರು ಊರಾಗ ಇರೋದಾದ್ರು ಎಂಗೆ ಅಯ್ಯಯ್ಯೋ ಅಯ್ಯಯ್ಯೋ...'(ಮನಮೆಚ್ಚಿದ ಹುಡುಗಿ' ಪು.೧೦೦).

ಮೇಲುವರ್ಗದ ಶೋಷಣೆಗೆ ನಲುಗಿದ ಜೀವಗಳು ಪಡುವ ಕಷ್ಟವನ್ನು, ವೇದನೆಯನ್ನು ಪಾತ್ರಗಳ ಮೂಲಕ ತಿಳಿಸುತ್ತಾರೆ.

'ವೋಗಿ ಬೋರ್ತೀವವ್ವಾ ವುಸಾರು... ಯದ್ಯಾಗ ನಾಕಕ್ಸಾರ ಯಿಟ್ಕಂಡೇ ಮನೇಗೆ ಬಾರೆವ್ವ... ದವುಳೇರ ವುಡ್ರೂಸೆ ನ್ವಾಡಿ ಅದುರಿಕ್ಯಾ ಬ್ಯಾಡ... ಯಡ್ಡು ಮೇಟ್ರು ಯಂಗೋ ನಮ್ಮಾತಾದಾನ... ಕೂಗಳತ್ಯಾಗ ನಾವಿರ್ತೀವಿ... ಅಳ್ಳೊಗಧಾಂಗ ಶಾಣೇಳಾಗೆವ್ವಾ... ಬೋತ್ತೀನಿ..."(ಯಾಪಿಲ್ಲು ಪು.೨೭).

ದಲಿತರನ್ನು ಹಾಗೂ ಅವರ ಹಸಿವನ್ನು ಅತ್ಯಂತ ಹೀನಾಯವಾಗಿ ಚಿತ್ರಿಸುವ ಪ್ರಸಂಗಗಳನ್ನು ಕುಂ.ವೀ. ಅವರ ಕಥಾಸಾಹಿತ್ಯದಲ್ಲಿ ಗುರ್ತಿಸಲಾಗಿದೆ. ಒಂದೇ ಉದ್ದೇಶಕ್ಕಾಗಿ ಪಾತ್ರಗಳು ಹೋರಾಡಿದರೂ ಅವುಗಳ ಹೋರಾಟದ ವಿಧಾನಗಳು ಮಾತ್ರ ಭಿನ್ನವಾಗಿವೆ. ಮಾರ್ಕ್ಸ್‌ವಾದದ

ಪ್ರಭಾವಕ್ಕೆ ಶ್ರೀಯುತರು ಒಳಗಾಗಿರುವುದರಿಂದ ಇವರ ಸಾಹಿತ್ಯದಲ್ಲಿ ಕಪ್ಪು ಬಿಳುಪು ಪಾತ್ರಗಳು ಹೆಚ್ಚಾಗಿವೆ.

ಕುಂ.ವೀ. ಅವರ ಕಥೆಗಳಲ್ಲಿ ಬರುವ ಮುಗ್ಧ ಹಳ್ಳಿಗಾಡಿನ ನಿರೀಕ್ಷಕರ ಪಾತ್ರಗಳು ವ್ಯವಸ್ಥೆಯಲ್ಲಿರುವ ಅನಿರೀಕ್ಷೆಗಳಿಗೆ ಪ್ರತಿಕ್ರಿಯಿಸದೆ ಅಸಹಾಯಕತೆಯನ್ನು ಪ್ರದರ್ಶಿಸುತ್ತವೆ. ಇವುಗಳಲ್ಲಿ ಪುರುಷ–ಸ್ತ್ರೀ ವಿದ್ಯಾವಂತ–ಅವಿದ್ಯಾವಂತ, ಬಡವರು, ನಿರ್ಗತಿಕರು, ಕೂಲಿಕಾರ್ಮಿಕರು ಮೊದಲಾದ ಪಾತ್ರಗಳು ಪ್ರಾತಿನಿಧಿಕವಾಗಿವೆ. 'ರತ್ನ ಎಂಬ ಹುಡುಗಿಯೂ ಉಗಾದಿ ಎಂಬ ಆಟವು' ಕಥೆಯಲ್ಲಿ ರತ್ನ ಮತ್ತು ಶಂಭು ಮುಗ್ಧರು. ಹಬ್ಬದ ಸಮಯದಲ್ಲಿ ತಮ್ಮ ತಾಯಿ ತಮಗೆ ಊಟ ಹಾಕದೆ ಸ್ವಾಮೇರಿಗೆ ಬಡಿಸಿದಾಗ ಪ್ರತಿಕ್ರಿಯಿಸದೆ ಮುಗ್ಧತೆಯನ್ನು ಪ್ರಕಟಿಸಿರುವುದನ್ನು ಕಾಣುತ್ತೇವೆ. 'ಕಮಲಿ' ಪ್ರೌಢೆಯಾದದ್ದು' ಕಥೆಯ ಕಮಲಿಯ ಮುಗ್ಧತೆಯನ್ನು ಗೌಡನ ಮಗ ಮತ್ತು ಆತನ ಸ್ನೇಹಿತರು ಬಳಸಿಕೊಂಡು ಅತ್ಯಾಚಾರವೆಸಗುತ್ತಾರೆ. 'ಸಿದ್ದನು ಗುರಿಯಿಟ್ಟಿದ್ದು' ಕಥೆಯ ಸಿದ್ಧನ ತಾಯಿ ಆತನ ತಂದೆಯ ಹೆಸರನ್ನು ತಿಳಿಸದೆ ಅಸಹಾಯಕತೆಯನ್ನು ತೋರಿಸುತ್ತಾಳೆ.

ಕುಂ.ವೀ. ಅವರ ಬಹುಪಾಲು ಕಥೆಗಳ ವೈಶಿಷ್ಟ್ಯವೇನೆಂದರೆ ಇವರ ಕಥೆಗಳಲ್ಲಿ ಯುವಕರಿಗಿಂತ ಹೆಚ್ಚಾಗಿ ಮಧ್ಯವಯಸ್ಕರು ಹಾಗೂ ಮುದುಕ–ಮುದುಕಿಯರ ಪ್ರಪಂಚವನ್ನೇ ಕಾಣಬಹುದು. ಅವರ ಕಥೆಗಳಲ್ಲಿ ಬರುವ ಮುದುಕಿಯರು ಬಹಳ ಗಟ್ಟಿಗಿತ್ತಿಯರು. ಅನುಭವದ ನುಡಿ ಹೇಳಲು, ಜಗಳ ಕಾಯಲು, ಅಥವಾ ಜಗಳ ಬಿಡಿಸಲು, ಕಾಯಿಲೆ ವಾಸಿ ಮಾಡಲು, ಬುದ್ಧಿ ಮಾತು ಹೇಳಲು, ಪ್ರತಿಭಟಿಸಲು, ಪ್ರೀತಿ ಮಾಡಲು, ಯಾರಾದರೂ ಸತ್ತಾಗ ಅಳಲು, ಸಾಂತ್ವನ ಹೇಳಲು ಹೀಗೆ ಈ ವೃದ್ಧರ ಜಗತ್ತು ಕುಂ.ವೀ. ಅವರ ಕಥೆ ಕಾದಂಬರಿಗಳ ಉದ್ದಕ್ಕೂ ಇವರ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಅಂತಹ ಕೆಲವು ವೃದ್ಧೆಯರ ಪರಿಚಯವನ್ನು ಇಲ್ಲಿ ಮಾಡಿಕೊಡಲಾಗಿದೆ.

**ಗಾಡ್ ಮದರ್ ಗಂಗಾ ಭವಾನಿ**

ಈ ಕಥೆಯಲ್ಲಿ ಕುಂ.ವೀ. ಅವರು ತಮ್ಮ ಓಣಿಯಲ್ಲಿ ವಾಸವಿರುವ ಭವಾನಿ ಗಂಗಮ್ಮಜ್ಜಿ ಎಂಬ ವೃದ್ಧೆಯ ಬದುಕನ್ನು ಹಿಡಿದಿಟ್ಟಿದ್ದಾರೆ. ಆಕೆಯು ಮೂಲತಃ ಕೊಟ್ಟೂರಿನವಳಲ್ಲ. ಮಹಾರಾಷ್ಟ್ರದ ಸತಾರ ಕಡೆಯಿಂದ ಯಾವುದೋ ಒಂದು ಹಳ್ಳಿಯಿಂದ ಬಂದಾಕೆ. ತುಂಬಾ ಸುಂದರಿಯಾದ ಈ ಅಜ್ಜಿ ತನ್ನ ಯೌವನದ ದಿನದಲ್ಲಿ ಬಟ್ಟೆ ಬದಲಿಸುವಂತೆ ಪುರುಷರನ್ನು ಬದಲಿಸಿ ಕೊನೆಗೆ ತನ್ನ ಬದುಕಿನುದ್ದಕ್ಕೂ ಅನೈತಿಕ ಚಟುವಟಿಕೆಗಳನ್ನು ಪೋಷಿಸಿ ಬೆಳೆಸಿಕೊಂಡು ಬಂದವಳು. ಆದರೆ ಮುದುಕಿ ಓಣಿಯಲ್ಲಿ ನಿಷ್ಣಾತ ಜಗಳಗಂಟಿಯಾಗಿತ್ತು. ವಿವಾಹೇತರ

ಅನೈತಿಕ ಸಂಬಂಧಗಳಿಗೆ ಆಶ್ರಯ ನೀಡುತ್ತಲೂ, ಗಾಂಜಾ, ಅಫೀಮು ಮತ್ತಿತ್ತರ ಅಮಲೇರಿಸುವ ಸಾಮಗ್ರಿಗಳನ್ನು ಗಿರಾಕಿಗಳಿಗೆ ವಿಲೇವಾರಿ ಮಾಡುತ್ತಲೂ, ವಾರಬಡ್ಡಿ ಲೆಕ್ಕದಲ್ಲಿ ಸಾಲಸೋಲ ಕೊಡುತ್ತಲೂ, ಪಾತ್ರೆಪಡುಗಗಳನ್ನು ಒತ್ತೆಯಿಟ್ಟುಕೊಳ್ಳುತ್ತಲೂ, ಪೋಲಿಸರನ್ನು 'ಹೋಗಲೋ ಬಾರಲೋ' ಎಂದು ಏಕವಚನದಿಂದ ಸಂಬೋಧಿಸುತ್ತಿತ್ತು. ಕನ್ನಡಕ್ಕೆ ಮರಾಠಿಯನ್ನು ಬೆರಸಿ ವಾಚಾಮಗೋಚರವಾಗಿ ಬಯ್ಯುತ್ತಿತ್ತು. ಇಂಥ ಮುದುಕಿಯನ್ನು ಯಾರೊಬ್ಬರು ತಡವಲು ಹಿಂದುಮುಂದು ನೋಡುತ್ತಿದ್ದರು. ಈ ಲೇಡಿ ಡಾನ್ ಒಂದು ಕೈಲಿ ಬಡಿಗೆಯನ್ನು ಇನ್ನೊಂದು ಕೈಲಿ ಕಾಳಹಸ್ತಿ ಬೀಡಿಯನ್ನು ಹಿಡಿದು ಬುಸುಬುಸು ಹೊಗೆ ಬಿಡುತ್ತ 'ಎಲ್ಲಿದ್ದರಲೋ ಊರಾಟಗಳ್ಳರಾ' ಎಂದು ಕೂಗುತ್ತ ಕೆಳಗೇರಿಯಲ್ಲಿ ಹೊರಟಳೆಂದರೆ ಗೋಣಿ, ದುರುಗ, ವುಸೇನಿಯರೆ ಮೊದಲಾದ ಪರಿಶೆ ಪೈಕಿ ಪೈಲ್ವಾನರು ಕಾಲಿಗೆ ಬುದ್ಧಿ ಹೇಳದೆ ಇರುತ್ತಿರಲಿಲ್ಲ ಈಕೆಯನ್ನು ಮಟ್ಟಹಾಕಲು ಪೋಲೀಸ್ ಸ್ಟೇಷನ್ ಇಲ್ಲದಿರಲಿಲ್ಲ ಅಂತ ಅಲ್ಲ. ಆದರೆ ಕನಿಷ್ಠ ಬಿಲ್ಲೆಗಳಿಂದ ಹಿಡಿದು ಎಸ್ಪೈವರೆಗೆ ಎಲ್ಲರೂ ಆಕೆಯ ಋಣವೆಂಬ ಅಡಕತ್ತರಿಯಲ್ಲಿ ನಡುವೆ ಸಿಕ್ಕಿ ಹಾಕಿ ಕೊಂಡಿದ್ದರಷ್ಟೇ"[೨](ಬರೀ ಕಥೆಯಲ್ಲೋ ಅಣ್ಣ, ಪು.೯೪೫)

ಕುಂ.ವೀ. ಅವರು ಅವರ ಕಥೆ, ಕಾದಂಬರಿಗಳಲ್ಲಿ ಒಳ್ಳೆಯ ಮುದುಕಿಯ ಜೊತೆ ಇಂಥ ಡಾನ್ ಮುದುಕಿಯರು ಯಥೇಚ್ಛವಾಗಿ ಸಿಗುತ್ತಾರೆ. ಇದು ಕುಂ.ವೀ. ಅವರು ಬದುಕನ್ನು ನೋಡುವ ಸೂಕ್ಷ್ಮ ಗ್ರಹಿಕೆಗೆ ಉದಾಹರಣೆಯಾಗಿದೆ. ಕುಂ.ವೀ. ಅವರು ಕಟ್ಟಿಕೊಡುವ ಮುದುಕಿಯರ ಜಗಳವೇ ಬಹಳ ಮೋಜಿನದಾಗಿರುತ್ತದೆ.

**ನಿಂಗಮ್ಮಜ್ಜಿ** ಕುಂ.ವೀ. ಅವರಿಗೆ ಅತ್ಯಂತ ಪ್ರಿಯವಾದ ಮುದುಕಿ ಎಂದೇ ಹೇಳಬಹುದು. ಇವರ ಅನೇಕ ಕಥೆಗಳಲ್ಲಿ ಅವರ ಮನೆ ಹತ್ತಿರ ಇರುವ ಈ ಅಜ್ಜಿಯು ಪಾಲುದಾರಳು. ವೃದ್ಧರ ಚಿತ್ರಣ ಬರುವಲ್ಲೆಲ್ಲಾ ಈ ಮುದುಕಿ ಇರಲೇಬೇಕು. "ಶ್ಯಾಮಲವರ್ಣದ ನಿಂಗಮ್ಮಜ್ಜಿ ಎಂಬ ವಿಶ್ವಸುಂದರಿ ಅಘೋಷಿತ ಸೂಪರಿಂಡೆಂಟಾಫ್ ಪೋಲೀಸಾಗಿದ್ದಳಷ್ಟೆ. ಈಕೆ ಅಲಲಲಾ ಎಂದು ಹೂಂಕರಿಸಿದಳೆಂದರೆ ಓಣಿಗೆ ಓಣಿಯೇ ಗಪ್‌ಚುಪ್. ಈಕೆಯೇ ಸ್ವತಃ ಒಂದು ಪೋಲೀಸ್ ಠಾಣೆಯಂತಿದ್ದರಿಂದ ಕಳ್ಳ ಕಾಕರ ಭಯ ಇರಲಿಲ್ಲ, ಇಂಥಪ್ಪ ಈಕೆಗೂ ಅಂಥಪ್ಪ ಗಂಗವ್ವಗೂ ನಡುವೆ ವಾರಕೊಮ್ಮೆಯಾದರೂ ಟಗ್ ಆಫ್ ವಾರ್ ನಡೆಯುತ್ತಿತ್ತು. ಇನ್ನೇನು ತನಗೆ ಸೋಲು ಖಾಯಂ ಎಂದು ಅರಿವಾದೊಡನೆ ಗಂಗವ್ವ ಮರಾಠಿ ಭಾಷೆಯಲ್ಲಿ ಪುಂಖಾನುಪುಂಖವಾಗಿ ಬಯ್ಯಲಾರಂಭಿಸುತ್ತಿತ್ತು. ನಿಂಗಮಜ್ಜಿ ಈ ಕಾದಾಟಕ್ಕೆ ಹೆದರಿ ಧರ್ಮಯುದ್ಧದಿಂದ ಹಿಂದೆ ಸರಿಯುತ್ತಿತ್ತು."

**ದೇವರ ತಳ ಸಡಲಿದಾಗ**

ನಿಂಗಮ್ಮಜ್ಜಿಯ ವೈಶಿಷ್ಟ್ಯತೆಯೆಂದರೆ ಯಾರ ಮೈಮೇಲೇನಾದರೂ ದೆವ್ವಗಳು ಬಂದರೆ ಅದರ ಜೊತೆ ಮಾತನಾಡಿ ಓಡಿಸುತ್ತಿದ್ದಳು. ಶಾರದವ್ವ ಶಾಂತವ್ವರಂಥ ತರುಣಿಯರ ಮೈಯೊಳಗೆ ತೂರಿ ನಾನಾ ನಮೂನೆ ಆಟಗಳನ್ನು ಪ್ರದರ್ಶಿಸುತ್ತಿದ್ದವು. ಶಾರದಮ್ಮನ ಮೈಯೊಳಗೆ ಪ್ರತಿ ಹುಣ್ಣಿಮೆಗೊಮ್ಮೆ ಬರುತ್ತಿದ್ದ ಕಾಂಪೌಂಡರ ರಾಮಣ್ಣ ಎಂಬ ದೆವ್ವಕ್ಕೂ, ನಮ್ಮ ನಿಂಗಮ್ಮಜ್ಜಿ ಎಂಬ ಕಿಂಗ್‌ಕಾಂಗ್ ಮುದುಕಿಗೂ ನಡುವೆ ವಾಗ್ಯುದ್ಧ, ಮಲ್ಲಯುದ್ಧಗಳು ನಡೆಯುತ್ತಿದ್ದುದುಂಟು. ಕಾಂಪೌಂಡರ್ ರಾಮಣ್ಣ ದೆವ್ವವು ಕೊನೆಗೆ ಸೋತು ಸುಣ್ಣವಾಗಿ ಜೇ ನಿಂಗವ್ವೋ... "ಮುಂದೊಂದು ದಿನ ನಿನ್ ಮಯ್ಯಾಗೂ ಹೊಕ್ಕೊಂಡು ಕಾಟ ಕೊಡ್ಲಿಲ್ಲ ನಾನ್ ರಾಮಣ್ಣನೇ ಅಲ್ಲ" ಎಂದು ಶಪಥ ಮಾಡಿ ಓಡಿ ಹೋಗುತ್ತಿತ್ತು. ಇಂಥ ಎಷ್ಟೋ ದೆವ್ವಗಳಿಗೆ ಕುಠಾರಪ್ರಾಯಳಾಗಿದ್ದ ನಿಂಗಮ್ಮಜ್ಜಿ ಇಡೀ ನಮ್ಮೋಣಿಗೆ 'ಎಸ್‌ಪಿ' ಆಗಿದ್ದಳು"[೬](ದೇವರ ತಳ ಸಡಲಿದಾಗ, ಪು.೧).

ಹೀಗೆ ಕುಂ.ವೀ. ಅವರ ಕಥೆಗಳಲ್ಲಿ ಬರುವ ವೃದ್ಧೆಯರು ಜಗಳಗಂಟರು, ಧೈರ್ಯಶಾಲಿಗಳು. ಬದುಕಿನ ನಾನಾ ಅನುಭವಗಳನ್ನು ಕಂಡುಂಡವರು. ಆದ್ದರಿಂದ ಬಹಳ ಪ್ರೀತಿಯಿಂದ ಇಂತವರನ್ನು ತಮ್ಮ ಕಥೆಗಳಲ್ಲಿ ಕಥೆಗಾರರು ಸ್ಮರಿಸಿಕೊಳ್ಳುತ್ತಾರೆ.

**ಕುಬುಸ**

ಈ ಕಥೆಯಲ್ಲಿ ಬರುವ 'ಬಂಡೆವಜ್ಜಿ' ಹೆಸರಿಗೆ ತಕ್ಕಂತೆ ಇದ್ದವಳು ಈ ಕಥೆಯ ನಾಯಕಿಯೂ ಹೌದು. ಕುಂ.ವೀ. ಅವರ ನಾಯಕಿಪ್ರಧಾನ ಕಥಾವಸ್ತುವುಳ್ಳ ಕಥೆಗಳಲ್ಲಿ ಹೆಚ್ಚು ಜನಪ್ರಿಯ, ಜನಮನ್ನಣೆ ಗಳಿಸಿದ ಕಥೆ ಇದಾಗಿದೆ. ಈ ಕಥೆಯಲ್ಲಿ ಬರುವ ಈ ವೃದ್ಧೆ ವಡ್ಡರ ಜನಾಂಗಕ್ಕೆ ಸೇರಿದವಳು. ಆ ಜನಾಂಗದ ಸ್ತ್ರೀಯರು ಪಾರಂಪರಿಕವಾಗಿ ನಡೆದುಬಂದ ಸಂಪ್ರದಾಯದಂತೆ 'ಕುಬುಸ'ವನ್ನು ಧರಿಸುತ್ತಿರಲಿಲ್ಲ. ಈ ಕಥಾನಾಯಕಿಯ ಮೊಮ್ಮಗ ನೆಟ್‌ಕಲ್ಲು ಪಾರಂಪರಿಕವಾಗಿ ಬಂದ ಕಲ್ಲು ಒಡೆಯುವ ಕೆಲಸ ಬಿಟ್ಟು ಅಕ್ಷರ ಕಲಿಯಲು ಹಠಮಾಡಿ ಶಾಲೆ ಸೇರಿ ಹೈಸ್ಕೂಲ್ ಓದಿ ಮುಂದೆ ಪಟ್ಟಣದ ಪಿವೋನ್ ಕೆಲಸಕ್ಕೆ ಸೇರಿಕೊಳ್ಳುತ್ತಾನೆ. ನಂತರ ಪಟ್ಟಣದಲ್ಲಿಯೇ ಮದುವೆ ಮಾಡಿಕೊಂಡು ಆಧುನಿಕ ರೀತಿಯಲ್ಲಿ ಬದುಕನ್ನು ನಡೆಸಿರುತ್ತಾನೆ. ಮೊಮ್ಮಗ ತನ್ನ ಅಜ್ಜಿಯನ್ನೂ ವಡ್ಡಟ್ಟಿಯಿಂದ ಪಟ್ಟಣಕ್ಕೆ ಕರೆದುಕೊಂಡು ಬಂದು ತನ್ನ ಜೊತೆ ಇಟ್ಟುಕೊಳ್ಳುತ್ತಾನೆ. ಯಾವತ್ತೂ ತನ್ನ ಜೀವನದಲ್ಲಿ ಬಸ್ಸಿನಲ್ಲಿ ಪ್ರಯಾಣಿಸದ ಆ ಬಂಡೆವಜ್ಜಿಯ ಪಯಣವೇ ಒಂದು ಸಾಹಸಯಾತ್ರೆ. ನಂತರ ಪಟ್ಟಣದಲ್ಲಿ ಈ ಬ್ಲೌಸ್ ಇಲ್ಲದ ಅಜ್ಜಿಯು ಎಲ್ಲರ ಕಣ್ಣಿಗೆ ವಿಚಿತ್ರ ಪ್ರಾಣಿಯಂತೆ ಕಾಣುತ್ತಾಳೆ. ಆ ಬೀದಿಯಲ್ಲಿ

ಆಕೆಯನ್ನು ನೋಡಲು ಜನರು ಆಗಮಿಸುತ್ತಾರೆ. ಇದರಿಂದ ಅವಮಾನಕ್ಕೆ ಒಳಗಾದ ಮೊಮ್ಮಗ ಮತ್ತು ಸೊಸೆ ಹಾಗೂ ಅವರ ಸುತ್ತಮುತ್ತಲ ಜನರು ಆಕೆಗೆ ಕುಬುಸ ತೊಡಿಸಲು ಸಾಕಷ್ಟು ಪ್ರಯತ್ನಿಸಿದರೂ ಸಾಧ್ಯವಾಗುವುದಿಲ್ಲ. ಈ ಕಾರಣದಿಂದ ಆ ವೃದ್ಧೆ ಪಟ್ಟಣ ಬಿಟ್ಟು ಹಳ್ಳಿಗೆ ಮರಳಿ ಬರುತ್ತದೆ. ಈ ಕಥೆ ಕುಂ.ವೀ. ಅವರ ಗ್ರಾಮೀಣ ಸೊಗಡನ್ನು, ಅಲ್ಲಿಯ ಭಾಷೆಯನ್ನು ಅತ್ಯಂತ ಸುಂದರವಾಗಿ ಈ ಕಥೆಯು ಬಿಂಬಿಸುತ್ತದೆ"[೪](ಪು.೨೯೮).

**ಹಂಪಮಜ್ಜಿ**

ಲೇಖಕರಿಗೆ ಅತ್ಯಂತ ಪ್ರೀತಿಪಾತ್ರಳಾದ ಈಕೆ ಲೇಖಕರ ಸಂಬಂಧಿಯೂ ಹೌದು. ಈಕೆಯ ದೇಹದಾದ್ಯಂತವಿದ್ದ ಕೋಟಿ ಕೋಟಿ ಸುಕ್ಕುಗಳು. ಪ್ರಾಚ್ಯವಸ್ತು ಸಂಗ್ರಹಾಲಯದ ಮಾನವರೂಪದಂತಿದ್ದು ವಿಶೇಷವಾಗಿತ್ತು. ಈ ಪುರಾತನಳು ಸ್ನಾನ ಮಾಡುತಲಿದ್ದುದು ತಿಂಗಳಿಗೆರಡು ಸಲ ಅಥವಾ ಹಬ್ಬ ಹರಿದಿನಗಳಲ್ಲಿ, ಲೇಖಕರೇ ಹೇಳುವಂತೆ ನಮ್ಮ ಸೋಫಿಯಾ ಲಾರೆನ್ಸ್ ಹಂಪಮ್ಮಜ್ಜಿ ಮೈಗೆರಕೊಂಬುವ ಕ್ರಿಯೆ ಒಂದು ತಾಸುಗಟ್ಟಲೇ ಸಾಂಗೋಪಾಂಗವಾಗಿ ನಡೆದು ಕೊನೆಗೊಳ್ಳುತ್ತಿತ್ತು. ಇನ್ನು ಹಂಪಮ್ಮಜ್ಜಿ ತಲೆಕೂದಲು ಮಾರು ಉದ್ದ ಅದರಲ್ಲಿ ರಾಶಿ ರಾಶಿ ಹೇನುಗಳು. ಓಣಿಯ ಮಂದಿಯೆಲ್ಲಾ ಸೇರಿ ಆ ದಿನ ಅಂದರೆ ಅಭ್ಯಂಜನದ ನಂತರ ಹೇನು ತೆಗೆಯುವ ಕಾರ್ಯಕ್ರಮ ನಡೆಯುತ್ತದೆ. ಒಂದು ದಿವಸ ನಿಂಗಮ್ಮಜ್ಜಿ ಮತ್ತು ಈ ಹಂಪಮ್ಮಜ್ಜಿಯ ನಡುವೆ ಜಗಳವಾಗುತ್ತದೆ... ನಿಂಗಮ್ಮಜ್ಜಿಯು ತನ್ನ ಮೈಮೇಲೆ ಹತೋಟಿ ಕಳೆದುಕೊಂಡು "ಇನ್ನೂ ಏಸು ವರುಸಾಂತ ಈ ಭೂಮಿ ಮ್ಯಾಲ ಬದುಕಿರಬೇಕಂತ ಮಾಡೀ" ಮುದಿ ಮುಂಡೇದೆ... ನಿನ್ನ ಕಣ್ಮುಂದೆ ಎಂಥೆಂಥೋರೆ ಪಿರಾಣಬುಟ್ರು... ಅವರ ದಾರಿ ಹಿಡಿಯೋಕೆ ನಿನಗೇನಾಗೈತೆ ದಾಡಿ. ನೀನು ಬೊದುಕಿ ನಮ್ಮನ್ನು ಸಾಕೋದು ಅಟರಾಗೈತೆ ಎಂದು ಏನೇನೋ ಆಡಿದ ಮಾತುಗಳನ್ನು ಕೇಳಿಸಿಕೊಂಡ ನಾನು ಆಕೆ ಕಡೆಗೆ ದುರುಗಟ್ಟಿದೆ... ಆಕೆಯ ಮಾತುಗಳನ್ನು ತನ್ನ ಚುರುಕಾದ ಕಿವಿಗಳಿಂದ ಕೇಳಿಸಿಕೊಂಡ ಪುರಾತನಳು "ಆಗ್ಲವ್ವಾ ಆಗ್ಲಿ... ವಟ್ಟೇಲಿ ಹುಟ್ಟಿದ ಮಗಳಾದ ನಿನ್ನ ಮಾತನ್ನು ನಡೆಸಿಕೊಡದಿದ್ದರೆ ಆ ದ್ಯಾವ್ರು ಮೆಚ್ಚಾನ... ಇನ್ನೊಂದು ತಿಂಗಳೊಳಗೆ ಪಿರಾಣ ಬುಡದಿದ್ದರೆ ನಾನು ಸಿದ್ದಪ್ಪಗುಟ್ಟಿದ ಮಗಳೇ ಅಲ್ಲ ಎಂದಳು." ಈ ಘಟನೆ ನಡೆದ ನಂತರ ಬಹಳ ಸ್ವಾಭಿಮಾನಿಯಾದ ಆ ಮುದುಕಿಯು ಊಟ ಬಿಟ್ಟು ಬಿಟ್ಟಳು. ಓಣಿಯ ಎಲ್ಲರೂ ಬಂದು ಪಂಚಾಯಿತಿ ಮಾಡಿದರು. ಅದು ಒಂದು ತುತ್ತು ಉಣಲಿಲ್ಲ. ಮನೆಯಲ್ಲಿ ಎಲ್ಲರಿಗೂ ಇರಿಸು ಮುರಿಸು. ಈ ಅಜ್ಜಿ ಉಪವಾಸವಿರುವಾಗ ತಾವಾದರೂ ಹೇಗೆ ಉಣ್ಣುತ್ತಾರೆ. ಈ ರೀತಿ ಎರಡು ದಿನ ಕಳೆದ ನಂತರ ಮನೆಯವರು ನಿರ್ಧರಿಸಿದರು. ಹೊಟ್ಟೆ ಹಸಿದರೆ ತಾನೆ ಉಣ್ಣುತ್ತಾಳೆ ಎಂದು ಸುಮ್ನೆ ಆದ್ರು. ಆದರೆ ಅಜ್ಜಿ ಬಹಳ ಸ್ವಾಭಿಮಾನಿ. ಆಕೆ ಊಟ ಮಾಡಲಿಲ್ಲ. ಒಂದು ವಾರವಾದರೂ ಜೀವವನ್ನು

ಬಿಡಲಿಲ್ಲ. ಆಕೆ ಸಾವಿಗೆ ಕಾದು, ಬಂದ ಮಂದಿ ನಿರಾಶರಾದರೇ ವಿನಃ ಆಕೆ ಜೀವ ಬಿಡಲಿಲ್ಲ. ಆಕೆ ನೋಡಲಿಕ್ಕೆ ಬಂದ ಮಂದಿ ಮನೆ ತುಂಬಿತು. ಕೊನೆಗೆ ಲೇಖಕರ ತಂದೆ ಸಿಟ್ಟು ಬಂದು "ಉಣ್ಣು ಇಲ್ಲಾ ಜೀವ ಬಿಡು, ಎನಬೇ ನಿನಗೆ ಮಣ್ಣು ಕೊಟ್ಟು ಹೋಗಲಕಂತ ನೂರಾರು ಮಂದಿ ಹತ್ತಾರು ಕಡೆಲಿಂದ ಬಂದಾರ... ನೀನು ನೋಡಿದರೆ ತಿಂಗಳಾದರು ಪ್ರಾಣ ಬಿಡುವಲ್ಲಿ. ನಿನ್ನ ಮನಸ್ಸಿನಾಗ ಅದೇನಿಟ್ಟುಕೊಂಡಿ ಅಂಬುದನ್ನು ಬೊಗಳು" ಎಂದು ಲೇಖಕರ ತಂದೆ ಬೇಸರದಿಂದ ನುಡಿದಾಗ ಅದು "ತುಂಬರಗುದ್ದಿ ಗೌಡರ ವಕ್ರಾಣಿ ಬಾವಿಯಿಂದ ನೀರು ತಂದು ನನ್ನ ಬಾಯಿಗೆ ಹಾಕು" ಎಂದು ಹೇಳಿತು. ಆದರೆ ಆ ಬಾವಿ ಸಿಗದೆ ಅವರು ಯಾವುದೋ ನೀರು ಹಾಕಿದಾಗ ಮುದುಕಿ ಇದು ಅಲ್ಲಂತ ಹೇಳಿ ಎರಡು ದಿನಗಳ ನಂತರ ಪ್ರಾಣ ಬಿಟ್ಟಿತು. ಹೀಗೆ ವೃದ್ಧೆಯರ ಗಟ್ಟಿ ಜೀವನ, ಅವರ ಹಠ ಉಳಿದವರ ಪರದಾಟ ಇಂತಹ ಅದ್ಭುತ ಚಿತ್ರಣಗಳನ್ನು ಕುಂ.ವೀ. ಅವರ ಕಥೆಗಳ ಉದ್ದಕ್ಕೂ ಕಾಣಬಹುದು. ಇಂತಹ ವೃದ್ಧರ ಕಥೆಗಳಿಂದ ತುಂಬಿದ ಇವರ ಬರಹ ಗ್ರಾಮೀಣ ಭಾರತದ ಪರಿಚಯವನ್ನು ಅತ್ಯಂತ ನೈಜವಾಗಿ ಕಟ್ಟಿಕೊಡುತ್ತದೆ"[೮](ಗಾಂಧಿ ಕ್ಲಾಸು, ಪು. ೫೧).

ಕುಂ.ವೀ. ಅವರು ಪ್ರಾದೇಶಿಕ ಭಾಷೆಯ ಸೊಗಡನ್ನು, ಅದರಲ್ಲೂ ಕೊಟ್ಟೂರಿನ ಆಡುಮಾತಿನ ಲಯವನ್ನು ಅತ್ಯಂತ ಜಾಣ್ಮೆಯಿಂದ ಕಥೆಗಳಲ್ಲಿ ಬಳಸಿಕೊಂಡಿದ್ದಾರೆ. ವಾಸ್ತವಕ್ಕೂ ಸಾಹಿತ್ಯದ ಭಾಷೆಗೂ ವ್ಯತ್ಯಾಸವೇ ಇಲ್ಲದಷ್ಟು ಆಡುಮಾತಿನ ಲಯ ಇವರ ಕತೆಗಳಲ್ಲಿ ಕಂಡುಬರುತ್ತದೆ. ಇವರ ಕಥೆಗಳಲ್ಲಿ ಬಂಡಾಯದ ಝಳಪಿದೆ ಹಾಗೂ ಹೋರಾಟದ ಬೆಳಕಿದೆ. ಉಸಿರಿನಷ್ಟೇ ಸಹಜವಾಗಿ ಇವರಲ್ಲಿ ಕಥೆಗಳು ಅರಳುತ್ತದೆ. ಅದಕ್ಕೆ ಕಾರಣ ಇವರ ಅಗಾಧ ಕಲ್ಪಕಶಕ್ತಿ ಎಂದು ಹೇಳಬಹುದು. ಊಳಿಗಮಾನ್ಯ ಪದ್ಧತಿಯ ವಿರುದ್ಧ ಇವರ ಕತೆಯ ಪಾತ್ರಗಳು ಪುಟಿದೇಳುತ್ತದೆ. ಈ ಊಳಿಗಮಾನ್ಯ ಪದ್ಧತಿ ಅವರ ಅನೇಕ ಗ್ರಾಮೀಣ ಬದುಕಿನ ಜೀವನ ಚಿತ್ರಣದಲ್ಲಿ ಕಾಣಬಹುದಾಗಿದೆ. ಕೆಳವರ್ಗದ ಜೀವನವನ್ನು ಇವರಷ್ಟು ಸಮರ್ಥವಾಗಿ ಚಿತ್ರಿಸಿರುವವರು ವಿರಳವೆಂದೇ ಹೇಳಬಹುದು. ಕೆಳವರ್ಗದ ಜೀವನವನ್ನು ದಾಖಲು ಮಾಡುವಾಗ ವೀರಭದ್ರಪ್ಪನವರು ತೋರುವ ಅನುಭವಸಮೃದ್ಧಿ ಬೆರಗು ಹುಟ್ಟಿಸುವಂತಿದ್ದರೂ, ಆ ಜನಗಳ ಸಾಧ್ಯತೆಗಳನ್ನು ಬಿಂಬಿಸುವಾಗ ದುರ್ಬಲವಾಗುವ ವೈಚಾರಿಕ ನೆಲಗಟ್ಟು ಇವರ ಕತೆಗಳ ಮಿತಿಗೆ ಮುಖ್ಯ ಕಾರಣವಾಗುತ್ತದೆ. ಬಂಡಾಯದ ಲೇಖಕರಾದ ಕುಂ.ವೀಯವರು ತಮ್ಮ ಪ್ರತಿಭಟನೆಯನ್ನು ಕತೆಯ ವಿವರದಲ್ಲಿ ವ್ಯಕ್ತವಾಗಿಯೋ ಅಥವಾ ಎಷ್ಟೋ ಸಲ ಸೂಚ್ಯವಾಗಿಯೋ ತೋರಿಸಲು ಇಷ್ಟಪಡುತ್ತಾರೆ. ಕುಂ.ವೀ. ಅವರ ಬಹುಪಾಲು ಕತೆಗಳ ರೀತಿಯೇ ಇಂಥದ್ದು. ಅನ್ಯಾಯ, ದೌರ್ಜನ್ಯ ನಡೆದಾಗ ಕತೆಯೊಳಗಿನ ಪಾತ್ರ ನೇರವಾಗಿಯೇ ಪ್ರತಿಭಟಿಸುತ್ತದೆ.

'ದೇವರ ಹೆಣ' ಕತೆಯಲ್ಲಿ ಬರುವ ಕೊಣ್ಣೆಯನ್ನು ಕುಂ.ವೀ. ಅವರು ಒಂದು ರೀತಿಯ ವಿಲಕ್ಷಣ ವ್ಯಕ್ತಿತ್ವದಲ್ಲಿ ಚಿತ್ರಿಸಿದ್ದಾರೆ. ಇಂತಹ ನಡವಳಿಕೆಯಲ್ಲಿಯೇ ಶಿಷ್ಟ ಸಮಾಜದ ವೈರುಧ್ಯಗಳನ್ನು ಬಯಲಿಗೆಳೆಯುವ ರೀತಿ ಮನಮುಟ್ಟುವಂತಿದೆ. ಸತ್ಯದ ನಗ್ನದರ್ಶನ ಓದುಗನಿಗೆ ಆಘಾತವನ್ನು ಉಂಟುಮಾಡುತ್ತದೆ.

ಕುಂ.ವೀ. ಅವರು ಹಸಿವನ್ನು ಐತಿಹಾಸಿಕ ನೆಲೆಯಲ್ಲಿ ಗುರ್ತಿಸಿ ಅದಕ್ಕೆ ಪಾತ್ರದ ವ್ಯಕ್ತಿತ್ವದ ಮಿತಿಯೊಳಗೆ ಊಹೆಗೆ ನಿಲುಕದ ಪರಿಹಾರವನ್ನು ಕಂಡುಕೊಳ್ಳುವ ಕಥೆಯಿದು. ಲೇಖಕರ ಕ್ರಾಂತಿಕಾರಿ ಸಾಧ್ಯತೆವೊಂದರ ಆಶಯವನ್ನು ಸಾಬೀತು ಮಾಡುವ ಕತೆಯೂ ಆಗಿದೆ. ಓೀಗೆ ಕತ್ತಲನು ಬಡತನ ಮತ್ತು ಸಂಪ್ರದಾಯವನ್ನು ಏಕಕಾಲಕ್ಕೆ ಮೆಟ್ಟಿನಿಂತು ಮೇಲುವರ್ಗದವರ ಗುಡಿಗೆ ನುಗ್ಗಿ ಅಲ್ಲಿಯ ಆಹಾರಪದಾರ್ಥವನ್ನು ತಿಂದು ತನ್ನ ಮಕ್ಕಳಿಗೆ ಕಟ್ಟಿಕೊಂಡು ಬರುವ ದೃಶ್ಯ ಕತೆಯ ಚೌಕಟ್ಟಿನಲ್ಲೊಂದು ಸಮಾಜವಾದಿ ತರ್ಕತೆಯ ಪರಿಣಾಮವನ್ನು ಉಂಟುಮಾಡುತ್ತದೆ ಎಂದು ಹೇಳಬಹುದು. ಗ್ರಾಮೀಣ, ನಗರ ಪರಿಸರಗಳ ಶೋಷಣೆಗೆ ಕಾರಣವಾಗಿರುವ ಊಳಿಗಮಾನ್ಯ ಅದಿಕಾರಶಾಹಿ ವ್ಯವಸ್ಥೆಯೊಳಗೆ ಮಾನವೀಯತೆ ನಲುಗಿ ಹೋಗುತ್ತಿರುವ ಬಗ್ಗೆ ಹೆಚ್ಚು ಸ್ಪಂದಿಸುತ್ತಿರುವುದನ್ನು ಕಾಣಬಹುದು. ಹಾಗೆಯೇ ಯಜಮಾನ ಸಂಸ್ಕೃತಿಗೆ ದಬ್ಬಾಳಿಕೆ ಶೋಷಣೆಗಳನ್ನೇ ತನ್ನ ಸೃಜನಶೀಲತೆಗೆ ಮೂಲ ಪ್ರೇರಣೆಯಾಗಿಸಿಕೊಂಡು ಕತೆಗಳನ್ನು ರಚಿಸಿರುವುದು ಕುಂ.ವೀ. ಅವರ ಎಲ್ಲಾ ಕತೆಗಳ ಬರವಣಿಗೆಯ ಶೈಲಿಯಾಗಿದೆ.

ಒಟ್ಟಾರೆ ಕುಂ.ವೀ. ಅವರ ಬಂಡಾಯದ ಕತೆಗಳಲ್ಲಿ ಅಸ್ಪೃಶ್ಯರು ಜಗತ್ತು ಮಾಡು ದಿಟ್ಟ ವಿಧಾನದಲ್ಲಿ ಶಿಷ್ಟಸಂಸ್ಕೃತಿಯನ್ನು ಧಿಕ್ಕರಿಸುವ ದನಿಯಿರುತ್ತದೆ. ಕುಂ.ವೀ. ಅವರ ಬಹುಪಾಲು ಕತೆಗಳ ವಸ್ತು ಶೋಷಣೆ, ಹಸಿವು, ಅಮಾನವೀಯತೆ ಮೊದಲಾದವುಗಳಾಗಿವೆ. ಇಲ್ಲಿ ಹಸಿವು ಪಡೆದುಕೊಳ್ಳುವ ನಿಜವಾದ ನೋವಿನ ಧ್ವನಿ ಲಘು ಹಾಸ್ಯವನ್ನು ಮರೆಯದೆ ಆಕ್ರೋಶವಾಗದೆ ಸಾಗುವ ನಿರೂಪಣೆ ಪರಿಣಾಮಕಾರಿಯಾಗಿದೆ. ಅರ್ಧ ಶತಮಾನ ಕಳೆದರೂ ಚೋಮನ ಸಮಸ್ಯೆಗಳು ಹಾಗೆಯೇ ಉಳಿದಿವೆ ಎಂಬುದನ್ನು ತೋರಿಸುವ 'ಕಪ್ಪು ನೆಲದಲ್ಲೊಂದು ಕೆಂಪು ಕಥೆ' ಕೇವಲ ಘೋಷಣೆ ಮತ್ತು ಕ್ರಿಯೆಗಳ ಮಧ್ಯೆ ದುರ್ಬಲ ವರ್ಗ ಸಿಕ್ಕಿ ಅಸಹಾಯಕರಾಗಿ ಕೊನೆ ಉಸಿರೆಳೆಯುವುದನ್ನು ಪರತನ ಪಾತ್ರದ ಮೂಲಕ ಅತ್ಯಂತ ಮಾರ್ಮಿಕವಾಗಿ ಚಿತ್ರಿಸಿದ್ದಾರೆ. 'ಚಂಡಮಾರುತ' ಮತ್ತು 'ಸಂಸ್ಕಾರ'ದಂತಹ ಕಥೆಗಳಲ್ಲಿಯೂ ಸಹ ಮಾನವೀಯತೆ ಎಂಬುದು ಕನಿಷ್ಠ ಮೌಲ್ಯಗಳು ಸವೆದು ಹೋಗಿರುವುದನ್ನು ಕಾಣಬಹುದಾಗಿದೆ. 'ಗರ್ಭ', 'ಬೆದೆ' ಮತ್ತು 'ಬಲಿ'ಯಂತಹ ಕತೆಗಳು ಕುಂ.ವೀ. ಅವರ ಜಾಣ ರಚನೆಗಳು. ಈ ಕತೆಗಳ ಕಥಾವಸ್ತು ಜಾಳುಜಾಳಾಗಿ ನಿಲ್ಲುತ್ತದೆ. ಆದರೆ ಇವರ ಭಾಷೆಯ ಕಸುವು ಪ್ರಾದೇಶಿಕ ನುಡಿಗಟ್ಟನ್ನು

ಸೂಕ್ತವಾಗಿ ಬಳಸುವ ಕ್ರಮದಿಂದ ಇವರ ಸಾಧಾರಣ ಕತೆಗಳು ಕೂಡ ಓದುಗರನ್ನು ಆಸಕ್ತರಾಗುವಂತೆ ಮಾಡುತ್ತವೆ.

ಕುಂ.ವೀ. ಅವರ ಕತೆಗಳ ವೈಶಿಷ್ಟ್ಯವೆಂದರೆ ಅವು ಒಳಗೊಳ್ಳುವ ಮಧ್ಯಮವರ್ಗದ ಓದುಗರಿಗೆ ಅಷ್ಟಾಗಿ ಪರಿಚಯವಲ್ಲದ ಅವರನ್ನು ಬೆಚ್ಚಿ ಬೀಳಿಸಬಲ್ಲ ಕೆಳವರ್ಗದ ಜೀವಪ್ರಪಂಚ ಇದರಲ್ಲಿ ಬಳ್ಳಾರಿ ಜಿಲ್ಲೆಯ ಕೊಟ್ಟೂರು ಪ್ರದೇಶದ ದೇಶಿ ನುಡಿಗಟ್ಟನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಕೆಳವರ್ಗದ ಸ್ಥಿತಿಯ ದಾಖಲಾತಿ ಮಾತ್ರ ಅವರ ಉದ್ದೇಶವಲ್ಲ. ಬದಲಿಗೆ ಅದು ಬದಲಾಗುವ ಸೂಚನೆಯನ್ನು ಅವರು ಕೊಡುತ್ತಾರೆ. ಇವರ ಕತೆಗಳ ಕೆಲವು ಮುಖ್ಯ ಪಾತ್ರಗಳಾದ ಡೋಮ, ಉಪ್ಪಳಿ, ಎಲುಗ, ಶೊಣ್ಣಿ, ಕಿವುಡ ಮುಂತಾದ ವಿಲಕ್ಷಣ ವ್ಯಕ್ತಿಗಳು ಮಾತ್ರ ಉಳಿಯದೆ ಒಂದು ವರ್ಗದ ನೋವು ನಲಿವುಗಳನ್ನು, ದುಃಖದುಮ್ಮಾನಗಳನ್ನು, ಕನಸುಗಳನ್ನು ಸಾಂಕೇತಿಸುವ ಸಾಂಸ್ಕೃತಿಕ ಶಕ್ತಿಗಳಾಗುತ್ತವೆ. ಇವರ ಇನ್ನೊಂದು ವಿಶೇಷವೇನೆಂದರೆ ಕೆಳವರ್ಗದ ಭೀಕರ ಬಡತನ ಮತ್ತು ಆ ಬಡತನದಿಂದಾಗುವ ಅವಮಾನವನ್ನು ದಾಖಲಿಸುವಾಗ ಅವರು ಭಾವಾತಿರೇಕದ ಉರಿಯಲ್ಲಿ ಬೆಂದು ಹೋಗುವುದಿಲ್ಲ. ಆದರೆ ಆ ವರ್ಗದ ಪ್ರತಿಭಟನೆಯ ಧ್ವನಿ ಮಾತ್ರ ತುಂಬಾ ರೊಮ್ಯಾಂಟಿಕ್ ಆದ ರೀತಿಯಲ್ಲಿ ಪ್ರಕಟವಾಗುತ್ತದೆ. ಇವರ ಕತೆಗಳ ಮೂಲಕ ಶೂದ್ರರು ಮೈಕೊಡವಿಕೊಂಡು ಮೇಲೆ ಏಳುತ್ತಾರೆ ಎನ್ನುವ ಸೂಚನೆಯನ್ನು ಕೊಡುತ್ತಾರೆ.

ಕುಂ.ವೀ. ಅವರ 'ಶಾಮಣ್ಣ' ಕಾದಂಬರಿಯ ಮೊದಲ ಆಶ್ವಾಸದಲ್ಲಿ ಶಾಮಣ್ಣನ ಎಡಬಿಡಂಗಿ ತನವನ್ನು ಪ್ರಕಟಿಸಿದ್ದಾರೆ. ನಂತರ ಬ್ರಾಹ್ಮಣ ಸಮಾಜದ ರೀತಿ ನೀತಿಗಳನ್ನು ಹಾಸ್ಯ, ವ್ಯಂಗ್ಯ, ವಿಡಂಬನೆ ಶೈಲಿಯಲ್ಲಿ ಲೇಖಕರು ವರ್ಣಿಸುತ್ತಾರೆ. ಆದರೆ ಮುಂದಿನ ಆಶ್ವಾಸದಲ್ಲಿ ಈ ಕಥನವು ಸತ್ತುಹೋಗಿರುವ ಶಾಮಣ್ಣನನ್ನು ಸಾಕ್ಷಾತ್ಕಾರ ಮಾಡಿಸಲು ಹೊರಟ ಬರಹಗಾರನ ಪ್ರಯತ್ನವಾಗಿದೆ. ಕಾದಂಬರಿಯ ಕೇಂದ್ರಪಾತ್ರವಾಗಿರುವ ಶಾಮಣ್ಣ ತಾನೇ ಕತೆಗಾರ ಕುಂ.ವೀ.ಗೆ ತನ್ನ ಕತೆಯನ್ನು ಹೇಳಿಕೊಂಡಿರುವ ಆತ್ಮಕತೆಯಾಗಿದೆ. ಶಾಮಣ್ಣ ಎಲ್ಲರಿಗೂ ಒಂದು ಸವಾಲಾಗಿರುವಂತೆ ಬರಹಗಾರನಿಗೆ ಮತ್ತು ಕಥನಕ್ರಮಕ್ಕೆ ಒಂದು ಸವಾಲಾಗಿದ್ದಾನೆ. ಅದನ್ನು ಹಿಡಿಯಲು ಹೊರಟ ಕಥಾನಕವು ಹತ್ತಾರು ಸ್ವರೂಪಗಳನ್ನು ಪಡೆದುಕೊಳ್ಳುತ್ತದೆ. ಕುಂ.ವೀ. ಅವರು ಈ ಕೃತಿಯಲ್ಲಿ ತಾವು ದೂರದಿಂದ ನೋಡಿದ ಬ್ರಾಹ್ಮಣ ಸಮಾಜದ ಬಗ್ಗೆ ವಿವರಗಳನ್ನು ಅತ್ಯಂತ ಸಹಜ ಕರ್ಮಠ ಬ್ರಾಹ್ಮಣನೇ ನಿರೂಪಕನಾದಂತೆ ತೋರಿಸಿದ್ದಾರೆ. ಕೃತಿಯ ಎಪಿಕ್ ಮಾದರಿಯ ಮುಖ್ಯ ಗುಣವೆಂದರೆ ನಿರೂಪಣೆಯ ಹಿಂದಿರುವ ಜೀವನದೃಷ್ಟಿಯ ವೈಶಾಲ್ಯತೆ. ಅಂದರೆ ಬದುಕಿನ ದ್ವಂದ್ವಗಳನ್ನು, ವೈರುಧ್ಯಗಳನ್ನು ಅಣುಕುಮಹಾಕಾವ್ಯ ಶೈಲಿಯಲ್ಲಿ ನಿರೂಪಿಸಿದ್ದಾರೆ.

'ಶಾಮಣ್ಣ' ಕಾದಂಬರಿಯಲ್ಲಿ ಬರುವ ಯಾವುದೇ ಪಾತ್ರಗಳ ಬಗ್ಗೆ ಕವಿಗೆ ಆರಾದನೆ ಭಾವನೆ ಇಲ್ಲ. ಅವರು ಚಿತ್ರಿಸಿರುವ ದುರ್ಬಲರು, ಅಸಹಾಯಕರು, ಅಪೂರ್ಣರು, ರೋಗಿಷ್ಠರು ಹಾಗೂ ತಪ್ತರೂ ಆದ ಮನುಷ್ಯಜೀವಿಗಳೇ ಆಗಿದ್ದಾರೆ. ಆದರೆ ದೌರ್ಬಲ್ಯದಷ್ಟೇ ಸಹಜವಾದ ಮಾನವೀಯತೆ ಈ ಪಾತ್ರಗಳಿಗೆ ಶೋಭೆಯನ್ನು ತಂದುಕೊಟ್ಟದೆ. ಇದಕ್ಕೆ ಅನುಸೂಯಳ ಪಾತ್ರವೇ ಸಾಕ್ಷಿಯಾಗಿದೆ. ಇದೇ ರೀತಿ ಶಾಮಣ್ಣನೂ ಸೇರಿದಂತೆ ಕಾದಂಬರಿಯ ಅನೇಕ ಪಾತ್ರಗಳು ತಮಗೆ ಅರಿವಿಲ್ಲದ ಶಕ್ತಿಯೊಂದರ ಮೂಲಕ ಕೆಲವು ಕ್ಷಣಗಳಲ್ಲಾದರೂ ಬದುಕಿನ ಪರವಾದ ನಿರ್ಧಾರಗಳನ್ನು ಕೈಗೊಳ್ಳುತ್ತವೆ. ಇಂಥ ನಡವಳಿಕೆ ಕೃತಿಯಲ್ಲಿ ಅನಿರೀಕ್ಷಿತವಾಗಿರುತ್ತದೆ. ಇಷ್ಟೇ ಅನಿರೀಕ್ಷಿತವಾಗಿ ಅವು ವಿನಾಶಕಾರಿಯಾದ ಆತ್ಮವಂಚನೆಯ ಕೆಲಸಗಳನ್ನು ಮಾಡುತ್ತವೆ. ಈ ಎರಡೂ ಬಗೆಯ ನಡವಳಿಕೆಗಳನ್ನು ನಿರೂಪಕ ಸಮಚಿತ್ತದಿಂದ ನೋಡುತ್ತ, ಮನುಷ್ಯನ ಬಗ್ಗೆ ಆರೋಗ್ಯಕರವಾದ ಕುತೂಹಲವನ್ನು ಕೆರಳುವಂತೆ ಚಿತ್ರಿಸುತ್ತಾರೆ.

ಪುರುಷವರ್ಗ ಸ್ತ್ರೀಯರ ಮೇಲೆ ಶ್ರಮದ ಹಿನ್ನೆಲೆಯಲ್ಲಿ ಶೋಷಿಸುವುದಕ್ಕಿಂತ ಹೆಚ್ಚಾಗಿ ಭೋಗದ ವಸ್ತುವೆಂದು ಪರಿಗಣಿಸಿ ಶೋಷಿಸುವುದು ಕುಂ.ವೀ. ಅವರ ಕಥೆಗಳಲ್ಲಿ ಕಾಣುತ್ತೇವೆ. ಮೇಲ್ವರ್ಗದ ಸ್ತ್ರೀಯರು ಅಷ್ಟಾಗಿ ಶೋಷಣೆಗೆ ಒಳಗಾದ ಚಿತ್ರಣ ಇವರ ಸಾಹಿತ್ಯದಲ್ಲಿ ಕಾಣಸಿಗುವುದು ಅಪರೂಪ. ಕುಂ.ವೀ. ಅವರ ಕಥಾಸಾಹಿತ್ಯದಲ್ಲಿ ಪ್ರಧಾನ ಸಂಸ್ಕೃತಿಯ ಪ್ರಾತಿನಿಧಿಕ ಪಾತ್ರಗಳು ಮಾನವ ಸಹಜ ಪ್ರವೃತ್ತಿಯಿಂದ ಬಳಲುತ್ತವೆ. ಜಮೀನ್ದಾರನಾಗಲಿ, ಅಧಿಕಾರಿಯಾಗಲಿ ಪ್ರತಿಷ್ಠೆಗಾಗಿ, ಸ್ವಾರ್ಥಕ್ಕಾಗಿ ಸ್ತ್ರೀಯರನ್ನು ಶೋಷಣೆ ಮಾಡುತ್ತಾರೆ. ಒಂದು ವೇಳೆ ಇದರ ವಿರುದ್ಧ ಯಾರಾದರೂ ಧ್ವನಿ ಎತ್ತಿದರೆ ತಮ್ಮ ಹಣ ಮತ್ತು ಅಧಿಕಾರದ ಬಲದಿಂದ ಧ್ವನಿ ಅಡಗಿಸುವ ಶಕ್ತಿ ಅವರಲ್ಲಿದೆ. ಸ್ತ್ರೀಯಿಂದಲೇ ಸ್ತ್ರೀಶೋಷಣೆ ನಡೆಯುವುದು ಕೆಲವು ಕಥೆಗಳಲ್ಲಿ ಕಾಣಸಿಗುತ್ತವೆ.

ಜಾನಪದ ಮಹಾಕಾವ್ಯಗಳಾದ ಮಲೆಮಹದೇಶ್ವರ, ಮೈಲಾರಲಿಂಗ, ಪಲ್ನಾಟಿ ವೀರುಲುಕಥಾ ಇತ್ಯಾದಿ ಮೌಖಿಕ ಮಹಾಕಥನಗಳ ವ್ಯಾಪ್ತಿ ಮತ್ತು ಅವು ನಿರ್ವಹಿಸುವ ಕಾರ್ಯಗಳು ಅದ್ಭುತ. ಈ ಮಹಾಕಾವ್ಯಗಳಲ್ಲಿ ಆ ಸಮುದಾಯಗಳ ಜನಾಂಗಗಳ ಇತಿಹಾಸ, ಧಾರ್ಮಿಕ, ನೈತಿಕ ಸಂಹಿತೆ ಸಾಂಸ್ಕೃತಿಕ ದಾಖಲೆ ಮತ್ತು ಶೃಂಗಾರ ವೀರ ಕರುಣಾದಿ ರಸಗಳನೊಳಗೊಳ್ಳುವ ಸಾಹಿತ್ಯಕ ಕಥನಗಳಾಗಿವೆ. ಈ ಮಹಾಕಾವ್ಯಗಳಲ್ಲಿ ಮಾನವರು, ಪ್ರಾಣಿ ಪಕ್ಷಿಗಳು, ಅವರ ನೋವು, ನಲಿವು ಜಗತ್ತಿನ ಎಲ್ಲಾ ಸುಬದು ಬರ್ಗಾ ದಾಖಲಾತಿಯಂತಿರುವ ಈ ಮಹಾಕಾವ್ಯಗಳ ಮಾದರಿಯಲ್ಲಿ ಕುಂ.ವೀ. ಅವರ 'ಅರಮನೆ' ಎಂಬ ಮಹಾಕಥನ ಪ್ರಾರಂಭವಾಗುತ್ತದೆ. ಇದನ್ನು ಕುಂ.ವೀ. ಅವರು ಐತಿಹಾಸಿಕ, ಪೌರಾಣಿಕ, ಸಾಮಾಜಿಕ ಕಥಾನಕ ಎಂದು ಕರೆದಿರುವರು.

ಈ ಅರಮನೆ ಕಾವ್ಯದಲ್ಲಿ ಬ್ರಿಟಿಷ್ ರಾಜಸತ್ತೆ, ಪ್ರಭುಸತ್ತೆ ಮತ್ತು ಪ್ರಜಾಸತ್ತೆಯ ಚಿತ್ರಣ ಅನನ್ಯವಾಗಿ ಮೂಡಿಬಂದಿದೆ. ಒಂದು ಕಾಲಗಟ್ಟದ ಪಾಳೆಯಗಾರರ ಆಡಳಿತ ಬ್ರಿಟಿಷರ ನಡವಳಿಗಳು ಮತ್ತು ಇವೆರಡರ ನಡುವೆ ನಲುಗಿಹೋಗುವ ಜನ ಸಮುದಾಯದ ಚಿತ್ರಣದ ಜೊತೆಗೆ ಜನಪದ ಕಥನಕಾವ್ಯದ ಭಾಷಾಶೈಲಿಯಿಂದ ಅರಮನೆ ಕೃತಿ ಅನನ್ಯವಾಗಿದೆ.

**ಕೊನೆಟಿಪ್ಪಣಿ**

೧. ಗಿರಡ್ಡಿ ಗೋವಿಂದರಾಜ, ಸಮಗ್ರ ವಿಮರ್ಶೆ, ೨೦೦೧, ಸಪ್ನ ಬುಕ್‌ಹೌಸ್, ಬೆಂಗಳೂರು, ಪು. ೧೭೭.

೨. ಅಶೋಕ ಟಿ.ಪಿ., ಸಾಹಿತ್ಯ ಮತ್ತು ಸಮಾಜ, ೧೯೮೬, ಅಕ್ಷರ ಪ್ರಕಾಶನ. ಸಾಗರ, ಪು.೩೪೮.

೩. ಕುಂ.ವೀರಭದ್ರಪ್ಪ, ಬರಿ ಕಥೆಯಲ್ಲೋ ಅಣ್ಣ(ಸಮಗ್ರ ಕಥೆಗಳು), ೨೦೦೫, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು.

೪. ಅದೇ, ಪು. ೪೩೬

೫. ಅದೇ, ಪು. ೯೪೫

೬. ಅದೇ, ಪು. ೧

೭. ಅದೇ, ಪು. ೨೯೮

೮. ಅದೇ, ಪು. ೫೧

ಅಧ್ಯಾಯ ಎಂಟು

# ಉಪಸಂಹಾರ

**ಕುಂ**. ವೀರಭದ್ರಪ್ಪನವರಿಗೆ ಗ್ರಾಮೀಣ ಭಾಗದ ಜನರ ಬಗ್ಗೆ ಅಪಾರ ಒಲವು. ಅವರ ಬಹುಪಾಲು ಕತೆಗಳು ಗ್ರಾಮೀಣ ಜೀವನದ ಹಿನ್ನೆಲೆಯಲ್ಲಿ ಬಂದಂತಹವೇ ಆಗಿವೆ. ಗ್ರಾಮೀಣ ಭಾರತದ ಜನರ ಜೀವನದ ಸ್ಥಿತಿಗತಿಗಳನ್ನು ತಿಳಿಸುತ್ತಾ ಬದುಕಿಗಾಗಿ ಅವರು ನಡೆಸುವ ಹೋರಾಟದ ಚಿತ್ರಣವೇ ಅವರ ಬಹುಪಾಲು ಕಥೆಗಳ ಜೀವಾಳವಾಗಿದೆ. ಸಮಾಜದಲ್ಲಿ ಅಸಮಾನತೆಯನ್ನು ಹೋಗಲಾಡಿಸಿ ಸಮಸಮಾಜದ ನಿರ್ಮಾಣಕ್ಕೆ ಪ್ರಯತ್ನಿಸುವ, ಆ ಮೂಲಕ ಸಮಾಜವನ್ನು ಬದಲಾಯಿಸಲು ಒತ್ತಾಯಿಸುವ ಅವರ ನಿಲುವು ಅವರ ಎಲ್ಲಾ ಕಥೆಗಳಲ್ಲಿ ಕಾಣುವ ಸಮಾನ ಅಂಶವಾಗಿದೆ.

ಪ್ರಸ್ತುತ ಈ ಮಹಾಪ್ರಬಂಧದಲ್ಲಿ ಕುಂ.ವೀ. ಅವರ ಗದ್ಯಸಾಹಿತ್ಯವನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಅವರ ಕತೆಗಳು ಭಾರತದ ಮಾನವಿಕ ಶಾಸ್ತ್ರಗಳ ಅಧ್ಯಯನಗಳಲ್ಲಿ ಹೊಸ ಬೆಳಕನ್ನು ಚೆಲ್ಲುವಂತಹವಾಗಿವೆ. ಅಲ್ಪಸಂಖ್ಯಾತರು, ಮಹಿಳೆಯರು, ಕೆಳಜಾತಿಯ ಅಲಕ್ಷಿತರು ಇಪ್ಪತ್ತನೆಯ ಶತಮಾನದ ಅಧ್ಯಯನಗಳಲ್ಲಿ ಜಗತ್ತಿನೊಂದಿಗೆ ಸಂವಾದಿಸಿದ್ದಾರೆ. ವೈವಿಧ್ಯವೂ ಜೀವಪರವೂ ವಿಶಿಷ್ಟವೂ ಆದ ಜನಮುಖಿ ಸಮಷ್ಟಿಸಂಸ್ಕೃತಿ ಭಾರತದಲ್ಲಿ ಅನೇಕ ಸಮುದಾಯ ಗಳಲ್ಲಿದೆ ಎಂಬುದನ್ನು ಇವರ ಬಹುಪಾಲು ಕತೆಗಳು ತಿಳಿಸುತ್ತವೆ.

ಕುಂ.ವೀ. ಅವರ ಪ್ರಾರಂಭದ ಕತೆಗಳಲ್ಲಿ ಬರಗಾಲದಿಂದ ತತ್ತರಿಸಿದ ಜನರ ದಾರುಣ ಬದುಕಿನ ಚಿತ್ರಣವನ್ನು ಕಾಣಬಹುದು. ಎಪ್ಪತ್ತರ ದಶಕಗಳಲ್ಲಿ ಬಯಲುಸೀಮೆ ಹಾಗೂ ಹೈದರಾಬಾದ್ ಕರ್ನಾಟಕ ಭಾಗವಾದ ಬಳ್ಳಾರಿ ಭಾಗದಲ್ಲಿ ಬರಗಾಲ ಕಾಣಿಸಿಕೊಂಡು ಬಡವರು, ಕೆಳವರ್ಗದವರು ಹಸಿವಿನಿಂದ ತತ್ತರಿಸಿಹೋಗಿದ್ದಾರೆ. ಅನ್ನಕ್ಕಾಗಿ ಕೆಳವರ್ಗದ

ಜನರ ಕಟ್ಟುಪಾಡುಗಳನ್ನು ಮುರಿದು ಸಂಘರ್ಷಕ್ಕೆ ಇಳಿಯುವುದನ್ನು ಈ ಎಲ್ಲಾ ದಾರುಣ ಬದುಕಿನ ವಾಸ್ತವ ಚಿತ್ರಣಗಳನ್ನು ಕುಂ.ವೀ. ಅವರ ಕಥೆಗಳಲ್ಲಿ ಕಾಣಬಹುದಾಗಿದೆ. ಪ್ರಾರಂಭದ ಕತೆಗಳಾದ 'ದೇವರ ಹೆಣ', 'ಕಿವುಡ ನಾಯಿಯಾದ ಪ್ರಸಂಗ', ಕತ್ತಲನು ತ್ರಿಶೂಲ ಹಿಡಿದ ಕತೆ', 'ರತ್ನ ಎಂಬ ಹುಡುಗಿಯೂ ಯುಗಾದಿ ಎಂಬ ಹಬ್ಬವು' ಈ ಥರದ ಕತೆಗಳಲ್ಲಿ ಹಸಿವಿನ ದಾರುಣ ಚಿತ್ರಣವಿದೆ. ಎಪ್ಪತ್ತರ ದಶಕದ ಇತಿಹಾಸವನ್ನು, ಸಮಾಜಜೀವನವನ್ನು ಇವರ ಕತೆಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಬಹುದಾಗಿದೆ.

ಆಧುನಿಕ ಶಿಕ್ಷಣವ್ಯವಸ್ಥೆಗೆ ಒಳಗಾಗುವುದರಿಂದಲೇ ಕೆಳಜಾತಿಗಳು ಮತ್ತು ಕೆಳಸಮುದಾಯಗಳು ಹೊಸ ಬಗೆಯ ಎಚ್ಚರವನ್ನು ಪಡೆದಿವೆ. ತಮ್ಮ ಹಕ್ಕುಗಳನ್ನು ನೆನಪಿಸಿಕೊಂಡಿವೆ. ಹೋರಾಟದ ಹಾದಿಯನ್ನು ತುಳಿದಿವೆ. ಶಿಕ್ಷಣ, ತಿರಸ್ಕೃತ ಸಮಾಜಕ್ಕೆ ಒಂದು ದೊಡ್ಡ ಶಕ್ತಿಯನ್ನು ತಂದು ಕೊಡುತ್ತವೆ. ಆತ್ಮವಿಶ್ವಾಸವನ್ನು ತುಂಬುತ್ತವೆ. ತನ್ನ ಸುತ್ತಲಿರುವ ಸಂಸ್ಕೃತಿಯ ಮಿತಿಗಳನ್ನು ಮುರಿಯಲು, ಮೀರಲು ರೂಪಾಂತರಿಸಲು, ಪ್ರತಿ ಸೃಷ್ಟಿಸಲು ದಾರಿ ಮಾಡಿಕೊಡುತ್ತದೆ ಎಂಬುದನ್ನು ಕುಂ. ವೀರಭದ್ರಪ್ಪನವರ ಕಥೆಗಳಾದ 'ಕೊಟ್ರೇಶಿಯ ಕನಸು', 'ಯಾಪಿಲು' ಹಾಗೂ 'ಕುಬುಸ' ಕಥೆಯ 'ನೆಟಕಲ್ಲು' ಇವರುಗಳು ನಿರೂಪಿಸಿದ್ದಾರೆ.

ಕುಂ.ವೀ. ಅವರು ಲೋಹಿಯಾ, ಗಾಂಧಿ, ಅಂಬೇಡ್ಕರ್ ಮತ್ತು ಮಾರ್ಕ್ಸ್‌ವಾದದಿಂದ ಪ್ರಭಾವಿತವಾಗಿರುವುದರಿಂದ ಇವರ ಬಹುತೇಕ ಕತೆಗಳಲ್ಲಿ ಜಾತಿಸಂಘರ್ಷ, ವರ್ಗಸಂಘರ್ಷಗಳನ್ನು ಗುರುತಿಸಬಹುದಾಗಿದೆ. ಜಾತಿಸಂಘರ್ಷಕ್ಕೆ ಕಾರಣವಾದ ಹಸಿವು, ಆಸ್ತಿ, ಲೈಂಗಿಕತೆ, ಮೂಢನಂಬಿಕೆ, ವಿದ್ಯಾಭ್ಯಾಸ, ಶವಸಂಸ್ಕಾರ ಮೊದಲಾದ ವಿಚಾರಗಳನ್ನು ಕೆಳವರ್ಗಗಳು ಪ್ರಶ್ನಿಸಿದಾಗ ಎರಡು ಜಾತಿಯ ನಡುವೆ ಸಂಘರ್ಷಗಳು ಏರ್ಪಡುತ್ತವೆ. ಕೊನೆಗೆ ಸಾವಿನಲ್ಲೋ, ಪ್ರತಿಭಟನೆಯಲ್ಲೋ ಮುಕ್ತಾಯವಾಗುತ್ತವೆ. ಲೈಂಗಿಕತೆಗೆ ಸಂಬಂಧಿಸಿದಂತೆ ಎರಡು ಜಾತಿಗಳು ತಮ್ಮ ಚೌಕಟ್ಟನ್ನು ಮೀರಿ ವರ್ತಿಸಿರುವುದನ್ನು ಕಾಣಬಹುದಾಗಿದೆ. ಶೋಷಣೆಯ ವಿವರಗಳು ಅತಿರಂಜಿತವಾಗಿ ಚಿತ್ರಣಗೊಂಡಿವೆ. ಲೈಂಗಿಕ ವಿಕೃತಿಗಳು, ಹಿಂಸಾಕೃತ್ಯಗಳು, ಅತಿಯಾಗಿ ವರ್ಣನೆಗೊಂಡು ಚಲನಚಿತ್ರದ ಜನಪ್ರಿಯ ಮಾದರಿಯಂತಿವೆ. ಪ್ರಾರಂಭದ ಜಮೀನ್ದಾರಿ ಕತೆಗಳಲ್ಲಿ ನಕ್ಸಲೈಟ್ ಮಾದರಿಯ ಪ್ರತಿಭಟನೆಯನ್ನು ಕಂಡರೆ ನಂತರದ ಕಥೆಗಳಲ್ಲಿ ಸಮಾಧಾನ, ತಾಳ್ಮೆಯಿಂದ ಬದಲಾವಣೆಗೆ ಒತ್ತಾಯಿಸುವಂತೆ ವಾಸ್ತವತಾಮಾರ್ಗವನ್ನು ಅನುಸರಿಸುವುದನ್ನು ಕಾಣಬಹು ದಾಗಿದೆ. ಉಗ್ರ ಪ್ರತಿಭಟನೆಯಿಂದ ಬದಲಾವಣೆ ತರುವುದಕ್ಕಿಂತ ವ್ಯಕ್ತಿಯ ವ್ಯಕ್ತಿತ್ವದ ಬದಲಾವಣೆಯ ಮೂಲಕ ಉತ್ತಮ ಸಮಾಜ ನಿರ್ಮಾಣವಾಗುವುದು ಸಾಧ್ಯ ಎಂದು 'ಹತ್ಯೆ' ಕತೆಯ ಮೂಲಕ ಕಥೆಗಾರ ಅಭಿಪ್ರಾಯ ಪಡುತ್ತಾರೆ.

ಕುಂ.ವೀ. ಅವರ 'ನೆರಳು', 'ಕಥೆಗಾರ ಮಂಜಣ್ಣ' 'ಮೃತ್ಯು' ಕತೆಗಳಲ್ಲಿ ಬರಹಗಾರನ ಆತ್ಮವಿಮರ್ಶೆಯ ಚಿಂತನೆಯನ್ನು ಕಾಣಬಹುದಾಗಿದೆ.

ಕುಂ.ವೀ. ಅವರ ಕಾದಂಬರಿ ಸಾಹಿತ್ಯವು ಎಷ್ಟೋ ಬಾರಿ ಅವರ ಸಣ್ಣಕತೆಯೇ ಮುಂದುವರಿದು ಕಾದಂಬರಿಯಾಗಿ ರೂಪ ತಾಳಿವೆ. ಉದಾಹರಣೆ 'ಬೇಟೆ' ಕಥೆಯು ಮುಂದುವರಿದು 'ಮನಮೆಚ್ಚಿದ ಹುಡುಗಿ' ಕಾದಂಬರಿಯಾಗಿ ಚಲನಚಿತ್ರವಾಗಿ ಜನಮೆಚ್ಚಿಗೆ ಗಳಿಸಿದೆ. 'ಕೆಂಡದ ಮಳೆ ಕರೆವಲ್ಲಿ ಉದಕವಾದರು' ಕಥೆ ಮುಂದುವರಿದು 'ಕೆಂಡದ ಮಳೆ' ಕಾದಂಬರಿಯಾಗಿದೆ. ಹಾಗೆಯೇ 'ನಿಜಲಿಂಗ ಕತೆ' ಮುಂದುವರಿದು 'ನಿಜಲಿಂಗ' ಕಾದಂಬರಿಯಾಗಿದೆ. ಈ ರೀತಿಯ ಬದಲಾವಣೆ ಸಣ್ಣಕತೆಗಳ ಬೆಳವಣಿಗೆಗೆ ಅಡ್ಡಿ ಉಂಟು ಮಾಡುತ್ತವೆ. ಸಣ್ಣಕತೆಯ ಸ್ವರೂಪವೇ ಹಾಳುಕೆಡುವುತ್ತದೆ. ಈ ರೀತಿಯ ಬರವಣಿಗೆ ಸಣ್ಣಕತೆಯ ಸೂಕ್ಷ್ಮತೆಗೆ ಔಚಿತ್ಯಪ್ರಜ್ಞೆಗೆ ತೊಂದರೆಯನ್ನು ಉಂಟುಮಾಡುತ್ತದೆ.

ಕುಂ.ವೀ. ಅವರ ಬಹುತೇಕ ಕಥೆ, ಕಾದಂಬರಿಗಳಲ್ಲಿ ಮಧ್ಯಮವರ್ಗದ ವೀರಶೈವ ಹಾಗೂ ಒಕ್ಕಲಿಗ ಜಾತಿಗಳು ಕೆಳವರ್ಗದ ಜಾತಿಗಳ ಮೇಲೆ ನಡೆಸುವ ದೌರ್ಜನ್ಯಗಳನ್ನು ಕಾಣಬಹುದು. 'ಶಾಮಣ್ಣ' ಕಾದಂಬರಿ ಮಾತ್ರ ಇದಕ್ಕೆ ಹೊರತಾಗಿದೆ. 'ಶಾಮಣ್ಣ' ಕಾದಂಬರಿಯಲ್ಲಿ ಬ್ರಾಹ್ಮಣ ಸಮಾಜದ ಆಚಾರ ವಿಚಾರಗಳನ್ನು ಅದರಲ್ಲೂ ಕರ್ಮಠ ಬ್ರಾಹ್ಮಣರ ಮನೆಯ ರೀತಿ ನೀತಿಗಳನ್ನು ಕಟುವಾಗಿ ವಿಮರ್ಶಿಸಿ ವ್ಯಂಗ್ಯದ ಮೊನೆಯಿಂದ ಚುಚ್ಚಿದ್ದಾರೆ. ಕುಂ.ವೀ. ಅವರು ಈ ಕಾದಂಬರಿಯಲ್ಲಿ 'ಪರಂಪರೆ ಮತ್ತು ಆಧುನಿಕತೆ' ಎರಡರ ಮುಖಾಮುಖಿಯನ್ನು ಚಿತ್ರಿಸಿದ್ದಾರೆ.

ಕುಂ.ವೀ. ಅವರ ಸಾಹಿತ್ಯದಲ್ಲಿ ಜಮೀನ್ದಾರಿ ಮತ್ತು ಬಂಡವಾಳಶಾಹಿ ವರ್ತನೆಗಳು, ಅಧಿಕಾರಶಾಹಿ ಹಾಗೂ ರಾಜಕಾರಣಿಗಳ ಸ್ವಭಾವಗಳು ಶೋಷಣೆಯ ಪ್ರವೃತ್ತಿಯಿಂದ ಕೂಡಿವೆ. ಮೇಲುವರ್ಗದ ಎಲ್ಲಾ ಪಾತ್ರಗಳು ಶೋಷಕ ಪಾತ್ರಗಳಾಗಿ, ಕೆಳವರ್ಗದ ಎಲ್ಲಾ ಪಾತ್ರಗಳು ಶೋಷಿತ ಪಾತ್ರಗಳಾಗಿ ಪ್ರಾರಂಭದ ಇವರ ಕಥೆಗಳಲ್ಲಿ ಕಂಡುಬರುವುದು ಕತೆಗಾರರ ಮಿತಿಯೂ ಆಗಿದೆ. ಲೈಂಗಿಕತೆಯ ವಿವರಣೆಗಳು ಓದುಗರ ಕುತೂಹಲವನ್ನು ಕೆರಳಿಸುವ ಮತ್ತು ಆಕರ್ಷಿಸುವ ತಂತ್ರವಾಗಿದೆ.

ಅತ್ಯುತ್ತಮ ಸಾಹಿತ್ಯ ಕೃತಿಯೊಂದು ತನ್ನ ಕಾಲದ ಅತ್ಯುತ್ತಮ ಮಾನವೀಯ ಮೌಲ್ಯಗಳೊಡನೆ ಸಜೀವ ಸಂಬಂಧವನ್ನು ಇಟ್ಟುಕೊಂಡಿರುತ್ತದೆ. ಸಮಾಜಶಾಸ್ತ್ರೀಯ ದೃಷ್ಟಿಯಿಂದ ನಮ್ಮಲ್ಲಿ ಸಾಹಿತ್ಯ ಕೃತಿಗಳ ಅಧ್ಯಯನ ನಡೆದಿಲ್ಲ. ನಮ್ಮ ಪರಿಸರದಿಂದಲೇ ಹುಟ್ಟಿಬರುವ ಸಮಾಜಶಾಸ್ತ್ರೀಯ

ಮನಶ್ಶಾಸ್ತ್ರೀಯ ಸಾಹಿತ್ಯ ವಿಮರ್ಶೆ ಇಂದಿನ ಅಗತ್ಯವಾಗಿದೆ. ಪ್ರತಿಭಟನೆಯ ಸಾಹಿತ್ಯಕ್ಕೆ ಸಾಮಾಜಿಕ ವ್ಯವಸ್ಥೆಯನ್ನು ಆಮೂಲಾಗ್ರವಾಗಿ ಬದಲಾಯಿಸುವ ಕಳಕಳಿ ಇರುತ್ತದೆ. ಈ ಹಿನ್ನೆಲೆಯಲ್ಲಿ ಕುಂ.ವೀ. ಅವರ ಕಥೆಗಳು ಓದುಗರ ಸಂವೇದನೆಗಳನ್ನು ತೀಕ್ಷ್ಣಗೊಳಿಸುವ ಭಾಷೆಯ ಮೂಲಕ, ನಮ್ಮ ಮನೋಲೋಕದಲ್ಲಿ ಶಾಶ್ವತ ಸ್ಥಾನ ಗಳಿಸುವ ಪಾತ್ರಗಳ ಮೂಲಕ, ಮನುಷ್ಯ ಸಂಬಂಧದ ಒಳಪದರುಗಳನ್ನು ದರ್ಶನ ಮಾಡಿಸುವ ಸನ್ನಿವೇಶಗಳನ್ನು ಸೃಷ್ಟಿಸುವ ಮೂಲಕ ವಾಸ್ತವದ ಸಮಗ್ರ ಚಿತ್ರಣವನ್ನು ನಮ್ಮ ಮುಂದೆ ಇಡುತ್ತಾರೆ.

ಕುಂ.ವೀ. ಅವರು ಶ್ರೇಷ್ಠ ಕಥೆಗಾರರಂತೆಯೇ ಒಬ್ಬ ಸಮರ್ಥ ಅನುವಾದಕರೂ ಆಗಿದ್ದಾರೆ. ಈ ಅಧ್ಯಯನದಲ್ಲಿ ಅವರ ಸೃಜನಶೀಲ ಸಾಹಿತ್ಯದ ಜೊತೆಗೆ ಅವರ ಅನುವಾದ ಸಾಹಿತ್ಯವನ್ನು ಅಧ್ಯಯನಕ್ಕೆ ಒಳಪಡಿಸಿದೆ.

ಈ ಬಹುಭಾಷಾ ಜಗತ್ತಿನಲ್ಲಿ ಅನುವಾದಕರು ಇರದೆ ಹೋಗಿದ್ದರೆ ನಮಗೆ ಬೇರೆ ಭಾಷೆ, ಊರುಗಳು, ರಾಜ್ಯಗಳು ಪರಕೀಯವಾಗಿ ಉಳಿದುಬಿಡುತ್ತಿದ್ದವು. ಬೇರೆ ಪರಿಸರ, ಸಂಸ್ಕೃತಿ, ಸಂಪ್ರದಾಯ, ಪರಂಪರೆಯನ್ನು ಅರ್ಥ ಮಾಡಿಕೊಳ್ಳಲು ಅನುವಾದಗಳು ಮಹತ್ವದ ಪಾತ್ರವನ್ನು ವಹಿಸುತ್ತವೆ. ಈ ಹಿನ್ನೆಲೆಯಲ್ಲಿ ಕುಂ.ವೀ. ಅವರ ಅನುವಾದ ಕೃತಿಗಳಾದ 'ತೆಲುಗು ಕಥೆ', 'ಒಂದು ಪೀಳಿಗೆಯ ತೆಲುಗು ಕಥೆ' ಹಾಗೂ 'ಚಿನ್ನದ ತೆನೆ'ಗಳಲ್ಲಿ ಭೂಮಿಗೆ ಸಂಬಂಧಪಟ್ಟ ಕತೆಗಳಿವೆ. ಇವು ಭೂಮಿಗಾಗಿ ಬುಡಕಟ್ಟು ಜನರು ಹೋರಾಟ ಮಾಡುವ ಅಧಿಕಾರಿ ವರ್ಗ ಹಾಗೂ ಶ್ರೀಮಂತವರ್ಗಗಳೊಡನೆ ಹೋರಾಟಮಾಡುವ ಚಿತ್ರಣಗಳಿವೆ. ಪ್ರಾರಂಭದಲ್ಲಿ ಈ ಹೋರಾಟಗಳು ಉಗ್ರ ಸ್ವರೂಪ ತಾಳಿ ನಕ್ಸಲೈಟ್ ಮಾದರಿಯಲ್ಲಿ ಹೋರಾಟಗಳನ್ನು ಕೈಗೊಂಡರೂ ನಂತರ ಅವು ಚಳುವಳಿ ಮತ್ತು ಸಾಹಿತ್ಯ ಜೊತೆ ಜೊತೆಗೆ ಮೂಡಿಬಂದದ್ದು ವಿಶೇಷವಾಗಿದೆ. ಇಲ್ಲಿ ಎರಡು ರೀತಿಯ ಸಾಹಿತ್ಯವನ್ನು ಕಾಣಬಹುದು. ಒಂದು ಆಳುವ ವರ್ಗದ ಅಧೀನ ಸಂಸ್ಕೃತಿಯ ಸಾಹಿತ್ಯ; ಇದು ಅಧಿಕಾರ ವರ್ಗದ ಹಿತಾಸಕ್ತಿಗಳಿಗನುಗುಣವಾಗಿ ಕೆಲಸ ಮಾಡುತ್ತದೆ. ಎರಡನೆಯದು ಪ್ರಜೆಗಳ ಸಾಹಿತ್ಯ. ಇಲ್ಲಿ ಪ್ರಜೆ ಎಂದರೆ ಶ್ರಮಜೀವಿಗಳೆಂದೇ ಅರ್ಥ. ಈಗಲೂ ಸಾಹಿತ್ಯದ ಎರಡು ಭಿನ್ನ ರೂಪಗಳನ್ನು ಆಂಧ್ರಪ್ರದೇಶದಲ್ಲಿ ಕಾಣಬಹುದಾಗಿದೆ. ಅಧಿಕಾರ ವರ್ಗದ ಸಾಹಿತ್ಯ ಪುರಾಣೋಪನಿಷತ್ತು ಮತ್ತು ಮನೋರಂಜನೆಯೇ ಮುಖ್ಯವಾಗಿರುವಂತಹ ಸಾಹಿತ್ಯ, ಪ್ರಜೆಗಳ ಸಾಹಿತ್ಯಕ್ಕೆ ಮಾರ್ಕ್ಸ್, ಲೆನಿನ್, ಮಾವೋ ಸಿದ್ಧಾಂತಗಳು ಪೌಷ್ಟಿಕಾಂಶ ಒದಗಿಸುತ್ತವೆ. ಅನೇಕ ಚಳುವಳಿಗಳಿಗೆ ಹೋರಾಟಗಳಿಗೆ ಕುಮ್ಮಕ್ಕು ನೀಡುತ್ತಿವೆ. ಇಲ್ಲಿ ಸಾಮಾನ್ಯ ಜನ ತಮ್ಮವರ ನಿಲುವಿನ ಸಾಹಿತ್ಯಕ್ಕೆ ಸ್ಪಂದಿಸುವ ರೀತಿಯೇ ಅನನ್ಯವಾಗಿದೆ.

ಇಲ್ಲಿ ಕಥೆಯ ತಂತ್ರ ಮುಖ್ಯವಲ್ಲ. ಸಾಹಿತ್ಯ ಏನನ್ನು ಪ್ರತಿಪಾದಿಸುತ್ತಿದೆ? ಅದು ನೆಲಕ್ಕೆ ಎಷ್ಟು ಹತ್ತಿರವಾಗಿದೆ ಎಂಬುದು ಮುಖ್ಯ. ಆಂಧ್ರಪ್ರದೇಶ ಪ್ರಧಾನವಾಗಿ ಕೃಷಿ ಅವಲಂಬಿತ ರಾಜ್ಯವಾಗಿರುವುದರಿಂದ ನೆಲ ಕೃಷಿಕರು ಹಾಗೂ ಕಾರ್ಮಿಕರ ಆಶೋತ್ತರಗಳಿಗೆ ಸ್ಪಂದಿಸುವುದೇ ತೆಲುಗು ಕಥಾಸಾಹಿತ್ಯದ ಪ್ರಧಾನ ಆಶಯವಾಗಿದೆ. ಈ ಹಿನ್ನೆಲೆಯಲ್ಲಿ ಈ ಕಥೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಅನುಬಂಧ – ೧

## ಮೂಲ ಆಕರಗಳು

### ಕುಂ. ವೀರಭದ್ರಪ್ಪನವರ ಕೃತಿಗಳು ಹಾಗೂ ಪ್ರಶಸ್ತಿಗಳು

**ಅ. ಕವನ ಸಂಕಲನ**

೧. ನೀನಿಲ್ಲದ ಮನೆ,

೨. ದಿವಿಸೀಮೆಯ ಹಾಡು, ಮಾಮರ ಪ್ರಕಾಶನ, ಬೆಂಗಳೂರು, ೧೯೭೯.

**ಆ. ಕಥಾಸಂಕಲನಗಳು**

೧. ಕುಂ.ವೀ. ಕತೆಗಳು(ಕ.ವಿ.ವಿ. ಆಯ್ದ ಪಠ್ಯ), ಸಾಹಿತ್ಯ ಭಂಡಾರ, ಹುಬ್ಬಳ್ಳಿ, ೧೯೮೫.

೨. ಭಗವತಿ ಕಾಡು, ಕಲ್ಯಾಣಿ ಪ್ರಕಾಶನ, ಬೆಂಗಳೂರು, ೧೯೯೦.

೩. ಇನ್ನಾದರೂ ಸಾಯಬೇಕು, ಯುವಕರ ಸಂಘ, ಹಗರಿಬೊಮ್ಮನಹಳ್ಳಿ, ೧೯೮೩.

೪. ನಿಜಲಿಂಗ, ಯುವಕರ ಸಂಘ, ಹಗರಿಬೊಮ್ಮನಹಳ್ಳಿ, ೧೯೯೩.

೫. ಅಪೂರ್ವ ಚಿಂತಾಮಣಿ ಕಥೆ, ಹಳೆ ವಿದ್ಯಾರ್ಥಿಗಳ ಸಂಘ, ಸಿರಿಗೆರೆ, ೧೯೯೫.

೬. ಡೋಮ ಮತ್ತಿತರ ಕಥೆಗಳು, ಅನನ್ಯ ಪ್ರಕಾಶನ, ಧಾರವಾಡ, ೧೯೮೩.

೭. ಕುಂ.ವೀ. ಆಯ್ದ ಕಥೆಗಳು, ಅನನ್ಯ ಪ್ರಕಾಶನ, ಧಾರವಾಡ ೧೯೮೯. (ಗುಲಬರ್ಗಾ ವಿಶ್ವವಿದ್ಯಾಲಯ, ಪಠ್ಯ)

೮. ಕುಂ.ವೀ. ಕಥೆಗಳು(ಆಯ್ದ), ಸಂವಹನ ಪ್ರಕಾಶನ, ಮೈಸೂರು, ೧೯೯೪. (ಮೈಸೂರು, ವಿಶ್ವವಿದ್ಯಾಲಯ, ಪಠ್ಯ)

೯. ಭಳಾರೆ ವಿಚಿತ್ರಂ, ಮನೋಹರ ಗ್ರಂಥಮಾಲೆ, ಧಾರವಾಡ, ೨೦೦೩.

೧೦. ಬರಿ ಕಥೆಯಲ್ಲೋ ಅಣ್ಣಾ(ಸಮಗ್ರ ಕಥೆಗಳು), ಸಿ.ವಿ.ಜಿ. ಪಬ್ಲಿಕೇಶನ್ಸ್, ಬೆಂಗಳೂರು, ೨೦೦೫.

೧೧. ಸುಶೀಲ ಎಂಬ ನಾಯಿಯೂ ವಾಗಲಿ ಎಂಬ ಗ್ರಾಮವೂ, ಮಾ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್ ಬೆಂಗಳೂರು, ೧೯೯೫.

**ಇ. ಕಾದಂಬರಿಗಳು**

೧. ಹನುಮ, ಹೇಮಂತ ಸಾಹಿತ್ಯ, ಬೆಂಗಳೂರು, ೧೯೯೬.

೨. ಕೆಂಡದ ಮಳೆ, ಭಾಗ್ಯಲಕ್ಷ್ಮೀ ಪ್ರಕಾಶನ, ಬೆಂಗಳೂರು, ೧೯೮೬.

೩. ಆಸ್ತಿ, ಬಾಪ್ಕೊ ಪ್ರಕಾಶನ, ಬೆಂಗಳೂರು, ೧೯೮೩.

೪. ಬೇಲಿಯ ಹೂಗಳು, ಹೇಮಂತ ಸಾಹಿತ್ಯ, ಬೆಂಗಳೂರು, ೧೯೮೭.

೫. ಯಾಪಿಲ್ಲು, ಅಂಕಿತ ಪುಸ್ತಕ, ಬೆಂಗಳೂರು, ೨೦೦೧.

೬. ಪ್ರತಿದ್ವಂದಿ, ಹೇಮಂತ ಸಾಹಿತ್ಯ, ಬೆಂಗಳೂರು, ೧೯೮೯.

೭. ಕೊಟ್ರ ಹೈಸ್ಕೂಲಿಗೆ ಸೇರಿದ್ದು, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು, ೧೯೯೩.

೮. ಪ್ರೇಮವೆಂಬ ಹೊನ್ನುಡಿ, ಹೇಮಂತ ಸಾಹಿತ್ಯ, ಬೆಂಗಳೂರು, ೧೯೮೯.

೯. ಕಪ್ಪು, ಸಂವಹನ ಪ್ರಕಾಶನ, ಮೈಸೂರು, ೧೯೯೮.

೧೦. ಮನ ಮೆಚ್ಚಿದ ಹುಡುಗಿ, ಹೇಮಂತ ಸಾಹಿತ್ಯ, ಬೆಂಗಳೂರು, ೧೯೮೭.

೧೧. ಶಾಮಣ್ಣ, ಲೋಹಿಯಾ ಪ್ರಕಾಶನ, ಬಳ್ಳಾರಿ, ೧೯೯೮.

೧೨. ಪಕ್ಷಿಗಳು, ಸಾಹಿತ್ಯ ಭಂಡಾರ, ಹುಬ್ಬಳ್ಳಿ, ೧೯೮೭.

೧೩. ಬೇಲಿ ಮತ್ತು ಹೊಲ, ಭಾಗ್ಯಲಕ್ಷ್ಮೀ ಪ್ರಕಾಶನ, ಬೆಂಗಳೂರು, ೧೯೮೩.

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೦.

೧೪. ಅರಮನೆ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೫.

೧೫. ನಿಜಲಿಂಗ, ಅನುಪಮ ಪ್ರಕಾಶನ, ಅಥಣಿ, ೨೦೧೬.

**ಈ. ಜೀವನಚರಿತ್ರೆ**

೧. ಶ್ರೀಕೃಷ್ಣ ದೇವರಾಯ : ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೨. ಸುಭಾಶ್ ಚಂದ್ರ ಬೋಸ್ : ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೦

೩. ಸುಭದ್ರಮ್ಮ ಮನ್ಸೂರು : ಕರ್ನಾಟಕ ನಾಟಕ ಅಕಾಡೆಮಿ, ಬೆಂಗಳೂರು ೨೦೦೦

೪. ರಾಹುಲ ಸಾಂಕೃತ್ಯಾಯನ : ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ೧೯೯೪

೫. ಚಾರ್ಲಿ ಚಾಪ್ಲಿನ್ : ಕಾಮಧೇನು ಪ್ರಕಾಶನ, ಬೆಂಗಳೂರು,

**ಉ. ವಿಮರ್ಶೆ/ಲೇಖನಗಳು**

| | | |
|---|---|---|
| ೧. | ವಡ್ಡಾರಾಧನೆ: ನನ್ನ ಓದು, | ವಡ್ಡಾರಾಧನೆ: ಸಾಂಸ್ಕೃತಿಕ ಮುಖಾಮುಖಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧. |
| ೨. | ನವ್ಯರನ್ನು ಕುರಿತು ನವ್ಯೋತ್ತರದ ನನ್ನ ಕೆಲನಿಸಿಕೆಗಳು, | (ನಿಜಲಿಂಗ ಕಥಾಸಂಕಲನ): ಯುವಕರ ಸಂಘ, ಹಗರಿಬೊಮ್ಮನಹಳ್ಳಿ, ೧೯೯೩. |
| ೩. | ಇಂಡಿಯಾದ ಇಷ್ಟದೇವತೆಗಳು, | ಸಂಕ್ರಮಣ ಸಾಹಿತ್ಯ(ಸಂ–೩) ಭಾನಗಡಿ ಸಂಕ್ರಮಣ ಪ್ರಕಾಶನ, ಧಾರವಾಡ, ೧೯೯೪. |
| ೪. | ನಾನು ಮತ್ತು ನನ್ನ ಕಥಾ ಸಾಹಿತ್ಯ, | ಕಥನ ಕಲೆಯ ನೆಲೆಗಳು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೦. |
| ೫. | ನಾನು ಕಂಡುಂಡ ವಿಮರ್ಶೆ, | ಸಂಕ್ರಮಣ (ಸಂ–೩೨ ಸಂ–೯, ೬) ಎಂಬುದು ಸಂಕ್ರಮಣ ಪ್ರಕಾಶನ, ಬೆಂಗಳೂರು, ೧೯೯೭. |
| ೬. | ಜಮೀನ್ದಾರಿ ವ್ಯವಸ್ಥೆ ಮತ್ತು ತೆಲುಗು ಸಾಹಿತ್ಯ, | ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೩. |
| ೭. | ನನ್ನನ್ನು ಲೇಖಕನಾಗಿ ರೂಪಿಸಿದ ಪರಿಸರ, | ಕನ್ನಡ ಸಾಹಿತ್ಯ ಮೀಮಾಂಸೆ (ಸಂ–೧), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧. |
| ೮. | ಆಧುನಿಕ ತೆಲುಗು ಸಾಹಿತ್ಯದಲ್ಲಿ ಜನಪರ ಆಶಯ | ದ್ರಾವಿಡ ಭಾಷಾ ಸಾಹಿತ್ಯದಲ್ಲಿ ಜನಪರ ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೦. |

**ಊ. ಅನುವಾದ**

| | | |
|---|---|---|
| ೧. | ಹೊಸ ತೆಮಾರಿನ ತೆಲುಗು ಕಥೆಗಳು | ಕೇಂದ್ರ ಸಾಹಿತ್ಯ ಅಕಾಡೆಮಿ, ದೆಹಲಿ, ೨೦೦೧. |
| ೨. | ತೆಲುಗು ಕಥೆ | ಮೂಲ: ರಾಮಲಿಂಗಂ(ಸಂ), ಕೇಂದ್ರ ಸಾಹಿತ್ಯ ಅಕಾಡೆಮಿ, ನವದೆಹಲಿ, ೧೯೯೮. |

**ಋ. ಸಂಪಾದನೆ**

| | | |
|---|---|---|
| ೧. | ಕಥೆಗಳು, | ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೮. |

**ೠ. ಆತ್ಮಚರಿತ್ರೆ**

| | | |
|---|---|---|
| ೧. | ಗಾಂಧಿ ಕ್ಲಾಸು, | ಸಪ್ನ ಬುಕ್ ಹೌಸ್ ಬೆಂಗಳೂರು, ೨೦೧೦ |

ಎ. **ಪ್ರಶಸ್ತಿಗಳು/ಗೌರವಗಳು**

| | | |
|---|---|---|
| ೧. | ಕೊಟ್ರ ಹೈಸ್ಕೂಲಿಗೆ ಸೇರಿದ್ದು, | ರಾಜ್ಯ ಸರ್ಕಾರದ ವಿಶೇಷ ಪ್ರಶಸ್ತಿ, ರತ್ನಾಕರ ಮುದ್ದಣ ವಿಶೇಷ ಪ್ರಶಸ್ತಿ, ೧೯೯೩. |
| ೨. | ಬೇಲಿ ಮತ್ತು ಹೊಲ. | ವರ್ಧಮಾನ ಉದಯೋನ್ಮುಖ ಪ್ರಶಸ್ತಿ ವಿಜೇತ ಕೃತಿ, ೧೯೮೮. |
| ೩. | ಕಪ್ಪು, | ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ವಿಜೇತ ಕೃತಿ, ೧೯೮೩. |
| ೪. | ಭವಗತಿ ಕಾಡು, | ಮುದ್ದಣ ರತ್ನಕರವರ್ಣಿ ಪ್ರಶಸ್ತಿ ವಿಜೇತ ಕೃತಿ ೧೯೯೧. |
| ೫. | ಡೋಮ ಮತ್ತಿತರ ಕಥೆಗಳು, | ವಸುದೇವ ಭೂಪಾಲಂ ಪ್ರಶಸ್ತಿ ವಿಜೇತ ಕೃತಿ, ೧೯೮೮. |
| ೬. | ಅರಮನೆ, | ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ೨೦೦೭. |
| ೭. | ಭಳಾರೆ ವಿಚಿತ್ರಂ, | ಲಂಕೇಶ ಪ್ರಶಸ್ತಿ, ೨೦೦೩. |
| ೮. | ಶಾಮಣ್ಣ, | ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೯, ಸಾರಂಗ ಮಠ ಪ್ರಶಸ್ತಿ, ೧೯೯೯. |
| ೯. | ಸುಶೀಲೆ ಎಂಬ ನಾಯಿಯೂ, ವಾಗಿಲಿ ಎಂಬ ಗ್ರಾಮವೂ, ಕಥಾಸಂಕಲನ | ಆರ್ಯಭಟ ಪ್ರಶಸ್ತಿ, ೧೯೯೫. |
| ೧೦. | ಶಾಮಣ್ಣ, | ಕರ್ನಾಟಕ ಸಾಹಿತ್ಯ ಅಕಾಡೆಮಿ, ಗೊರೂರು ಪ್ರತಿಷ್ಠಾನ ಪ್ರಶಸ್ತಿ, ೧೯೯೯. |
| ೧೧. | ಗೌರವ ಡಾಕ್ಟರೇಟ್, | ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೨-೨-೨೦೧೧. |

ಅನುಬಂಧ–೨

## ಪರಾಮರ್ಶನ ಗ್ರಂಥಗಳು

**ಕೃತಿಗಳು**

೧. ಅನಂತಮೂರ್ತಿ ಯು.ಆರ್., ೧೯೭೬, ಪ್ರಜ್ಞೆ ಮತ್ತು ಪರಿಸರ, ಅಕ್ಷರ ಪ್ರಕಾಶನ, ಸಾಗರ.

೨. ಅನಂತಮೂರ್ತಿ ಯು.ಆರ್., ೧೯೮೦, ಸಮಕ್ಷಮ, ಅನನ್ಯ ಪ್ರಕಾಶನ, ಮೈಸೂರು.

೩. ಅವಧಾನಿ ಜಿ.ಎಸ್.(ಸಂ), ೧೯೯೨, ಸಾಹಿತ್ಯ ವಿಮರ್ಶೆ–೧೯೯೧, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪. ಅಶೋಕ ಟಿ.ಪಿ., ೧೯೮೬, ಸಾಹಿತ್ಯ ಸಂಪರ್ಕ, ಅಕ್ಷರ ಪ್ರಕಾಶನ, ಸಾಗರ.

೫. ಅಶೋಕ ಟಿ.ಪಿ., ೧೯೮೬, ಸಾಹಿತ್ಯ ಮತ್ತು ಸಮಾಜ, ಅಕ್ಷರ ಪ್ರಕಾಶನ, ಸಾಗರ.

೬. ಆಮೂರ ಜಿ.ಎಸ್., ೧೯೯೪, ಕನ್ನಡ ಕಥನ ಸಾಹಿತ್ಯ ಕಾದಂಬರಿ, ಶ್ರೀಹರಿ ಪ್ರಕಾಶನ, ಧಾರವಾಡ.

೭. ಆಮೂರ ಜಿ.ಎಸ್., ೧೯೮೮, ಅರ್ಥಲೋಕ, ಸ್ನೇಹ ಪ್ರಕಾಶನ, ಸಾಗರ.

೮. ಆಮೂರ ಜಿ.ಎಸ್., ೧೯೮೧, ಸಮಕಾಲೀನ ಕಥೆ ಕಾದಂಬರಿ ಹೊಸ ಪ್ರಯೋಗಗಳು, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳುರು.

೯. ಕರೀಗೌಡ ಬೀಚನಹಳ್ಳಿ, ೧೯೯೫, ಕನ್ನಡ ಕಥನ ಕಲೆಯ ನೆಲೆಗಳು, ಕರ್ನಾಟಕ ನೀರಮಾನ್ವಿ ರಾಜಶೇಖರ(ಸಂ), ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೦. ಕರೀಗೌಡ ಬೀಚನಹಳ್ಳಿ(ಸಂ), ಕನ್ನಡ ವಾರ್ಷಿಕ, ೧೯೯೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೧೧. ಕರೀಗೌಡ ಬೀಚನಹಳ್ಳಿ, ೨೦೦೭, ವೃಷ್ಟಿ ಸಮಷ್ಟಿ, ಅಜಂತಾ ಪ್ರಕಾಶನ, ಬೆಂಗಳೂರು.

೧೨. ಕರಿಗೌಡ ಬೀಚನಹಳ್ಳಿ(ಸಂ), ೨೦೦೯, ಭಾಷಾಂತರದ ಸಾಂಸ್ಕೃತಿಕ ನೆಲೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೧೩. ಕರೀಗೌಡ ಬೀಚನಹಳ್ಳಿ, ೨೦೧೧. ಶತಮಾನದ ಸಣ್ಣ ಕಥೆಗಳ ಸಮೀಕ್ಷೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೩.

೧೪. ಕೃಷ್ಣಮೂರ್ತಿ ಕಿತ್ತೂರ, ೧೯೭೮, ಗಳನಾಥರು ಮತ್ತು ಅವರ ಕಾದಂಬರಿಗಳು ಕರ್ನಾಟಕ ವಿಶ್ವವಿದ್ಯಾಲಯಲ, ಧಾರವಾಡ.

೧೫. ಕುಂ. ವೀರಭದ್ರಪ್ಪ, ೧೯೯೨, ಇನ್ನಾದರು ಸಾಯಬೇಕು, ಯುವಕ ಸಂಘ, ರಾಮನಗರ, ಹಗರಿಬೊಮ್ಮನಹಳ್ಳಿ.

೧೬. ಕುಂ. ವೀರಭದ್ರಪ್ಪ, ಕಪ್ಪು ನೆಲದಲ್ಲೊಂದು ಕೆಂಪು ಕಥೆ,

೧೭. ಕುಂ. ವೀರಭದ್ರಪ್ಪ(ಅನು), ವಿ. ರಾಮಲಿಂಗಂ (ಮೂ), ೨೦೦೧, ಒಂದು ಪೀಳಿಗೆಯ ತೆಲುಗು ಕಥೆಗಳು, ಸಾಹಿತ್ಯ ಅಕಾಡೆಮಿ.

೧೮. ಕುಂ. ವೀರಭದ್ರಪ್ಪ, ಬೆಂಗಳೂರು, ೨೦೦೪.

೧೯. ಕುಂ. ವೀರಭದ್ರಪ್ಪ, ೧೯೮೫, ಡೋಮ ಮತ್ತಿತ್ತರ ಕತೆಗಳು, ಅನನ್ಯ ಪ್ರಕಾಶನ ಶ್ರೀದೇವಿ ನಗರ, ಧಾರವಾಡ.

೨೦. ಕುಂ. ವೀರಭದ್ರ (ಅನು), ೨೦೧೦, ಚಿನ್ನದ ತೆನೆ, ಸಾಹಿತ್ಯ ಅಕಾಡೆಮಿ.

೨೧. ಕುಲಕರ್ಣಿ ರಾ.ವಿ. ಮತ್ತು ಹರಿಕೃಷ್ಣ ಸದಾಶಿವ, ೧೯೮೯, ಸಂಶೋಧನಾ ವಿಧಾನ, ಪ್ರಭಸ ಬಿಡುಗಡೆ ಭರಣ್ಯ, ಮಧುರೈ,

೨೨. ಕುರ್ತಕೋಟಿ ಕೀರ್ತಿನಾಥ, ೧೯೮೩, ಯುಗಧರ್ಮ ಮತ್ತು ಸಾಹಿತ್ಯ ದರ್ಶನ, ಕನ್ನಡ ಮತ್ತು ಸಂಸ್ಕೃತಿ ಇಲಾಕೆ, ಬೆಂಗಳೂರು

೨೩. ಕೃಷ್ಣಮೂರ್ತಿ ಎಂ.ಜಿ., ೧೯೭೦, ಆಧುನಿಕ ಸಾಹಿತ್ಯ ಮತ್ತು ಇತರ ಲೇಖನಗಳು ಅಕ್ಷರ ಪ್ರಕಾಶನ, ಸಾಗರ,

೨೪. ಕೃಷ್ಣಕುಮಾರ ಸಿ.ಪಿ. (ಸಂ), ೧೯೮೩, ಸಾಹಿತ್ಯ ವಿಮರ್ಶೆ, ೧೯೮೦, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳುರು.

೨೫. ಕೇಶವ ಶರ್ಮ ಕೆ., ೧೯೯೦, ನವೋದಯ ವಿಮರ್ಶೆ, ತಾತ್ವಿಕ ನಿಲುವುಗಳು ಜನವಾದಿ ಪ್ರಕಾಶನ, ಗುಂಡ್ಮಿ,

೨೬. ಕೋಡಿರಾಂಪುರ ರಂಗಾರೆಡ್ಡಿ, ೧೯೮೫, ಕಮಲಾಭಿನಂದನ, ಕಮಲಾ ಹಂಪನಾ ನಾಯಕ ಬೆನಕನಹಳ್ಳಿ, ಜಿ. ಅಭಿನಂದನಾ ಸಮಿತಿ, ಬೆಂಗಳೂರು.

೨೭. ಕೋದಂಡರಾಮ ಎನ್.ಕೆ., ೧೯೯೬, ಕನ್ನಡ ಕಥಾಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ, ಗಾಯತ್ರಿ ಸ್ಮಾರಕ ಗ್ರಂಥಮಾಲೆ, ಮೈಸೂರು,

೨೮. ಗಂಗಾಧರ ಮೊದಲಿಯಾರ್, ೧೯೮೦, ಬಂಡಾಯ ಸಾಹಿತ್ಯ ನೆಲೆ-ಬೆಲೆ, ಪುಸ್ತಕ ಚಿಲುಮೆ, ಮೈಸೂರು.

೨೯. ಗಿರಡ್ಡಿ ಗೋವಿಂದರಾಜ, ೧೯೭೫, ನವ್ಯ ವಿಮರ್ಶೆ, ಅಕ್ಷರ ಪ್ರಕಾಶನ, ಸಾಗರ.

೩೦. ಗಿರಡ್ಡಿ ಗೋವಿಂದರಾಜ, ೧೯೮೨, ಕಾದಂಬರಿ; ವಸ್ತು ತಂತ್ರ, ಸ್ನೇಹ ಪ್ರಕಾಶನ, ಬೆಂಗಳೂರು.

೩೧. ಗಿರಡ್ಡಿ ಗೋವಿಂದರಾಜ, ೧೯೭೮, 'ಸಣ್ಣಕತೆಯ ಹೊಸ ಒಲವುಗಳು' ಸಾಹಿತ್ಯ ಭಂಡಾರ, ಹುಬ್ಬಳ್ಳಿ.

೩೨. ಗೋಕಾಕ್ ವಿ.ಕೃ., ೧೯೮೮, ಸಾಹಿತ್ಯ ವಿಮರ್ಶೆಯ ಕೆಲವು ತತ್ವಗಳು ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೩೩. ಜವರಯ್ಯ ಮ.ನ., ೧೯೯೮, ಪರಂಪರೆ ಹಾಗೂ ದಲಿತ ಬಂಡಾಯ ಸಾಹಿತ್ಯ ಸಮಗ್ರ ಅಧ್ಯಯನ, ಸಿದ್ದಾರ್ಥ ಗ್ರಂಥಮಾಲೆ, ಮೈಸೂರು.

೩೪. ಜವರೇಗೌಡ ದೇ., ೧೯೭೮, ಗದ್ಯಶೈಲಿ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು.

೩೫. ಜವರೇಗೌಡ ದೇ., ೧೯೭೮, ಕಟ್ಟೀಮನಿ ಬದುಕು-ಬರಹ, ಗೀತಾ ಬುಕ್ ಹೌಸ್, ಮೈಸೂರು.

೩೬. ಜವರೇಗೌಡ ದೇ., ೧೯೭೬, ಏಳು ಸೀಳು, ಸಹ್ಯಾದ್ರಿ ಪ್ರಕಾಶನ, ಮೈಸೂರು.

೩೭. ತಿಪ್ಪೇರುದ್ರಸ್ವಾಮಿ ಹೆಚ್., ೧೯೭೮, ಕನ್ನಡ ವಿಮರ್ಶೆ ಕವಲು ದಾರಿಯಲ್ಲಿ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೩೮. ತಿಪ್ಪೇರುದ್ರಸ್ವಾಮಿ ಹೆಚ್., ೧೯೭೯, ಸಾಹಿತ್ಯ ಮತ್ತು ಸಮಕಾಲೀನ ವಾಸ್ತವಿಕತೆ, ಚಾಮುಂಡಿ ಎಂಟರ್ ಪ್ರೈಸಸ್, ಮೈಸೂರು

೩೯. ದೇಸಾಯಿ ಶಾಂತಿನಾಥ, ೧೯೮೯, ಕನ್ನಡ ಕಾದಂಬರಿ ನಡೆದು ಬಂದ ರೀತಿ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೪೦. ದೊಡ್ಡಮನಿ ಜೆ.ಪಿ., ೧೯೯೬, ಶರಣರ ಕುರಿತ ಕನ್ನಡ ಕಾದಂಬರಿಗಳು, ಚಿತ್ತರಗಿ ಶ್ರೀ ವಿಜಯ ಮಹಾಂತೇಶ ಮಠ, ಇಳಕಲ್.

೪೧. ಧಾರವಾಡಕರ ರಾ.ಯ., ೧೯೭೫, ಹೊಸಗನ್ನಡ ಸಾಹಿತ್ಯದ ಉದಯಕಾಲ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ,

೪೨. ನರಹಳ್ಳಿ ಬಾಲಸುಬ್ರಮಣ್ಯ, ೧೯೮೧, ಸಾಹಿತ್ಯ ವಿಮರ್ಶೆ, ೧೯೮೨, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೩. ನಾಗಭೂಷಣಸ್ವಾಮಿ ಓ.ಎಲ್., ೧೯೮೫, ವಿಮರ್ಶೆಯ ಪರಿಭಾಷೆ, ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ.

೪೪. ನಾಗಭೂಣಸ್ವಾಮಿ ಓ.ಎಲ್.(ಸಂ), ೧೯೯೨, ಸಾಹಿತ್ಯ ವಿಮರ್ಶೆ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೫. ನಾಯಕ ಹಾ.ಮಾ.(ಸಂ.), ೧೯೭೪, ಚಿನ್ನದ ಗರಿ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೪೬. ನಾಯಕ ಹಾ.ಮಾ., ೧೯೭೫, ಬಸವ ಪರುಷ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೪೭. ನಾರಾಯಣ ಕೆ.ವಿ.(ಸಂ), ೧೯೯೫, ಕನ್ನಡ ಶೈಲಿ ಕೈಪಿಡಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೪೮. ನಾರಾಯಣ ಕೆ.ವಿ., ಶೈಲಿಶಾಸ್ತ್ರ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೯. ನಾರಾಯಣ ಕೆ.ವಿ.(ಸಂ), ೧೯೮೯, ಸಾಹಿತ್ಯ ವಿಮರ್ಶೆ–೧೯೮೧, ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು.

೫೦. ನಿಸಾರ್ ಅಹಮದ್ ಕೆ.ಎಸ್.(ಸಂ), ೧೯೮೬, ದಶವಾರ್ಷಿಕ ವಿಮರ್ಶೆಗಳು, ೧೯೭೪–೮೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೧. ಚಂದ್ರಶೇಖರ ಪಾಟೀಲ, ೧೯೯೪, ಸಂಕ್ರಮಣ ಸಂ–೩, ಸಂಕ್ರಮಣ ಪ್ರಕಾಶನ, ಧಾರವಾಡ.

೫೨. ಪುರುಷೋತ್ತಮ ಬಿಳಿಮಲೆ, ೧೯೮೯, ಬಂಡಾಯ–ದಲಿತ ಸಾಹಿತ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೩. ಬರಗೂರು ರಾಮಚಂದ್ರಪ್ಪ, ೧೯೯೧, ಬಂಡಾಯ ಸಾಹಿತ್ಯ ಮೀಮಾಂಸೆ, ಅನ್ವೇಷನೆ ಪ್ರಕಾಶನ, ಬೆಂಗಳೂರು.

೫೪. ಬರಗೂರು ರಾಮಚಂದ್ರಪ್ಪ(ಸಂ), ೧೯೯೩, ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕೃತಿ, ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೫. ಬರಗೂರು ರಾಮಚಂದ್ರಪ್ಪ,(ಸಂ), ೧೯೯೩, ಕನ್ನಡ ಸಾಹಿತ್ಯದಲ್ಲಿ ನೋವಿನ ನೆಲೆಗಳು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೬. ಬರಗೂರು ರಾಮಚಂದ್ರಪ್ಪ,(ಸಂ), ೧೯೯೩, ಕನ್ನಡ ಸಾಹಿತ್ಯ ಮತ್ತು ಪ್ರಭುತ್ವ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೭. ಬಸವಯ್ಯ ಹಿ.ಮ.(ಸಂ), ೧೯೭೩, ಗುಂಪು(ಬಳ್ಳಾರಿ ಜಿಲ್ಲೆಯ ಕವಿಗಳು), ವಿಜಯನಗರ ಪ್ರಿಂಟರ್ಸ್, ಬೆಂಗಳೂರು.

೭೮. ಬಸವರಾಜ ಸಬರದ, ೧೯೯೨, ಬಂಡಾಯ ಸಾಹಿತ್ಯದ ತಾತ್ವಿಕ ನೆಲೆಗಳು; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೭೯. ಬಸವರಾಜ ಸಬರದ, ೨೦೦೧, ಬಂಡಾಯ ಸಾಹಿತ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೬೦. ಬೆಳಗಲಿ ದು.ನಿಂ., ೧೯೭೫, ಕನ್ನಡದಲ್ಲಿ ಕಾದಂಬರಿ ಸಾಹಿತ್ಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೬೧. ಭಗವಾನ್ (ಸಂ), ೧೯೮೬, ಸಾಹಿತ್ಯ ವಿಮರ್ಶೆ, ೧೯೮೫, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೬೨. ಮಹೇಶವಾಡಿ ಬಿ.ಬಿ., ೧೯೭೫, ಕನ್ನಡ ಕಥಾ ಸೃಷ್ಟಿ; ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೬೩. ರಂಗರಾಜ ವನದುರ್ಗ (ಸಂ), ೨೦೦೨, ಬಂಡಾಯ ಸಾಹಿತ್ಯ ಸಂವೇದನೆ, ಕನಕ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು.

೬೪. ರಾಘವೇಂದ್ರರಾವ್ ಎಚ್.ಎಸ್., ೧೯೮೯, ನಿಲುವು, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು.

೬೫. ರಾಮಚಂದ್ರನ್ ಸಿ.ಎನ್.(ಸಂ), ೧೯೯೦, ಸಾಹಿತ್ಯ ವಿಮರ್ಶೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೬೬. ಲಕ್ಕಪ್ಪಗೌಡ ಎಚ್.ಜೆ., ೧೯೭೬, ಅಂತರಂಗ, ಪ್ರತಿಭಾ ಪ್ರಕಾಶನ, ಮೈಸೂರು.

೬೭. ಶಿವರುದ್ರಪ್ಪ ಜಿ.ಎಸ್.(ಸಂ), ೧೯೭೫, ಕನ್ನಡ ವಿಮರ್ಶೆಯ ನೆಲೆ–ಬೆಲೆ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೬೮. ಶಿವರುದ್ರಪ್ಪ ಜಿ.ಎಸ್., ೧೯೯೬, ಸಮಗ್ರ ಗದ್ಯ ನಂ.೩, ಕಾಮಧೇನು, ಬೆಂಗಳೂರು.

೬೯. ಶಿವರುದ್ರಪ್ಪ ಜಿ.ಎಸ್., ೧೯೭೬, ನವೋದಯ ಶರತ್ ಪ್ರಕಾಶನ, ಮೈಸೂರು.

೭೦. ಶಿವರುದ್ರಪ್ಪ ಜಿ.ಎಸ್.(ಸಂ), ೧೯೮೧, ಸಾಹಿತ್ಯ ಮತ್ತು ಸಾಮಾಜಿಕ ಮೌಲ್ಯಗಳು, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೭೧. ಶಿವರುದ್ರಪ್ಪ ಜಿ.ಎಸ್., ೧೯೭೬, ನವೋದಯ, ಶರತ್ ಪ್ರಕಾಶನ, ಮೈಸೂರು.

೭೨. ಶಿವರುದ್ರಪ್ಪ ಜಿ.ಎಸ್.(ಸಂ), ೧೯೭೬, ಸಾಹಿತ್ಯ ವಾರ್ಷಿಕ–೧೯೮೧, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೭೩. ಶಿವರುದ್ರಪ್ಪ ಜಿ.ಎಸ್.(ಸಂ), ೧೯೮೨, ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ,(ಸಂ.೫) ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೭೪. ಶಿವರುದ್ರಪ್ಪ ಜಿ.ಎಸ್.(ಸಂ), ೧೯೮೮, ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೭೫. ಶೇಷಗಿರಿರಾವ್ ಎಲ್.ಎಸ್., ೧೯೭೫, ಹೊಸಗನ್ನಡ ಸಾಹಿತ್ಯ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೭೬. ಶೇಷಗಿರಿರಾವ್ ಎಲ್.ಎಸ್.(ಸಂ), ೧೯೯೩, ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ, ಉದಯಭಾನು ಕಲಾ ಸಂಘ, ಬೆಂಗಳೂರು.

೭೭. ಸಂಗಮೇಶ ಸವದತ್ತಿಮಠ, ೧೯೯೪, ಸಾಹಿತ್ಯ ಸಂಶೋಧನಾ ಮಾರ್ಗ, ರೂಪದರ್ಶಿ ಪ್ರಕಾಶನ, ಕಲಬುರ್ಗಿ.

೭೮. ಸೀತಾರಾಮಯ್ಯ ವಿ.(ಸಂ), ಸಾಹಿತ್ಯಲೋಕ, ಗೀತಾ ಬುಕ್ ಹೌಸ್, ಮೈಸೂರು.

೭೯. ಹನುಮಂತಯ್ಯ ವಿ., ೧೯೯೨, ದಲಿತ ಲೋಕದ ಒಳಗೆ, ಕರ್ನಾಟಕ ದಲಿತ ಪ್ರಕಾಶನ, ಬೆಂಗಳೂರು.

**ಸಂಪ್ರಬಂಧ/ಮಹಾಪ್ರಬಂಧಗಳು**

೧. ಅಮೃತೇಶ್ವರ ಜಿ., ೨೦೦೧, ಕುಂ.ವೀ. ಕಥಾಸಾಹಿತ್ಯ, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ.

೨. ನಾಗಭೂಷಣ ಎಚ್.ಎಲ್., ೨೦೦೮, ಕುಂ.ವೀ. ಅವರ ಆಯ್ದ ಕಥೆಗಳು: ಒಂದು ಅಧ್ಯಯನ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಅಪ್ರಕಟಿತ ಎಂ.ಫಿಲ್. ಸಂಪ್ರಬಂಧ.

೩. ನಾಲತವಾಡ ಎನ್.ಎಸ್., ೧೯೯೬, ಕುವೆಂಪು ಕಾದಂಬರಿಗಳಲ್ಲಿ ಸ್ತ್ರೀವಾದಿ ಚಿಂತನೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೪. ಪವಾರ ಎನ್.ವಿ., ೧೯೯೪, ಕನ್ನಡ ಕಾದಂಬರಿಗಳಲ್ಲಿ ದಲಿತ ಪ್ರಜ್ಞೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫. ಪ್ರಹ್ಲಾದ ಅಗಸನಕಟ್ಟೆ, ೨೦೦೪, ದಲಿತ–ಬಂಡಾಯ ಕಾವ್ಯ ಮತ್ತು ವಿಚಾರವಾದಗಳು, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ.

P.T.O

೬. ಮಲ್ಲಿಕಾ ಘಂಟಿ, ಕನ್ನಡದಲ್ಲಿ ಮಹಿಳಾ ಕಥಾಸಾಹಿತ್ಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೭. ಮಲ್ಲಿಕಾರ್ಜುನ ಕೆ., ಕುಂ.ವೀ. ೨೦೦೧, ಕಾದಂಬರಿಗಳ ಒಂದು ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೮. ಮೊಗಲಿ ನೀಲಮ್ಮ ಎಚ್., ೨೦೦೦, ಆನಂದ ಕಂದರ ಕಾದಂಬರಿಗಳು: ಒಂದು ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೯. ವಿಜಯಶ್ರೀ ಸಬರದ, ೧೯೯೪, ಅನುಪಮಾ ನಿರಂಜನ ಅವರ ಕಾದಂಬರಿಗಳು: ಒಂದು ಸಾಹಿತ್ಯಿಕ ಅಧ್ಯಯನ, ಡಿ.ವಿ.ಕೆ ಮೂರ್ತಿ, ಮೈಸೂರು.

೧೦. ವೃಷಭೇಂದ್ರಾಚಾರ್ ಅರ್ಕಸಾಲಿ, ೧೯೯೦, ಸ್ವಾತಂತ್ರ್ಯೋತ್ತರ ಕನ್ನಡ ಹಾಗೂ ತೆಲುಗು ಕಾವ್ಯಗಳಲ್ಲಿ ಸಾಮಾಜಿಕ ಪ್ರಜ್ಞೆ, ಗುಲಬರ್ಗಾ ವಿಶ್ವವಿದ್ಯಾಲಯ.

**ಪತ್ರಿಕೆಗಳು**

೧. ಕೃಷ್ಣಮೂರ್ತಿ ಹನೂರು, ಪ್ರಜಾವಾಣಿ, ದಿನಪತ್ರಿಕೆ, ೧೫.೧.೨೦೦೬.

೨. ನೀಲಾ ಪಾಟೀಲ (ಸಂ), ಸಂಕ್ರಮಣ ಸಂ–೨೭, ಸಂಚಿಕೆ–೧, ಸಂಕ್ರಮಣ ಪ್ರಕಾಶನ, ಧಾರವಾಡ, ಜನವರಿ, ೧೯೯೩.

೩. ನೀಲಾ ಪಾಟೀಲ(ಸಂ), ಸಂಕ್ರಮಣ ಸಂ–೩ ಸಂಚಿಕೆ–೧, ಸಂಕ್ರಮಣ ಪ್ರಕಾಶನ, ಧಾರವಾಡ, ಜನವರಿ, ೧೯೯೬.

೪. ನೀಲಾ ಪಾಟೀಲ(ಸಂ), ಸಂಕ್ರಮಣ ಸಂ–೩೧, ಸಂಚಿಕೆ–೧, ಸಂಕ್ರಮಣ ಪ್ರಕಾಶನ, ಧಾರವಾಡ, ಜನವರಿ, ೧೯೯೬.

೫. ಬಾಷಾ ಸಾಹೇಬ ಎಚ್., ಸಂಯುಕ್ತ ಕರ್ನಾಟಕ, ದಿನಪತ್ರಿಕೆ, ೧೪.೪.೨೦೦೨.

೬. ಮರುಳಸಿದ್ಧಪ್ಪ ಕೆ., ಮಯೂರ ಪತ್ರಿಕೆ, ಬೆಂಗಳೂರು ೧೯೮೮.

೭. ರಾಮಚಂದ್ರನ್. ಸಿ.ಎನ್., ಪ್ರಜಾವಾಣಿ, ದಿನಪತ್ರಿಕೆ, ೬.೨.೨೦೦೬.

೮. ಶಿವಪ್ರಕಾಶ ಎಚ್.ವಿ., ಕನ್ನಡಪ್ರಭ, ದಿನಪತ್ರಿಕೆ, ೧೫.೫.೧೯೮೮೪.

೯. ಶ್ರೀನಿವಾಸ ಎಚ್.ವಿ., ಪ್ರಜಾವಾಣಿ, ದಿನಪತ್ರಿಕೆ, ೨೧.೭.೧೯೯೧.

